# ಕನ್ನಡ ಕಲಿಕೆಯ ಸಮಸ್ಯೆಗಳು : ಒಂದು ಅಧ್ಯಯನ

## (ಬಳ್ಳಾರಿ ಜಿಲ್ಲೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳನ್ನು ಅನುಲಕ್ಷಿಸಿ)

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ







ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೦

# ಕನ್ನಡ ಕಲಿಕೆಯ ಸಮಸ್ಯೆಗಳು : ಒಂದು ಅಧ್ಯಯನ

## (ಬಳ್ಳಾರಿ ಜಿಲ್ಲೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳನ್ನು ಅನುಲಕ್ಷಿಸಿ)

**ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ**


ಸಂ. ನಾಗರಾಜ ಚಿತ್ರಪಲ್ಲಿ
ಮಾ. ಪಾಂಡುರಂಗ ಬಾಬು






ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೦

## ಕನ್ನಡ ಕಲಿಕೆಯ ಸಮಸ್ಯೆಗಳು – ಒಂದು ಅಧ್ಯಯನ
## (ಬಳ್ಳಾರಿ ಜಿಲ್ಲೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳನ್ನು ಅನುಲಕ್ಷಿಸಿ)

# ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವಿಧಾನ

**ಪ್ರಸ್ತಾವನೆ:**

ಭಾಷೆ ಮತ್ತು ಮಾನವನ ಸಂಬಂಧಗಳು ತುಂಬಾ ಅನ್ಯೋನ್ಯವಾಗಿವೆ. ಮನುಷ್ಯರ ನಡುವೆ ಸಂಪರ್ಕವನ್ನುಂಟು ಮಾಡಿ ಮಾನವ ಸಂಬಂಧಗಳನ್ನು ಬೆಳೆಸಿರುವ ಭಾಷೆಯು, ಮನುಷ್ಯನಿಗೆ ತನ್ನ ಉಸಿರಿನಷ್ಟೇ ಸಹಜ ಹಾಗೂ ಅನಿವಾರ್ಯ. ಮಾನವ ಮತ್ತು ಭಾಷೆ ಇವೆರಡನ್ನು ದೂರ ಮಾಡುವುದು ಸಾಧ್ಯವೇ ಇಲ್ಲ. ಮನುಷ್ಯ ತನ್ನ ಬುದ್ಧಿವಂತಿಕೆಯಿಂದ ಭಾಷೆಯನ್ನು ಸೃಷ್ಟಿಸಿ ಬೆಳೆಸಿದ ನಂತರ ಭಾಷೆಯು ಮನುಷ್ಯನನ್ನು ವಿಚಾರವಂತನನ್ನಾಗಿ ಮಾಡಿತು. ಮನುಷ್ಯ ಸಾವನ್ನಪ್ಪಿದಾಗ ಅವನ ಜೊತೆಗೆ ಭಾಷೆಯೂ ಸಾಯುತ್ತದೆ. ಭಾಷೆಯನ್ನು ಕಲಿಯದ ಮನುಷ್ಯ ಬದುಕಿದ್ದರೂ ಸಾಯುತ್ತಾನೆ. ಮಾನವ ಜನಾಂಗವನ್ನು ಇತರೆ ಪ್ರಾಣಿಗಳಿಂದ ಬೇರ್ಪಡಿಸಿರುವ ಪ್ರಮುಖ ಸಾಧನವೆಂದರೆ ಭಾಷೆ. ಭಾಷೆ ಇಲ್ಲದ ಪ್ರಪಂಚವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಒಂದು ಕ್ಷಣ ಜಗತ್ತಿನಲ್ಲಿ ಭಾಷೆಯೇ ಇಲ್ಲ ಎಂದು ನಾವು ಕಲ್ಪಿಸಿಕೊಂಡರೆ ಭಾಷೆಯ ಮಹತ್ವ ಗೊತ್ತಾಗುತ್ತದೆ. ಆದ್ದರಿಂದ ಭಾಷೆಯ ಕಲಿಕೆ ಮನುಷ್ಯನಿಗೆ ಅತ್ಯಾವಶ್ಯಕವಾಗಿದೆ.

ಮಂಗನಂತೆ ಇದ್ದ ಆದಿಮಾನವ ತನ್ನ ಯೋಚನಾಶಕ್ತಿಯಿಂದ ಕ್ರಮೇಣ ವಿಕಾಸವಾಗುತ್ತಾ ಇಂದು ವೈಜ್ಞಾನಿಕವಾಗಿ ಏನೆಲ್ಲಾ ಅಭಿವೃದ್ಧಿ ಕಂಡುಕೊಂಡಿದ್ದಾನೆ ಎಂಬುದರ ಹಿಂದಿನ ಪ್ರಬಲ ಶಕ್ತಿಯೆಂದರೆ ಭಾಷೆ. ಈ ಭಾಷಾ ಪ್ರಕ್ರಿಯೆಯಲ್ಲಿ ಮೊದಲು ಸಂಜ್ಞೆ ನಂತರ ಮಾತು, ಮಾತಿನ ನಂತರ ಬರಹವನ್ನು ರೂಢಿಸಿಕೊಳ್ಳಲಾಯಿತು. ಹೀಗೆ ಭಾಷೆಯು ದಿನದಿಂದ ದಿನಕ್ಕೆ ಬೆಳವಣಿಗೆ

ಹೊಂದುತ್ತಾ ಹೋಗುತ್ತಿರುವುದಕ್ಕೆ ಕಾರಣ ಮನುಷ್ಯನಲ್ಲಿ ಇರುವ ತಿಳಿಯುವ ಹಾಗೂ ಕಲಿಯುವ ಮನೋಭಾವ. ಹೀಗಾಗಿ ಮನುಷ್ಯ ಸದಾ ಏನ್ನನ್ನಾದರೂ ಕಲಿಯುತ್ತಲೆ ಇರುತ್ತಾನೆ.

"ನಾನು ಕಲಿಯದೇ ಇರುತ್ತೇನೆ ಎನ್ನುವುದು

ನಾನು ಉಸಿರಾಡದೇ ಇರುತ್ತೇನೆ, ಬದುಕುತ್ತೇನೆ ಎಂದಂತೆ."

ಈ ಮೇಲಿನ ಲೋಕೋಕ್ತಿಯನ್ನು ಗಮನಿಸಿದಾಗ ವ್ಯಕ್ತಿ ಅಥವಾ ಜೀವಿಯೊಂದು ಬದುಕಲು ಉಸಿರು ಎಷ್ಟು ಮುಖ್ಯವೋ, ಅನಿವಾರ್ಯವೋ, ಅನೈಚ್ಛಿಕವೋ ಅಷ್ಟೇ ಅನಿವಾರ್ಯ, ಮತ್ತು ಅನೈಚ್ಛಿಕ ಕ್ರಿಯೆ ಕಲಿಕೆಯಾಗಿದೆ. ಕಲಿಕೆಯು ಮನುಷ್ಯನ ಸಹಜ ಪ್ರವೃತ್ತಿಯಾಗಿರುವುದಲ್ಲದೇ ಐಚ್ಛಿಕವಾಗಿಯೋ, ಅನೈಚ್ಛಿಕವಾಗಿಯೋ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ, ವ್ಯಕ್ತಿಯ ಜನನದಿಂದ ಮರಣದವರೆಗೂ ಪ್ರತಿಕ್ಷಣದಲ್ಲಿಯೂ ನಡೆಯುತ್ತಲೆ ಇರುತ್ತದೆ. ಇದನ್ನು ತಡೆಯಲಾಗದು ಅದ್ದರಿಂದ ಕಲಿಕೆ ಎನ್ನುವುದು ಜೀವಿಯ ಜೀವನದ ಅವಿಭಾಜ್ಯ ಅಂಗ ಎನ್ನಲಾಗಿದೆ. ಸಾಮಾನ್ಯವಾಗಿ ಜೀವಿಯ ವರ್ತನೆಯಲ್ಲಿ ಆದ ವೈಜ್ಞಾನಿಕ ಬದಲಾವಣೆಯನ್ನು ಕಲಿಕೆ ಎನ್ನಲಾಗಿದೆ. ಕಲಿಕೆಯಲ್ಲಿ ಎರಡು ವಿಧಗಳನ್ನು ನೋಡಬಹುದು. ಒಂದು ವಿದ್ಯಾರ್ಥಿ–ಶಿಕ್ಷಕ–ಪಠ್ಯಕ್ರಮವನ್ನು ಒಳಗೊಂಡ ಸಂಕುಚಿತಾರ್ಥ ಶಿಕ್ಷಣ. ಎರಡು ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸಿ ಅವನ ಸರ್ವಾಂಗೀಣ ಅಭಿವೃದ್ಧಿಯನ್ನುಂಟು ಮಾಡುವ ವಿಶಾಲಾರ್ಥ ಶಿಕ್ಷಣ. ಹೀಗೆ ಕಲಿಕೆ ಎಂಬ ಪದವು ದಿನದಿಂದ ದಿನಕ್ಕೆ ಹೊಸಹೊಸ ಸ್ವರೂಪವನ್ನು ಪಡೆದು ವಿಶಾಲವಾದ ಅರ್ಥವನ್ನು ಪಡೆಯುತ್ತಲೆ ಸಾಗಿದೆ.

ವ್ಯಕ್ತಿಯು ಜನನದಿಂದ ಮರಣದ ವರೆಗೆ ಸದಾ ಏನ್ನಾನ್ನಾದರು ಕಲಿಯುತ್ತಲೆ ಇರುತ್ತಾನೆ. ಅಂತಹ ಕಲಿಕೆಯಲ್ಲಿ ಭಾಷಾ ಕಲಿಕೆಯು ಒಂದಾಗಿದೆ. ಭಾಷಾ ಕಲಿಕೆಯು ಇತರೆ ವಿಷಯಗಳ ಕಲಿಕೆಗಿಂತ ಭಿನ್ನ, ಸಂಕೀರ್ಣವಾಗಿರುವುದಲ್ಲದೇ ವೈಶಿಷ್ಟ್ಯತೆಯಿಂದ ಕೂಡಿರುತ್ತದೆ. ಏಕೆಂದರೆ ಭಾಷೆಯನ್ನು ಸಮರ್ಪಕವಾಗಿ ಕಲಿತ ನಂತರ ಮಗು ವಿಷಯಗಳನ್ನು ಕಲಿಯುತ್ತದೆ. ಆದ್ದರಿಂದ ಭಾಷಾ ಕಲಿಕೆಗೆ ವಿಶೇಷವಾದ ಮಹತ್ವವಿದೆ. ಇಂತಹ ಕಲಿಕೆಯು ಮುಂದಿನ ಶೈಕ್ಷಣಿಕ ಚಟುವಟಿಕೆಗಳಿಗೆ ದಾರಿದೀಪವಾಗುತ್ತದೆ. ಭಾಷಾ ಕಲಿಕೆ ಹಾಗೂ ಕಲಿಸುವಿಕೆಯು ಪ್ರಾಚೀನ ಕಾಲದಿಂದ ಇಂದಿನವರೆಗೂ ನಡೆಯುತ್ತಲೇ ಬಂದಿದೆ. ಅಲ್ಲದೆ ಈ ಭಾಷಾ ಕಲಿಕೆ ಹಾಗೂ ಕಲಿಸುವಿಕೆಯಲ್ಲಿ ಹಲವಾರು ಬದಲಾವಣೆಗಳು ಆಗುತ್ತಾ ಬಂದಿವೆ. ಸರ್ಕಾರ ಅಂದಿಗಿಂತ ಇಂದು ಭಾಷಾ ಕಲಿಕೆ ಹಾಗೂ ಕಲಿಸುವಿಕೆಗಾಗಿ ಹಲಾವಾರು ಹೊಸ ಹೊಸ ಯೋಜನೆಗಳನ್ನು ಜಾರಿಗೆ ತಂದಿದೆ, ಇನ್ನೂ ತರುತ್ತಲೇ ಇದೆ. ಅಂತಹ ಯೋಜನೆಗಳನ್ನು ಎರಡು ರೀತಿಯಲ್ಲಿ ನೋಡಬಹುದು. ಒಂದು ಮಕ್ಕಳನ್ನು ಕಲಿಕೆಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಲು, ಅವರ ಆಸಕ್ತಿ, ಅಭಿರುಚಿಯನ್ನೂ,

ಶಾಲೆ ಅಥವಾ ಪಾಠದ ಕಡೆ ಸೆಳೆಯಲು ಮಕ್ಕಳಿಗಾಗಿಯೇ ತಂದಿರುವ ಹಲವು ಯೋಜನೆಗಳಿವೆ. ಅವುಗಳಲ್ಲಿ ಮುಖ್ಯವಾಗಿ ಉಚಿತ ಹಾಗೂ ಕಡ್ಡಾಯ ಶಿಕ್ಷಣ, ಉಚಿತ ಪಠ್ಯಪುಸ್ತಕ, ಸಮವಸ್ತ್ರ, ಬ್ಯಾಗ್‌ಗಳನ್ನು ನೀಡುವುದು, ಶಿಷ್ಯವೇತನ, ಅಕ್ಷರದಾಸೋಹ, ಪ್ರತಿಭಾ ಪುರಸ್ಕಾರ, ಬೈಸಿಕಲ್ ವಿತರಣೆ, ಭಾಗ್ಯಲಕ್ಷ್ಮಿ ಯೋಜನೆ ಇತ್ಯಾದಿ. ಎರಡನೇಯದಾಗಿ ಶಿಕ್ಷಕರಿಗೂ ಸಹ ಹಲವಾರು ಸೌಲಭ್ಯಗಳನ್ನು ನೀಡಿ ಅವರು ಶೈಕ್ಷಣಿಕ ಚಟುವಟಿಕೆಯಲ್ಲಿ ಸಮರ್ಪಕವಾಗಿ ತೊಡಗಿಕೊಳ್ಳುವಂತೆ ಮಾಡಿದೆ.

ಇಷ್ಟೇ ಅಲ್ಲದೆ ಭಾಷಾ ಕಲಿಕೆ ಹಾಗೂ ಕಲಿಸುವಿಕೆಯನ್ನು ಗುಣಾತ್ಮಕ ಹಾಗೂ ಪರಿಣಾಮಕಾರಿಯಾಗಿಸಲು ಶಿಕ್ಷಕರಿಗೆ ಸೇವಾ ನಿರತ ಹಾಗೂ ಸೇವಾವಧಿ ತರಬೇತಿ ನೀಡಲಾಗುತ್ತದೆ. ಅಲ್ಲದೆ ಪಠ್ಯಕ್ರಮ ಬೋಧನಾವಿಧಾನ, ಕಲಿಸುವ ರೀತಿ ನೀತಿಗಳಲ್ಲಿ ಹಲವಾರು ಬದಲಾವಣೆಗಳನ್ನು ತರಲಾಗಿದೆ. ಪರಿಣಾಮಕಾರಿ ಕಲಿಕೆಗಾಗಿ ನಲಿ–ಕಲಿ, ಕಲಿ–ನಲಿ, ಕೇಳಿ–ಕಲಿ, ಚುಕ್ಕಿ ಚಿನ್ನ, ಚಿನ್ನರ ಚುಕ್ಕಿ, ಚಿನ್ನರ ಅಂಗಳ, ಚೈತನ್ಯ ಭಾಗ–೧, ೨, ಸಮುದಾಯದತ್ತ ಶಾಲೆ ಅಲ್ಲದೇ ಸರ್ವಶಿಕ್ಷಣ ಅಭಿಯಾನದಡಿಯಲ್ಲಿ ಹಲವಾರು ಕಾರ್ಯಕ್ರಮಗಳನ್ನು ಜಾರಿಗೆ ತರಲಾಗಿದೆ. ಅಂತಹ ಕಾರ್ಯಗಳಲ್ಲಿ ಇತ್ತೀಚಿಗೆ 'ಓದುವೆ ನಾನು" ಎಂಬ ಯೋಜನೆಯನ್ನು ತಂದಿದೆ. ಮಕ್ಕಳ ಕಲಿಕಾ ಮಟ್ಟವನ್ನು ತಿಳಿಯಲು ಹಾಗೂ ಮಕ್ಕಳ ಕಲಿಕೆಯನ್ನು ಮೌಲ್ಯಮಾಪನ ಮಾಡಲು ಹಿಂದಿಗಿಂತ ಇಂದು ಸರ್ಕಾರ ಹಲವಾರು ಯೋಜನೆಗಳನ್ನು ರೂಪಿಸಿದೆ. ಅವುಗಳಲ್ಲಿ ಮುಖ್ಯವಾಗಿ ಇತ್ತೀಚಿಗೆ "ಕರ್ನಾಟಕ ಶಿಕ್ಷಣದ ಗುಣಾತ್ಮಕ ಮೌಲ್ಯಾಂಕನ ಸಂಸ್ಥೆಯು" ಪ್ರತಿವರ್ಷ ವಿದ್ಯಾರ್ಥಿಗಳು ವಿಷಯವಾರು ಹಾಗೂ ಭಾಷಾಕಲಿಕೆಯಲ್ಲಿ ಗಳಿಸಿದ ಕಲಿಕೆಯ ಮಟ್ಟವನ್ನು ಗುಣಾತ್ಮಕ ಮೌಲ್ಯಮಾಪನ ಮಾಡುತ್ತದೆ. ಮಕ್ಕಳು ಯಾವ ವಿಷಯದಲ್ಲಿ ಯಾವ ರೀತಿಯಾದ ಸಮಸ್ಯೆಗಳನ್ನು ಎದುರಿಸುತ್ತಾರೆ ಎಂಬುದನ್ನು ತಿಳಿದು ಪರಿಹಾರ ಬೋಧನೆಯಡಿಯಲ್ಲಿ ಮಕ್ಕಳಿಗೆ ವಿಶೇಷವಾಗಿ ಕಲಿಸಲಾಗುತ್ತಿದೆ. ಹೀಗೆ ಸರ್ಕಾರ ಅಷ್ಟೆ ಅಲ್ಲ ಹಲವಾರು ಸಂಘ–ಸಂಸ್ಥೆಗಳು, ಸಂಪನ್ಮೂಲ ವ್ಯಕ್ತಿಗಳು ಸಹ ಹಲವಾರು ಕಾರ್ಯಕ್ರಮಗಳನ್ನು ರೂಪಿಸುತ್ತಿವೆ.

ಇಷ್ಟೆಲ್ಲಾ ಸೌಲಭ್ಯಗಳು, ಕಾರ್ಯಕ್ರಮಗಳು, ಯೋಜನೆಗಳು ಇದ್ದರೂ ಸಹ ಮಕ್ಕಳ ಕಲಿಕೆಯಲ್ಲಿ ತೃಪ್ತಿಕರ ಕಲಿಕೆಯನ್ನು ಸಾಧಿಸಲು ಆಗುತ್ತಿಲ್ಲ. ಅಲ್ಲದೆ ಭಾಷಾ ಕಲಿಕೆ ಹಾಗೂ ಕಲಿಸುವಿಕೆಯಲ್ಲಿನ ಸಮಸ್ಯೆಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಇವೆ. ಕಲಿಯುವ ಸಮಸ್ಯೆಗಳಿಗಿಂತ ಕಲಿಸುವ ಸಮಸ್ಯೆಗಳನ್ನು ಮೊದಲು ನಿವಾರಣೆ ಮಾಡಬೇಕು. ಇಲ್ಲದಿದ್ದರೇ ಕಲಿಯುವ ಸಮಸ್ಯೆಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಹೋಗುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಕಲಿಯುವಾಗ ಉಂಟಾಗುವ

ಸಮಸ್ಯೆಗಳಾವುವು ಅದರಲ್ಲಿಯೂ ಮಾತೃಭಾಷೆ ಕಲಿಯುವಾಗ ಉಂಟಾಗುವ ಸಮಸ್ಯೆಗಳಾವುವು? ಎಂಬುದರ ಕಡೆ ಹೆಚ್ಚು ಒತ್ತನ್ನು ನೀಡಲಾಗಿದೆ.

ಮಾತೃಭಾಷೆ ಎಂದರೆ ಯಾವುದು? ಅದನ್ನು ಮಾತೃಭಾಷೆ ಎಂದು ಕರೆಯಬೇಕೆ? ಅಥವಾ ಮನೆಮಾತು ಎಂದು ಕರೆಯಬೇಕೆ? ಮಾತೃಭಾಷೆಯನ್ನು ಯಾವರೀತಿ? ಹೇಗೆ? ಕಲಿಸಬೇಕು? ಕಲಿಸುವ ಮಾಧ್ಯಮ ಯಾವುದಿರಬೇಕು? ಎಂಬ ಇತ್ಯಾದಿ ವಿಷಯಗಳು ಚರ್ಚಾಸ್ಪದವಾಗಿ ಉಳಿದುಕೊಂಡು ಬಂದಿವೆ. ಕರ್ನಾಟಕದಲ್ಲಿ ಕನ್ನಡ ಭಾಷೆಯು ಪ್ರಾದೇಶಿಕ ಭಾಷೆಯಾಗಿ, ಆಡಳಿತ ಭಾಷೆಯಾಗಿ, ಮಾತೃಭಾಷೆಯಾಗಿ ಅಲ್ಲದೆ, ಶಿಕ್ಷಣ ಮಾಧ್ಯಮವಾಗಿಯೂ ಬಳಕೆಯಲ್ಲಿದೆ. ಇಂತಹ ಕನ್ನಡ ಭಾಷೆಯ ಕಲಿಯುವಿಕೆಯಲ್ಲಿಯೂ ಅನೇಕ ಸಮಸ್ಯೆಗಳಿರುವುದು ಕಂಡುಬರುತ್ತದೆ. ಅಂತಹ ಸಮಸ್ಯೆಗಳಾವುವು? ಅವುಗಳಿಗೆ ಕಾರಣಗಳನ್ನು ತಿಳಿದು ಪರಿಹಾರ ಕಂಡುಕೊಳ್ಳುವುದು ಅವಶ್ಯವಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಕನ್ನಡ ಪ್ರಾದೇಶಿಕ ಪರಿಸರದಲ್ಲಿರುವ ಕನ್ನಡ ಮಾತೃಭಾಷೆಯುಳ್ಳ ಮಕ್ಕಳು ಕನ್ನಡ ಕಲಿಯುವಾಗ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದು, ಅಂತಹ ಸಮಸ್ಯೆಗಳನ್ನು ಗುರುತಿಸಿ ವಿಶ್ಲೇಷಿಸುವುದರ ಮೂಲಕ ಆ ಸಮಸ್ಯೆಗಳಿಗೆ ಕಾರಣಗಳನ್ನು ಶೋಧಿಸುವುದು ಈ ಅಧ್ಯಯನದ ಮಹತ್ವದ ಉದ್ದೇಶವಾಗಿದೆ.

## ಅಧ್ಯಯನದ ಉದ್ದೇಶ

ವ್ಯಕ್ತಿ ಕೈಗೊಳ್ಳುವ ಪ್ರತಿಯೊಂದು ಕೆಲಸಗಳಿಗೆ ಒಂದು ಉದ್ದೇಶವಿರುವಂತೆ ಪ್ರಸ್ತುತ ಅಧ್ಯಯನವು ಅನೇಕ ಮಹತ್ವಪೂರ್ಣವಾದ ಉದ್ದೇಶವನ್ನೊಳಗೊಂಡಿದೆ. ಅವು ಇಂತಿವೆ:

೧. ಪ್ರಾಥಮಿಕ ಶಾಲೆಯನ್ನು ಎರಡು ರೀತಿಯಲ್ಲಿ ವಿಭಾಗ ಮಾಡಲಾಗಿದೆ. ಒಂದು ಕಿರಿಯ ಪ್ರಾಥಮಿಕ ಶಾಲೆ (ಒಂದನೇ ತರಗತಿಯಿಂದ ನಾಲ್ಕನೇ ತರಗತಿವರೆಗೆ) ಎರಡು ಹಿರಿಯ ಪ್ರಾಥಮಿಕ ಶಾಲೆ (ಐದನೇ ತರಗತಿಯಿಂದ ಏಳನೇತರಗತಿವರೆಗೆ). ಕಿರಿಯ ಪ್ರಾಥಮಿಕ ಶಾಲಾ ಮಕ್ಕಳು ಆಗ ತಾನೇ ಭಾಷೆಯನ್ನು ಕಲಿಯುತ್ತಿರುವುದರಿಂದ ಅಂತಹ ಮಕ್ಕಳ ಕನ್ನಡ ಕಲಿಕೆಯ ಸಮಸ್ಯೆಗಳನ್ನು ಗುರುತಿಸುವುದು ಸರಿಯಾದ ಕ್ರಮವಲ್ಲವೆನಿಸಿದ ಕಾರಣ ಪ್ರಸ್ತುತ ಅಧ್ಯಯನವು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳಲ್ಲಿ ಕಂಡುಬರುವ ಕನ್ನಡ ಕಲಿಕೆಯ ಸಮಸ್ಯೆಗಳನ್ನು ಗುರುತಿಸಿ, ಆ ಸಮಸ್ಯೆಗಳಿಗೆ ಕಾರಣಗಳನ್ನು ಶೋಧಿಸುವ ಮಹತ್ವದ ಉದ್ದೇಶವನ್ನು ಹೊಂದಿದೆ.

೨. ಭಾಷಾ ಕೌಶಲಗಳಾದ ಆಲಿಸುವುದು, ಮಾತನಾಡುವುದು, ಓದುವುದು ಬರೆಯುವುದು. ಈ ಕೌಶಲಗಳಲ್ಲಿ ಆರಂಭದ ಎರಡು ಕೌಶಲಗಳಾದ ಆಲಿಸುವುದು ಮತ್ತು ಮಾತನಾಡುವುದನ್ನು

ಮಗು ಮನೆಯ ಕೌಟಂಬಿಕ ಪರಿಸರದಲ್ಲಿ ಅನೌಪಚಾರಿಕವಾಗಿ ಕಲಿಯುತ್ತದೆ. ಶಾಲಾ ಪರಿಸರದಲ್ಲಿ ಔಪಚಾರಿಕವಾಗಿ ಕಲಿಯುವ ನಂತರದ ಎರಡು ಕೌಶಲಗಳಾದ ಓದುವುದು ಮತ್ತು ಬರೆಯುವುದು ಶೈಕ್ಷಣಿಕ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸುವುದರಿಂದ ಈ ಅಧ್ಯಯನವು ಹಿರಿಯ ಪ್ರಾಥಮಿಕ ಶಾಲಾ ಮಕ್ಕಳು ಓದುವಾಗ ಹಾಗೂ ಬರೆಯುವಾಗ ಎದುರಿಸುವ ಸಮಸ್ಯೆಗಳನ್ನು ಗುರುತಿಸುವ ಉದ್ದೇಶವನ್ನು ಹೊಂದಿದೆ.

೩. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳು ಮೂಲಾಕ್ಷರ, ಗುಣಿತಾಕ್ಷರ, ಒತ್ತಕ್ಷರ, ಪದಗಳು ಹಾಗೂ ವಾಕ್ಯಗಳನ್ನು ಓದುವಾಗ, ಬರೆಯುವಾಗ ಉಂಟಾಗುವ ಸಮಸ್ಯೆಗಳನ್ನು ಗುರುತಿಸುವುದು ಅಧ್ಯಯನದ ಮಹತ್ವದ ಉದ್ದೇಶಗಳಲ್ಲಿ ಮತ್ತೊಂದಾಗಿದೆ.

೪. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳಲ್ಲಿ ಕಂಡುಬರುವ ಕನ್ನಡ ಕಲಿಕೆಯ ಸಮಸ್ಯೆಗಳನ್ನು ಗುರುತಿಸುವುದಲ್ಲದೆ ಮಕ್ಕಳು ಓದುವಾಗ, ಬರೆಯುವಾಗ, ಮಾಡುವ ಕೆಲವು ಸಮಸ್ಯೆಗಳ ಸ್ವರೂಪವನ್ನು ಗುರುತಿಸುವ ಪ್ರಯತ್ನ ಮಾಡುವುದು.

೫. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳು ಓದುವಾಗ, ಬರೆಯುವಾಗ ಉಂಟಾಗುವ ಸಮಸ್ಯೆಯ ಸ್ವರೂಪವನ್ನು ತಿಳಿದು ವಿಶ್ಲೇಷಣೆ ಮಾಡುವ ಉದ್ದೇಶವನ್ನು ಹೊಂದಿದೆ. ಈ ಮೇಲಿನ ಎಲ್ಲಾ ಉದ್ದೇಶಗಳನ್ನು ಕನ್ನಡ ಕಲಿಕೆಯ ಸಮಸ್ಯೆಗಳು ಒಂದು ಅಧ್ಯಯನ ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನ ಮಾಡಲಾಗಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ 'ಕನ್ನಡ ಕಲಿಕೆಯ ಸಮಸ್ಯೆಗಳು ಒಂದು ಅಧ್ಯಯನ' ಎಂಬ ವಿಷಯದ ಅಧ್ಯಯನಕ್ಕೆ ಬಳ್ಳಾರಿ ಜಿಲ್ಲೆಯನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯನ್ನು ಆಯ್ಕೆಮಾಡಿಕೊಳ್ಳಲು ಕಾರಣಗಳು ಅನೇಕ ಇವೆ. ಈ ಜಿಲ್ಲೆಯು ಹೈದರಾಬಾದ್-ಕರ್ನಾಟಕದ ವ್ಯಾಪ್ತಿಯಲ್ಲಿ ಇರುವುದಲ್ಲದೆ, ಇದು ಸ್ವಲ್ಪಕಾಲ ಮದ್ರಾಸ್ ಹಾಗೂ ಮೈಸೂರು ಪ್ರಾಂತ್ಯಗಳ ಆಳ್ವಿಕೆಯಲ್ಲಿ ಇತ್ತು. ಅಲ್ಲದೆ ಈ ಜಿಲ್ಲೆಯು ಆಂಧ್ರಪ್ರದೇಶದ ಗಡಿಭಾಗದಲ್ಲಿ ಇರುವುದರಿಂದ ಇಲ್ಲಿ ತೆಲುಗು ಭಾಷಿಕರು, ನಿಜಾಮರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಉರ್ದು ಭಾಷಿಕರು, ಲಂಬಾಣಿಗರು ಇರುವುದರಿಂದ ಈ ಜಿಲ್ಲೆಯಲ್ಲಿನ ಹೆಚ್ಚು ಜನರು ದ್ವಿಭಾಷಿಕ ಹಾಗೂ ಬಹುಭಾಷಿಕರಾಗಿದ್ದಾರೆ. ಆದ್ದರಿಂದ ಇಲ್ಲಿಯ ಮಕ್ಕಳು ಓದುವಾಗ, ಬರೆಯುವಾಗ ಹಲವು ರೀತಿಯ ತೊಂದರೆಗಳನ್ನು ಅನುಭವಿಸುವುದರಿಂದ ಈ ಪ್ರದೇಶವನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಬರುವ ಬಳ್ಳಾರಿ, ಶಿರುಗುಪ್ಪ, ಸಂಡೂರು, ಹೊಸಪೇಟೆ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹಡಗಲಿ ತಾಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರತಿ ತಾಲೂಕಿನಿಂದ ನಾಲ್ಕು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳನ್ನು ಸರ್ವೇಕ್ಷಣೆ ಮಾಡಿದೆ. ಪ್ರತಿಯೊಂದು ಶಾಲೆಯಲ್ಲಿ ಐದು, ಆರು, ಏಳನೇ ತರಗತಿಯಿಂದ ತಲಾ ಹತ್ತು (ಐದು ಗಂಡು ಐದು ಹೆಣ್ಣು) ಮಕ್ಕಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಮಕ್ಕಳು ಮೂಲಾಕ್ಷರ, ಗುಣಿತಾಕ್ಷರ, ಒತ್ತಕ್ಷರ, ಪದಗಳು ಹಾಗೂ ವಾಕ್ಯಗಳನ್ನು ಓದುವಾಗ, ಬರೆಯುವಾಗ ಎದುರಿಸುವ ಸಮಸ್ಯೆಗಳನ್ನು ಗುರುತಿಸಿ ಆ ಸಮಸ್ಯೆಯ ಸ್ವರೂಪವನ್ನು ಕಂಡುಹಿಡಿದು ವಿಶ್ಲೇಷಣೆ ಮಾಡುವುದಕ್ಕೆ ಈ ಅಧ್ಯಯನ ಸೀಮಿತವಾಗಿದೆ.

**ಅಧ್ಯಯನದ ಸ್ವರೂಪ**

ಕನ್ನಡ ಕಲಿಕೆಯ ಸಮಸ್ಯೆಗಳು ಒಂದು ಅಧ್ಯಯನ ಎಂಬ ಸಂಶೋಧನಾ ಮಹಾಪ್ರಬಂಧವು ಒಟ್ಟು ಎಂಟು ಅಧ್ಯಾಯಗಳನ್ನು ಒಳಗೊಂಡಿದೆ.

**ಒಂದನೆಯ ಅಧ್ಯಾಯ: ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವಿಧಾನ**

ಈ ಅಧ್ಯಾಯದಲ್ಲಿ ಇಡೀ ಸಂಶೋಧನೆಯ ಉದ್ದೇಶವನ್ನು ಪ್ರಾರಂಭದಲ್ಲಿ ತಿಳಿಸಲಾಗಿದೆ. ಸಂಶೋಧನೆಯ ಚೌಕಟ್ಟು, ಅಧ್ಯಯನದ ವಿಷಯ ವ್ಯಾಪ್ತಿಯನ್ನು ತಿಳಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಕನ್ನಡ ಮಾತೃಭಾಷೆಯಾಗಿರುವ ಮಕ್ಕಳ ಹಾಗೂ ಅವರ ಶೈಕ್ಷಣಿಕ ವಲಯಕ್ಕೆ ಸಂಬಂಧಿಸಿದಂತೆ ಮಹತ್ವದ ಅಂಶಗಳನ್ನು ಕುರಿತು ಚರ್ಚಿಸಲಾಗಿದೆ.

**ಎರಡನೆಯ ಅಧ್ಯಾಯ: ಅಧ್ಯಯನ ಕ್ಷೇತ್ರದ ಸಮಾಜೋಭಾಷಿಕ ಪರಿಸರ**

ಈ ಅಧ್ಯಾಯದಲ್ಲಿ ಬಳ್ಳಾರಿ ಜಿಲ್ಲೆಯ ಭಾಷಿಕ ಪರಿಸರ ಅಂದರೆ ಆರಂಭದಿಂದಲೂ ಬಳ್ಳಾರಿಯು ತೆಲುಗು ಭಾಷೆಯ ಜೊತೆಗೆ ಸಂಬಂಧವಿರುವುದರಿಂದ ಇಲ್ಲಿಯ ಭಾಷಿಕ ಪರಿಸ್ಥಿತಿಯ ಬಗ್ಗೆ ಚರ್ಚಿಸಲಾಗಿದೆ. ನಂತರ ಸಾಮಾಜಿಕ ಪರಿಸರ ಹಾಗೂ ಅದು ಮಕ್ಕಳ ಕಲಿಕೆ ಮೇಲೆ ಹೇಗೆ ಪ್ರಭಾವ ಬೀರುತ್ತದೆ ಎಂಬುದನ್ನು ವಿವರಿಸಲಾಗಿದೆ. ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ಹಿನ್ನೆಲೆ, ಶಿಕ್ಷಣ ಸಂಸ್ಥೆಗಳು ಪ್ರಾರಂಭವಾದ ಬಗ್ಗೆ, ಇಲ್ಲಿಯ ಶೈಕ್ಷಣಿಕ ಸ್ಥಿತಿಗತಿಗಳ ಬಗ್ಗೆ ವಿವರಿಸಲಾಗಿದೆ. ಜೊತೆಗೆ ಇಲ್ಲಿಯ ಭೌಗೋಳಿಕ ಪರಿಸರ, ಅದರ ಮಹತ್ವ, ರಾಜಕೀಯ ಸ್ಥಿತಿಗತಿಗಳನ್ನು ಕುರಿತು ಚರ್ಚಿಸಲಾಗಿದೆ. ಇಲ್ಲಿಯ ಪರಿಸರ ಮಕ್ಕಳ ಭಾಷಾ ಕಲಿಕೆಯ ಮೇಲೆ ಯಾವ ರೀತಿ ಪ್ರಭಾವ ಬೀರುತ್ತದೆ ಎಂಬುದನ್ನು ಚರ್ಚಿಸಲಾಗಿದೆ.

**ಮೂರನೆ ಅಧ್ಯಾಯ: ಭಾಷಾ ಬೋಧನೆ ಮತ್ತು ಕಲಿಕೆಯ ಹೊಸ ವಿಧಾನಗಳ ಸಮೀಕ್ಷೆ ಹಾಗೂ ಮಾಧ್ಯಮ ಕುರಿತಾದ ಚಿಂತನೆಗಳು**

ಪ್ರಸ್ತುತ ಅಧ್ಯಾಯದಲ್ಲಿ ಸಾಂಪ್ರದಾಯಿಕ ವಿಧಾನಗಳನ್ನು ಬಿಟ್ಟು ಇತ್ತೀಚಿನ ಕೆಲವು ಪ್ರಮುಖ ಆಧುನಿಕ ಭಾಷಾ ಬೋಧನೆ ಹಾಗೂ ಕಲಿಕೆಯ ವಿಧಾನಗಳಾದ ರ,ಗ,ಸ,ದ,ಅ, ಸಾಮರ್ಥ್ಯಾಧಾರಿತ ಬೋಧನೆ, ಕೇಳಿ-ಕಲಿ, ಪರಿಹಾರ ಬೋಧನೆ, ನೈದಾನಿಕ ಪರೀಕ್ಷೆ, ಚೈತನ್ಯ ಹಾಗೂ ನಲಿ-ಕಲಿಗಳ ಬಗ್ಗೆ ಚರ್ಚೆ ಮಾಡಲಾಗಿದೆ. ಜೊತೆಗೆ ಬೋಧನಾ ಮಾಧ್ಯಮ ಕುರಿತಾದ ಚಿಂತನೆಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ನಾಲ್ಕನೆ ಅಧ್ಯಾಯ : ಭಾಷಾ ಬೋಧನೆ ಹಾಗೂ ಕಲಿಕೆಗಿರುವ ಸಮಸ್ಯೆಗಳು**

ಪ್ರಸ್ತುತ ಅಧ್ಯಾಯದಲ್ಲಿ ಭಾಷಾ ಬೋಧನೆ ಹಾಗೂ ಕಲಿಕೆಗಿರುವ ಸಮಸ್ಯೆಗಳಾದ ಪಠ್ಯಮೂಲ ಸಮಸ್ಯೆಗಳು, ಬೋಧನ ವಿಧಾನದ ಸಮಸ್ಯೆಗಳು, ಪರೀಕ್ಷೆ ಹಾಗೂ ಮೌಲ್ಯಮಾಪನದ ಸಮಸ್ಯೆಗಳು, ಮಕ್ಕಳ ಭಾಷಿಕ ಹಾಗೂ ಸಾಮಾಜಿಕ ಹಿನ್ನೆಲೆಯ ಸಮಸ್ಯೆಗಳು, ಸರ್ಕಾರದ ಧೋರಣೆಗಳು, ಮೂಲಭೂತ ಸೌಲಭ್ಯಗಳ ಕೊರತೆ, ಶಿಕ್ಷಕರ ಧೋರಣೆ, ಅನ್ಯಭಾಷೆಯ ಪ್ರಭಾವ, ಬೋಧನೆ ಹಾಗೂ ಕಲಿಕಾ ಸಾಮಗ್ರಿಗಳ ಕೊರತೆ ಮಗುವಿನ ವೈಯಕ್ತಿಕ ಅಂಶಗಳು, ಮಗುವಿನ ಸಾಮಾಜಿಕ ಹಾಗೂ ಕೌಟುಂಬಿಕ ಪರಿಸರ, ಆರ್ಥಿಕ ಸ್ಥಿತಿಗತಿ ಹಾಗೂ ಸರ್ಕಾರಿ ಶಾಲೆಯಲ್ಲಿ ಕನ್ನಡ ಕಲಿಯಲು ಇರುವ ಸಮಸ್ಯೆಗಳ ಬಗ್ಗೆ ಚರ್ಚಿಸಲಾಗಿದೆ.

**ಐದನೇ ಅಧ್ಯಾಯ: ಓದು ಕಲಿಕೆಯ ಸಮಸ್ಯೆಯ ಸ್ವರೂಪ:**

ಪ್ರಸ್ತುತ ಅಧ್ಯಾಯದಲ್ಲಿ ಕನ್ನಡ ಭಾಷಿಕ ಪರಿಸರ ಅಥವಾ ಕನ್ನಡ ಮಾತೃಭಾಷೆಯಾಗಿರುವ ಮಕ್ಕಳು ಕನ್ನಡ ಭಾಷೆಯನ್ನು ಓದುವಾಗ ಧ್ವನಿಮಾ ಹಂತದಲ್ಲಿ ಎದುರಿಸುವ ವಿಭಿನ್ನ ಸಮಸ್ಯೆಗಳನ್ನು, ಪದಾದಿ, ಪದಮಧ್ಯ ಮತ್ತು ಪದಾಂತ್ಯ ಪರಿಸರದಲ್ಲಿ ಮಾಡುವ ವ್ಯತ್ಯಾಸಗಳನ್ನು ದಾಖಲಿಸಲಾಗಿದೆ. ಓದುವಿಕೆಯಲ್ಲಿ ಮಾಡುವ ವ್ಯತ್ಯಾಸಗಳಿಗೆ ಕಾರಣಗಳನ್ನು ಮಕ್ಕಳು ಮಾಡುವ ವ್ಯತ್ಯಾಸಗಳನ್ನು ಉದಾಹರಣೆಗಳ ಜೊತೆಗೆ ಚರ್ಚಿಸಲಾಗಿದೆ. ಹಾಗೆ ಬಳ್ಳಾರಿ ಭಾಷೆಯ ಧ್ವನಿಮಾಗಳ ಬಳಕೆಯ ಆಧಾರದ ಮೇಲೆ ಕಾರಣಗಳನ್ನು ಖಚಿತವಾಗಿ ಹಾಗೂ ಭಾವನಾತ್ಮಕವಾಗಿ ನೀಡಲು ಯತ್ನಿಸಲಾಗಿದೆ. ಉದಾಹರಣೆ : ಪದಾದಿಯಲ್ಲಿ 'ಆಚರಿಸು' ಎಂಬ ಪದವನ್ನು 'ಅಚರಿಸು' ಎಂದು, ಪದಮಧ್ಯ ಪರಿಸರದಲ್ಲಿ 'ಗೂಡು' ಎಂಬ ಪದವನ್ನು 'ಗುಡು' ಎಂದು, ಪದಾಂತ್ಯ ಪರಿಸರದಲ್ಲಿ 'ಅಯ್ಯಾ' ಎಂಬ ಪದವನ್ನು 'ಅಯ' ಎಂದು ಓದುತ್ತಾರೆ. ಈ ರೀತಿಯ ವ್ಯತ್ಯಾಸಕ್ಕೆ ಕಾರಣ ಬಳ್ಳಾರಿಯ ವ್ಯವಹಾರಿಕ ಭಾಷೆಯಲ್ಲಿ ದೀರ್ಘಸ್ವರ 'ಆ' ಹಾಗೂ ಹ್ರಸ್ವಸ್ವರ 'ಅ' ಧ್ವನಿಗಳಲ್ಲಿ ಇರುವ ಅಲ್ಪ ಧ್ವನಿ ಸಾಮ್ಯತೆಯನ್ನು ಗಮನಿಸದೆ, ಹ್ರಸ್ವದ ಬಳಕೆಯು ಹೆಚ್ಚಾಗಿರುವುದರಿಂದ ಈ ತೆರನಾದ ವ್ಯತ್ಯಾಸವನ್ನು

ಮಕ್ಕಳು ಓದುವಾಗ ಮಾಡುತ್ತಾರೆ. ಇದೇ ರೀತಿ ದೀರ್ಘಸ್ವರಗಳಿಗೆ ಹ್ರಸ್ವಸ್ವರಗಳ ಬಳಕೆ, ಕೆಲ ಸ್ವರಗಳಿಗೆ ವ್ಯಂಜನಗಳ ಬಳಕೆ, ಸಂಧ್ಯಕ್ಷರಗಳ ವ್ಯತ್ಯಾಸ, ಅನುಸ್ವರ ಹಾಗೂ ವಿಸರ್ಗಗಳನ್ನು ಲೋಪ ಮಾಡಿರುವುದು. ಮಹಾಪ್ರಾಣಗಳಿಗೆ ಅಲ್ಪಪ್ರಾಣಗಳನ್ನು ಬಳಸಿರುವುದು. ಅನುನಾಸಿಕ, ಪಾರ್ಶ್ವಿಕ, ಊಷ್ಮಧ್ವನಿಗಳು, ಅರ್ಧಸ್ವರಗಳಲ್ಲಿ ಮಾಡುವ ವ್ಯತ್ಯಾಸಗಳ ಜೊತೆಗೆ ಗುಣಿತಾಕ್ಷರ ಹಾಗೂ ಒತ್ತಕ್ಷರಗಳಲ್ಲಿ ಮಾಡುವ ವ್ಯತ್ಯಾಸಗಳ ಸ್ವರೂಪವನ್ನು ಗುರುತಿಸಿ ಅದನ್ನು ವಿಶ್ಲೇಷಣೆ ಮಾಡಲಾಗಿದೆ. ಅಲ್ಲದೆ ಓದುವಿಕೆಯಲ್ಲಿ ಮಾಡುವ ವ್ಯತ್ಯಾಸಗಳಿಗೆ ಕೈಗೊಳ್ಳಬೇಕಾದ ಮತ್ತು ಅನುಸರಿಸಬಹುದಾದ ಕ್ರಮಗಳನ್ನು ಚರ್ಚಿಸಲಾಗಿದೆ.

**ಆರನೆಯ ಅಧ್ಯಾಯ : ಬರಹ ಕಲಿಕೆಯ ಸಮಸ್ಯೆಯ ಸ್ವರೂಪ**

ಈ ಅಧ್ಯಾಯದಲ್ಲಿ ಕನ್ನಡ ಭಾಷಿಕ ಪರಿಸರ ಅಥವಾ ಕನ್ನಡ ಮಾತೃಭಾಷೆಯಾಗಿರುವ ಮಕ್ಕಳು ಕನ್ನಡ ಭಾಷೆಯ ಬರವಣಿಗೆಯಲ್ಲಿ ಮಾಡುವ ಅಂದರೆ ಸ್ವರ, ವ್ಯಂಜನ, ಗುಣಿತಾಕ್ಷರಯುಕ್ತ ಹಾಗೂ ಒತ್ತಕ್ಷರಯುಕ್ತ ಪದಗಳ ಬರವಣಿಗೆಯಲ್ಲಿನ ವ್ಯತ್ಯಾಸಗಳನ್ನು ಪದಾದಿ, ಪದಮದ್ಯ ಮತ್ತು ಪದಾಂತ್ಯ ಪರಿಸರಗಳಲ್ಲಿ ವಿಶ್ಲೇಷಿಸುವುದರ ಜೊತೆಗೆ ಆ ವ್ಯತ್ಯಾಸಗಳಿಗೆ ಕಾರಣಗಳನ್ನು ಮಕ್ಕಳು ಮಾಡಿರುವ ಬರವಣಿಗೆಯ ವ್ಯತ್ಯಾಸಗಳೊಂದಿಗೆ ಚರ್ಚಿಸಲಾಗಿದೆ. ಉದಾಹರಣೆ : ಪದಾದಿಯಲ್ಲಿ 'ಊಟ' ಎಂಬ ಪದವನ್ನು 'ಉಟ' ಎಂದು, ಪದಮದ್ಯ ಪರಿಸರದಲ್ಲಿ 'ನಿರೂಪಣೆ' ಎಂಬ ಪದವನ್ನು 'ನಿರುಪಣೆ' ಎಂದು, ಪದಾಂತ್ಯ ಪರಿಸರದಲ್ಲಿ 'ಜಂಬೂ' ಎಂಬ ಪದವನ್ನು 'ಜಂಬು' ಎಂದು ಬರೆಯುತ್ತಾರೆ. ಈ ರೀತಿಯ ವ್ಯತ್ಯಾಸಕ್ಕೆ ಈ ಎರಡು ಧ್ವನಿಗಳಲ್ಲಿ ಇರುವ ಅಲ್ಪ ಉಚ್ಚಾರಣಾ ಧ್ವನಿ ಸಾಮ್ಯತೆಯನ್ನು ಗ್ರಹಿಸದೆ ಇರುವುದು ಮತ್ತು ರೂಪ ಸಾಮ್ಯತೆಯ ಗೊಂದಲದ ಕಾರಣದಿಂದ ಈ ರೀತಿ ಬರೆಯುವುದು ಕಂಡುಬಂದಿದೆ. ಇದೇ ರೀತಿ ದೀರ್ಘಸ್ವರಗಳಿಗೆ ಹ್ರಸ್ವಸ್ವರಗಳ ಬಳಕೆ, ಕೆಲ ಸ್ವರಗಳಿಗೆ ವ್ಯಂಜನಗಳ ಬಳಕೆ, ಸಂಧ್ಯಕ್ಷರಗಳ ವ್ಯತ್ಯಾಸ, ಅನುಸ್ವರ ಹಾಗೂ ವಿಸರ್ಗಗಳನ್ನು ಲೋಪ ಮಾಡಿರುವುದು. ಮಹಾಪ್ರಾಣಗಳಿಗೆ ಅಲ್ಪಪ್ರಾಣಗಳನ್ನು ಬಳಸಿರುವುದು. ಅನುನಾಸಿಕ, ಪಾರ್ಶ್ವಿಕ, ಊಷ್ಮಧ್ವನಿಗಳು, ಅರ್ಧಸ್ವರಗಳಲ್ಲಿ ಮಾಡುವ ವ್ಯತ್ಯಾಸಗಳ ಜೊತೆಗೆ ಗುಣಿತಾಕ್ಷರ ಹಾಗೂ ಒತ್ತಕ್ಷರಗಳಲ್ಲಿ ಮಾಡುವ ವ್ಯತ್ಯಾಸಗಳ ಸ್ವರೂಪವನ್ನು ಗುರುತಿಸಿ ಅದನ್ನು ವಿಶ್ಲೇಷಣೆ ಮಾಡಲಾಗಿದೆ. ಅಲ್ಲದೆ ಬರವಣಿಗೆ ಸಮಸ್ಯೆಗಳನ್ನು ನಿವಾರಿಸಲು ಕೈಗೊಳ್ಳಬೇಕಾದ ಕ್ರಮಗಳನ್ನು ಚರ್ಚಿಸಲಾಗಿದೆ.

**ಏಳನೆಯ ಅಧ್ಯಾಯ : ವಾಕ್ಯರಚನೆಯ ದೋಷಗಳು**

ಭಾಷೆಯಲ್ಲಿ ಅತ್ಯಂತ ಚಿಕ್ಕ ಘಟಕ 'ಧ್ವನಿ'ಯಾದರೆ, ಅತ್ಯಂತ ದೊಡ್ಡ ಘಟಕ 'ವಾಕ್ಯ'ವಾಗಿದೆ.

ಪ್ರಸ್ತುತ ಈ ಅಧ್ಯಾಯದಲ್ಲಿ ಕನ್ನಡ ಮಾತೃಭಾಷೆಯ ಮಕ್ಕಳು ವಾಕ್ಯರಚನೆಯಲ್ಲಿ ಮಾಡುವ ವ್ಯತ್ಯಾಸಗಳನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ. ಈ ಹಂತದಲ್ಲಿ ಮಕ್ಕಳು ವಾಕ್ಯಗಳನ್ನು ಓದುವಾಗ ಅಲ್ಪವಿರಾಮ, ಪೂರ್ಣವಿರಾಮ ಇತ್ಯಾದಿ ಲೇಖನ ಚಿಹ್ನೆಗಳನ್ನು ಗಮನಿಸದೆ ಇರುವುದು ಕಂಡುಬರುತ್ತದೆ. ವಾಕ್ಯವನ್ನು ಓದುವಾಗ ಹ್ರಸ್ವಸ್ವರಗಳನ್ನು ದೀರ್ಘ ಸ್ವರಗಳಾಗಿ, ಮಹಾಪ್ರಾಣ ಅಕ್ಷರಗಳನ್ನು, ಒತ್ತಕ್ಷರಗಳನ್ನು ಶಿಥಿಲಗೊಳಿಸಿ ಓದುವುದು ಕಂಡುಬರುತ್ತದೆ. ಅದೇ ರೀತಿ ವಾಕ್ಯಗಳನ್ನು ರಚಿಸುವಾಗ ವ್ಯಾಕರಣ ಅಂಶಗಳ ಬಳಕೆಯಲ್ಲಿಯೂ ಹಲವಾರು ವ್ಯತ್ಯಾಸಗಳನ್ನು ಅಥವಾ ಸಮಸ್ಯೆಗಳನ್ನು ಮಾಡುತ್ತಾರೆ. ಉದಾಹರಣೆ ವಾಕ್ಯರಚನೆ ಮಾಡುವಾಗ 'ಹಸು ಹಾಲನ್ನು ಕೊಡುತ್ತದೆ' ಎಂಬ ವಾಕ್ಯವನ್ನು 'ಹಸು ಹಾಲು ಕೊಡುತೆ' ಎಂದು, 'ರಾಮನು ಹಣ್ಣನ್ನು ತಿಂದನು' ಎಂಬ ವಾಕ್ಯವನ್ನು 'ರಾಮ ಹಣ್ಣು ತಿಂದ' ಎಂದು ಬಳಸುತ್ತಾರೆ. ಹೀಗೆ ವಾಕ್ಯರಚನೆ ಮಾಡುವಾಗ ಪ್ರತ್ಯಯಗಳ ಬಳಕೆಯಲ್ಲಿ ಹಲವಾರು ವ್ಯತ್ಯಾಸಗಳನ್ನು ಗುರುತಿಸಲಾಗಿದೆ. ಜೊತೆಗೆ ಅಪೂರ್ಣ ವಾಕ್ಯ ರಚನೆ, ವಾಕ್ಯದಲ್ಲಿ ಕರ್ತೃ, ಕರ್ಮ, ಕ್ರಿಯಾಪದಗಳ ಬದಲಾವಣೆ ಇತ್ಯಾದಿ ತಪ್ಪುಗಳನ್ನು ಮಾಡುತ್ತಾರೆ. ಈ ತಪ್ಪುಗಳಿಗೆ ಕಾರಣಗಳನ್ನು ಚರ್ಚೆಮಾಡಲಾಗಿದೆ. ಹಾಗೆಯೇ ಈ ಸಮಸ್ಯೆಗಳ ನಿವಾರಣೆಗೆ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಚರ್ಚಿಸಲಾಗಿದೆ.

### ಎಂಟನೆಯ ಅಧ್ಯಾಯ : ಸಮಾರೋಪ

ಈ ಅಧ್ಯಾಯದಲ್ಲಿ ಕಂಡುಕೊಂಡಿರುವ ಒಳನೋಟಗಳನ್ನು ಚರ್ಚಿಸಲಾಗಿದೆ. ಜೊತೆಗೆ ಈ ಅಧ್ಯಯನ ಮಹತ್ವ ಹಾಗೂ ಫಲಿತಗಳನ್ನು ದಾಖಲಿಸಲಾಗಿದೆ. ಅನುಬಂಧದಲ್ಲಿ ಪ್ರಶ್ನಾವಳಿ ಹಾಗೂ ಪರಾಮರ್ಶಿತ ಗ್ರಂಥಗಳ ಸೂಚಿಯನ್ನು ಅಡಕಗೊಳಿಸಲಾಗಿದೆ.

### ಅಧ್ಯಯನದ ವಿಧಾನ

### ಸಂಶೋಧನಾ ಅಧ್ಯಯನಕ್ಕೆ ಸ್ಥಳದ ಆಯ್ಕೆ

ಪ್ರಸ್ತುತ 'ಕನ್ನಡ ಕಲಿಕೆಯ ಸಮಸ್ಯೆಗಳು ಒಂದು ಅಧ್ಯಯನ' ಎಂಬ ಅಧ್ಯಯನವು ಕ್ಷೇತ್ರಕಾರ್ಯದ ಮಾಹಿತಿಯಿಂದಲೆ ರೂಪುಗೊಂಡಿರುವುದರಿಂದ, ಈ ಅಧ್ಯಯನಕ್ಕೆ ಬಳ್ಳಾರಿ ಜಿಲ್ಲೆಯನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯ ಏಳು ತಾಲೂಕುಗಳಲ್ಲಿ ಪ್ರತಿಯೊಂದು ತಾಲ್ಲೂಕಿಗೆ ನಾಲ್ಕು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಶಾಲೆಗಳಲ್ಲಿ ಐದನೆ, ಆರನೆ ಹಾಗೂ ಏಳನೆ ತರಗತಿಯ ವರೆಗಿನ ಮಕ್ಕಳನ್ನು ಮಾತ್ರ ಸಂಶೋಧನೆಯ ಮಾಹಿತಿಗೆ ಆಯ್ಕೆ ಮಾಡಿಕೊಳ್ಳಲಾಗಿದೆ.

## ಬಳ್ಳಾರಿ ಜಿಲ್ಲೆಯ ತಾಲ್ಲೂಕುಗಳು



## ಕ್ಷೇತ್ರಕಾರ್ಯ ಕೈಗೊಂಡ ಸ್ಥಳಗಳು

| ಕ್ರಸಂ. | ತಾಲೂಕಿನ ಹೆಸರು | ಶಾಲೆಯ ಹೆಸರು |
|---|---|---|
| ೧ | ಕೂಡ್ಲಿಗಿ | ೧. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹ್ಯಾಳ್ಯಾ |
| | | ೨. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕೆ.ಗಜಾಪುರ |
| | | ೩. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕೂಡ್ಲಿಗಿ |
| | | ೪. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕೊಟ್ಟೂರು |
| ೨ | ಹಡಗಲಿ | ೧. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಇಟಗಿ |
| | | ೨. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹುಗುಲೂರು |
| | | ೩. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಸೋಗಿ |
| | | ೪. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹಡಗಲಿ |
| ೩ | ಹಗರಿಬೊಮ್ಮನಹಳ್ಳಿ | ೧. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಏಣಗಿ |
| | | ೨. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹಗರಿಬೊಮ್ಮನಹಳ್ಳಿ |
| | | ೩. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಉಪ್ಪಾರಗಟ್ಟ |
| | | ೪. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಆನಂದ ದೇವನಹಳ್ಳಿ |

| | | |
|---|---|---|
| ೪ | ಹೊಸಪೇಟೆ | ೧. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮರಿಯಮ್ಮನಹಳ್ಳಿ |
| | | ೨. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹಳೇ ಮಲಪನಗುಡಿ |
| | | ೩. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹೊಸ ಮಲಪನಗುಡಿ |
| | | ೪. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕಮಲಾಪುರ |
| ೫ | ಸಂಡೂರು | ೧. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಬನ್ನಿಹಟ್ಟಿ |
| | | ೨. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ತಾರಾನಗರ |
| | | ೩. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಸಂಡೂರು |
| | | ೪. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಬಂಡ್ರಿ |
| ೬ | ಸಿರುಗುಪ್ಪ | ೧. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಸಿರುಗುಪ್ಪ |
| | | ೨. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕೆಂಚನಗುಡ್ಡ |
| | | ೩. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಎರೆಕಲ್ಲು |
| | | ೪. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮಣ್ಣೂರು |
| ೭ | ಬಳ್ಳಾರಿ | ೧. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಅಹಂಬಾವಿ |
| | | ೨. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕುರುಗೋಡು |
| | | ೩. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹೀರೇಹಾಳ್ |
| | | ೪. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕುಡತಿನಿ |

**ಮಾಹಿತಿ ಒದಗಿಸಿದ ವಿದ್ಯಾರ್ಥಿಗಳ ಆಯ್ಕೆ**

ಪ್ರತಿಯೊಂದು ತರಗತಿಯಲ್ಲಿ ಕನ್ನಡ ಭಾಷಿಕ ಪರಿಸರ ಅಥವಾ ಕನ್ನಡ ಮಾತೃಭಾಷೆಯಾಗಿರುವ ಮಕ್ಕಳನ್ನು ಆಯ್ಕೆ ಮಾಡಿಕೊಂಡು ಮಾಹಿತಿ ಸಂಗ್ರಹಿಸಲಾಗಿದೆ. ಈ ರೀತಿ ಆಯ್ಕೆ ಮಾಡಿಕೊಳ್ಳುವಾಗ ಸರಾಸರಿ ಬುದ್ಧಿಶಕ್ತಿಯಿರುವ ಮಕ್ಕಳನ್ನು ಸಂಶೋಧನೆಯ ಮಾಹಿತಿ ಸಂಗ್ರಹಣೆಗೆ ಆಯ್ಕೆ ಮಾಡಿಕೊಳ್ಳಲಾಗಿದೆ. ಐದು, ಆರು ಹಾಗೂ ಏಳನೆಯ ಪ್ರತಿ ತರಗತಿಗಳಿಂದ ಹತ್ತು (ಐದು ಗಂಡು ಮತ್ತು ಐದು ಹೆಣ್ಣು) ಮಕ್ಕಳನ್ನು ಆಯ್ಕೆ ಮಾಡಿಕೊಂಡು ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**ಮಾಹಿತಿ ಸಂಗ್ರಹಿಸಿದ ವಿಧಾನ:**

ಕನ್ನಡ ಮಾತೃಭಾಷೆಯಾಗಿರುವ ಮಕ್ಕಳು ಕನ್ನಡ ಭಾಷೆ ಓದುವಾಗ, ಬರೆಯುವಾಗ ಹಾಗೂ ವಾಕ್ಯರಚನೆಯಲ್ಲಿ ಎದುರಿಸುವ ಸಮಸ್ಯೆಗಳನ್ನು ಗುರುತಿಸಲು ಎರಡು ವಿಧಾನಗಳನ್ನು ಅನುಸರಿಸಲಾಗಿದೆ. ಐದು, ಆರು, ಏಳನೇ ತರಗತಿಯ ಕನ್ನಡ ಭಾಷಾ ಪಠ್ಯಪುಸ್ತಕಗಳನ್ನು ಆಯಾ

ತರಗತಿಯ ಮಕ್ಕಳಿಗೆ ಓದಿಸುವುದು, ಬರೆಸುವುದು ಹಾಗೂ ಅಕಾರಾದಿಯಾಗಿ ಕೊಟ್ಟಿರುವ ಪದಗಳನ್ನು, 'ಓದುವೆ ನಾನು' ಕಾರ್ಡುಗಳನ್ನು ಕೊಟ್ಟು ಓದಿಸುವುದು, ನಂತರ ಬರೆಸಿಕೊಳ್ಳಲಾಗಿದೆ. ಹೀಗೆ ಸ್ವರ, ವ್ಯಂಜನ, ಗುಣಿತಾಕ್ಷರ, ಒತ್ತಕ್ಷರ ಹಾಗೂ ವಾಕ್ಯಗಳನ್ನು ಮಕ್ಕಳು ಓದುವಾಗ ಧ್ವನಿಮುದ್ರಣ ಯಂತ್ರದಲ್ಲಿ ಮುದ್ರಿಸಿಕೊಳ್ಳಲಾಗಿದೆ. ನಂತರ ಈ ಮೇಲೆ ತಿಳಿಸಿದ ಅಂಶಗಳನ್ನು ಮೌಖಿಕವಾಗಿ ಹೇಳಿ ಬರೆಸಿಕೊಳ್ಳಲಾಗಿದೆ.

ಎರಡನೆಯದಾಗಿ ಮಕ್ಕಳಿಗೆ ಯಾವುದಾದರೊಂದು ವಿಷಯ ನೀಡಿ ಅಂದರೆ ಹಸುವಿನ ಪ್ರಯೋಜನ, ಶಾಲೆಯ ಬಗ್ಗೆ, ದಿನಚರಿ, ಹಬ್ಬಗಳು ಇತ್ಯಾದಿ ವಿಷಯಗಳನ್ನು ಕುರಿತು ತಮ್ಮದೇ ಆದ ವಾಕ್ಯಗಳಲ್ಲಿ ಪ್ರತ್ಯೇಕ ಉತ್ತರ ಪತ್ರಿಕೆಗಳಲ್ಲಿ ಬರೆಸಿಕೊಂಡು ಮಗು ಮಾಡುವ ವ್ಯತ್ಯಾಸಗಳನ್ನು ಗುರುತಿಸಿ ವಿಶ್ಲೇಷಣೆ ಮಾಡಲಾಗಿದೆ.

ಅಧ್ಯಾಯ ೨

# ಅಧ್ಯಯನ ಕ್ಷೇತ್ರದ ಸಮಾಜೋಭಾಷಿಕ ಪರಿಸರ

## ಭಾಷಿಕ ಪರಿಸರ

ಕನ್ನಡ ಮತ್ತು ತೆಲುಗು ಭಾಷೆಗಳು ದ್ರಾವಿಡ ಭಾಷಾ ವರ್ಗಕ್ಕೆ ಸೇರಿದವುಗಳು. ಕನ್ನಡ ದಕ್ಷಿಣ ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಭಾಷೆ. ತೆಲುಗು ಮಧ್ಯ ದ್ರಾವಿಡ ಭಾಷಾ ವರ್ಗಕ್ಕೆ ಸೇರಿದ ಭಾಷೆಯಾಗಿದೆ. ಕರ್ನಾಟಕದಲ್ಲಿ ಕನ್ನಡ, ಉರ್ದು ಭಾಷೆಗಳು ಬಹು ಸಂಖ್ಯಾತರ ಭಾಷೆಯಾಗಿವೆ. ಹಾಗೇಯೆ ಬಹು ಸಂಖ್ಯಾತರಾಡುವ ಭಾಷೆಯಾಗಿ ತೆಲುಗು ಮೂರನೇ ಸ್ಥಾನ ಪಡಿದುಕೊಂಡಿದೆ. ತೆಲುಗು ಭಾಷೆಯನ್ನು ಕರ್ನಾಟಕದ ಗಡಿ ಜಿಲ್ಲೆಗಳಲ್ಲಿ ಹೆಚ್ಚಾಗಿ ಬಳಸುವವರು ಇದ್ದಾರೆ. ತೆಲುಗು ಭಾಷೆಯು ಕರ್ನಾಟಕದ ಕೋಲಾರ ಜಿಲ್ಲೆಯಲ್ಲಿ ಬಹು ಸಂಖ್ಯಾತರಾಡುವ ಭಾಷೆಯಾಗಿದೆ. ಇತರೆಡೆಗಳಲ್ಲಿ ಅಲ್ಲಲ್ಲಿ ಬಳಕೆ ಮಾಡುತ್ತಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲೂ ಹೆಚ್ಚುಜನ ತೆಲುಗು ಭಾಷಿಕರು ನೆಲೆಸಿದ್ದಾರೆ.

ಭಾರತದಲ್ಲಿ ಹಿಂದಿಯ ನಂತರ ಬಹುಸಂಖ್ಯಾತರಿಂದ ಬಳಕೆಯಾಗುತ್ತಿರುವ ಭಾಷೆಯೆಂದರೆ ತೆಲುಗು. (ಚಾರಿತ್ರಿಕವಾಗಿ ಅಧ್ಯಯನ ಮಾಡಿದಾಗ ತೆಲುಗು ಮತ್ತು ಕನ್ನಡ ಭಾಷೆಗಳು ರಚನೆಯಲ್ಲಿ ಸಮಾನತೆಗಳು ಹೆಚ್ಚು ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ನೆಲೆಸಿರುವ ತೆಲುಗರು ಮನೆಯ ಆವರಣದಲ್ಲಿ ತೆಲುಗು ಭಾಷೆಯನ್ನು ಬಳಸುತ್ತಾರೆ. ಸಾರ್ವಜನಿಕ ಆವರಣದಲ್ಲಿ ಕನ್ನಡ ಮತ್ತು ತೆಲುಗು ಮಿಶ್ರಿತ ರೂಪಗಳ ಬಳಕೆ ಹೆಚ್ಚು. ಸಾರ್ವಜನಿಕ ವಲಯಗಳಾದ ವೇದಿಕೆ, ಆಫೀಸು, ಮನೋರಂಜನ ಸ್ಥಳಗಳು, ಸಿನೀಮಾ ಮಂದಿರ, ಆಟದ ಮೈದಾನ, ಹೋಟೆಲ್ ಮುಂತಾದ ಈ ಎಲ್ಲಾ ಆವರಣಗಳಲ್ಲಿ ತೆಲುಗು ಭಾಷಾ ಬಳಕೆ ಇದೆ. ಬಹುಸಂಖ್ಯಾತ ಕನ್ನಡಿಗರೊಂದಿಗೆ ವ್ಯವಹಾರ

ಮಾಡುವದರಿಂದ ಅನಿವಾರ್ಯವಾಗಿ ತೆಲುಗರು ಕನ್ನಡ ಭಾಷೆಯನ್ನು ಬಳಕೆ ಮಾಡುವ ಒತ್ತಡವಿದೆ. ಹಾಗಾಗಿ ಅಂತಹ ಸಂದರ್ಭದಲ್ಲಿ ತೆಲುಗು ಕನ್ನಡ ಮಾತಿನಲ್ಲಿ ತೆಲುಗು ಭಾಷೆ ಉಚ್ಛಾರಣೆ, ಶಬ್ದಕೋಶ, ವ್ಯಾಕರಣ ವಿಚಾರಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಬಳ್ಳಾರಿ ಜಿಲ್ಲೆಯಲ್ಲಿ ನೆಲೆಸಿರುವ ತೆಲುಗರು ದ್ವಿಭಾಷಿಕರು. ಹಾಗಾಗಿ ಕನ್ನಡ ಮತ್ತು ತೆಲುಗರು ಎರಡು ಭಾಷೆಗಳಲ್ಲಿ ವ್ಯವಹಾರ ಮಾಡುವ ಸಾಮರ್ಥ್ಯ ಹೊಂದಿದವರು. ಮನೆಯ ಆವರಣದಲ್ಲಿ ಶಿಷ್ಟ ತೆಲುಗು ಮಾತನಾಡಿದರೆ ಕನ್ನಡ ಪರಿಸರದಲ್ಲಿ ಮದ್ಯೆ-ಮದ್ಯೆ ತೆಲುಗು ರೂಪುಗಳನ್ನು ಸೇರಿಸಿ ಮಾತನಾಡುವ ಭಾಷಿಕ ಪ್ರಕ್ರಿಯೆ ಇಲ್ಲಿದೆ. ಬಳ್ಳಾರಿ ಜಿಲ್ಲೆಯಲ್ಲಿ ತೆಲುಗು ಪ್ರಭಾವ ದಟ್ಟವಾಗಿರುವುದೆ ಇದಕ್ಕೆ ಸಾಕ್ಷಿಯಾಗಿದೆ. ಕನ್ನಡ ನಾಮಪಲಕಗಳಲ್ಲಿ ತೆಲುಗು ಲಿಪಿಗಳಿಂದ ಕೂಡಿರುವ ಅಕ್ಷರ ರಚನೆಗಳು ಕಂಡು ಬರುತ್ತವೆ. ಬಳ್ಳಾರಿ ಜಿಲ್ಲೆಯ ವ್ಯಕ್ತಿನಾಮ, ಸ್ಥಳ ನಾಮಗಳ ಮೇಲೆ ತೆಲುಗಿನ ಪ್ರಭಾವವಿದೆ. ಇದಕ್ಕೆ ಸಾಕ್ಷಿಯಾಗಿ ವಲಸೆ ಬಂದಿರುವ ತೆಲುಗು ಕ್ಯಾಂಪ್‌ಗಳನ್ನು ಗಮನಿಸಿದಾಗ ಮನದಟ್ಟಾಗುತ್ತದೆ. ಅಂದರೆ ತೆಲುಗರು ನೆಲೆಸಿರುವ ತಾಂಡಗಳು ಮತ್ತು ಕ್ಯಾಂಪ್‌ಗಳಿಗೆ ತೆಲುಗು ಹೆಸರುಗಳನ್ನು ಇಟ್ಟಿಕೊಂಡಿದ್ದಾರೆ.

ತೆಲುಗರು ಆಕಾಶವಾಣಿ, ದೂರದರ್ಶನ, ಸಂವಹನ ಮಾದ್ಯಮ ಮುಂತಾದ ವಲಯಗಳಲ್ಲಿ ಕಾರ್ಯಕ್ರಮಗಳನ್ನು ಕನ್ನಡ ಮತ್ತು ತೆಲುಗು ಎರಡು ಮಾದ್ಯಮಗಳಲ್ಲೂ ಕೇಳಲೂ ಇಷ್ಟ ಪಡುತ್ತಾರೆ. ನಿಯತಕಾಲಿಕೆಗಳ ಅಭ್ಯಾಸವನ್ನೂ ಸಹ ಎರಡೂ ಮಾಧ್ಯಮಕ್ಕೆ ಒತ್ತು ಕೋಡುತ್ತಾರೆ. ಹಾಗೇಯೇ ಸಾರ್ವಜನಿಕ ಸಮಾರಂಭಗಳಲ್ಲಿ ನಡೆಯುವ ಕಾರ್ಯಕ್ರಮಗಳನ್ನು ಕನ್ನಡ ತೆಲುಗು ಎರಡೂ ಮಾದ್ಯಮಗಳಲ್ಲೂ ಕೇಳಲು ಇಷ್ಟಪಡುತ್ತಾರೆ. ಆದರೆ ದೇವಾಲಯ, ಪಂಚಾಯಿತಿ, ವಿವಾಹದಂತಹ ಕಾರ್ಯಕ್ರಮಗಳನ್ನು ತೆಲುಗು ಭಾಷೆಯಲ್ಲಿ ನಿರ್ವಹಿಸುವರು.

ವಿದ್ಯಾವಂತ ತೆಲುಗರ ಮಾತು ತೆಲುಗುವಿನಿಂದ ಇಂಗ್ಲೀಷಿಗೆ ನುಡಿಪಲ್ಲಟ ಮಾಡಿದರೆ ಅವಿದ್ಯಾವಂತರು ತೆಲುಗು ಭಾಷೆಯಿಂದ ಕನ್ನಡಕ್ಕೆ ನುಡಿಪಲ್ಲಟ ಮಾಡುವ ಪ್ರಕ್ರಿಯೆ ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆ ಒಂದು ದ್ವಿಭಾಷಿಕ ಪ್ರದೇಶ. ಅನೇಕ ಶತಮಾನಗಳ ಕಾಲ ಬಳ್ಳಾರಿ ಜಿಲ್ಲೆ ಹಾಗೂ ಆಂಧ್ರದಲ್ಲಿರುವ ಕರ್ನೂಲ್, ಕಡಪ ಮತ್ತು ಅನಂತಪುರ ಜಿಲ್ಲೆಗಳು ಒಂದೇ ಆಡಳಿತಕ್ಕೆ ಒಳಪಟ್ಟಿದ್ದವು. "ಈ ಪ್ರದೇಶಗಳನ್ನು ಕ್ರಿ. ಶ. ೧೮೦೦ರಲ್ಲಿ ಹೈದ್ರಾಬಾದ್ ನಿಜಾಮನು ಬ್ರಿಟಿಷರಿಗೆ ನೀಡಿದ್ದರಿಂದ ಇವುಗಳನ್ನು ಸೀಡೇಡ್ ಡಿಸ್ಟ್ರಿಕ್ಟ್"[೧] ಎಂದೂ ಕರೆಯಲಾಗಿದೆ. ಈ ಹಿನ್ನಲೆಯಿಂದ ಕನ್ನಡ ಮತ್ತು ತೆಲುಗು ಭಾಷಿಕರು ಜೊತೆಯಲ್ಲಿ ಬದುಕುತ್ತಿದ್ದಾರೆ. ಇಲ್ಲಿ ಕನ್ನಡ ಮತ್ತು ತೆಲುಗು ಎರಡು ಭಾಷೆಗಳು ಪ್ರಧಾನವಾಗಿ ವ್ಯವಹಾರದಲ್ಲಿವೆ, ಬಳ್ಳಾರಿ ಜಿಲ್ಲೆಯ ಕನ್ನಡ ಮತ್ತು ತೆಲುಗು ಭಾಷಿಕ ಪರಿಸರ ವಿಶಿಷ್ಟವಾಗಿದೆ. ಕನ್ನಡಿಗರೆಲ್ಲರಿಗೂ ಹೆಚ್ಚು ತೆಲುಗು ಗೊತ್ತಿದೆ. ತೆಲುಗರೆಲ್ಲರಿಗೂ ಹೆಚ್ಚು ಕನ್ನಡ ಗೊತ್ತಿಲ್ಲ. ಈ ಹಿನ್ನಲೆಯಿಂದ ಕನ್ನಡ ಮತ್ತು ತೆಲುಗು ಭಾಷಿಕರನ್ನು ವರ್ಗಿಕರಿಸುವುದು ತುಂಬಾ ತ್ರಾಸದಾಯಕವಾದ ಕೆಲಸ. ಈ ಬಳ್ಳಾರಿ ಜಿಲ್ಲೆಯಲ್ಲಿ ಮಾತೃಭಾಷೆ ದೃಷ್ಟಿಯಿಂದ ಕನ್ನಡ,

ತೆಲುಗು, ಉರ್ದು, ತಮಿಳು, ಮಲಯಾಳಂ, ಮರಾಠಿ, ಲಂಬಾಣಿ ಮತ್ತು ಹಿಂದಿ ಭಾಷೆಗಳನ್ನಾಡುವ ಭಾಷಿಕರಿದ್ದಾರೆ. ಉಳಿದ ಭಾರತೀಯ ಭಾಷೆಗಳನ್ನಾಡುವ ಭಾಷಿಕರು ತುಂಬಾ ಕಡಿಮೆ. ಇವರು ವಾಸಿಸುವ ಕ್ಯಾಂಪ್‌ಗಳಲ್ಲಿ ತೆಲುಗರು ಕನ್ನಡ ಕಲಿಯದೆ ಬದುಕುತಿದ್ದಾರೆ ಅಲ್ಲದೇ ಹೆಚ್ಚು ಶ್ರೀಮಂತರಾಗಿದ್ದಾರೆ.

ಕೋಲಾರ ಜಿಲ್ಲೆ ತೆಲುಗು ಮತ್ತು ಕನ್ನಡ ಭಾಷಿಕ ಸನ್ನಿವೇಶ ಸಂದರ್ಭವನ್ನು ಗಮನಿಸಿದ ಡಾ॥ ಕೃಷ್ಣ ಪರಮೇಶ್ವರ ಭಟ್ ಕೋಲಾರ ಜಿಲ್ಲೆಯ ಭಾಷಿಕ ಪರಿಸರ ಭಾಷಿಕ ರಚನೆ ಮತ್ತು ಸಂದರ್ಭಗಳನ್ನು ಹೀಗೆ ಹೇಳುತ್ತಾರೆ. "ತೆಲುಗು ಭಾಷಿಕರು ಕನ್ನಡ ಕಲಿಯುವ ಅವಶ್ಯಕತೆಗಿಂತ ಕನ್ನಡ ಭಾಷಿಕರು ತೆಲುಗು ಭಾಷೆ ಕಲಿಯುವಂತೆ ಒತ್ತಾಯಿಸುವ ಸನ್ನಿವೇಶವಿದೆಯೆಂದೂ, ಕನ್ನಡ ಭಾಷಿಕರ ಒಲವು ಹೆಚ್ಚಾಗಿ ತೆಲುಗಿನ ಕಡೆಗಿದೆ" ಈ ಮಾತು ನೂರಕ್ಕೆ ನೂರರಷ್ಟು ಬಳ್ಳಾರಿ ಜಿಲ್ಲೆಯಲ್ಲಿ ತೆಲುಗರು ವಾಸಿಸುವ ಕ್ಯಾಂಪ್‌ಗಳ ಭಾಷಾ ಬಳಕೆಯ ಸಂದರ್ಭದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.

**ಸಾಮಾಜಿಕ ಪರಿಸರ**

ಭಾಷೆಯ ಸಾಮಾಜಿಕ ಚಹರೆಗಳನ್ನು ತೋರ್ಪಡಿಸುವ ಪ್ರಮುಖ ಅಂಶಗಳಲ್ಲಿ ಸಾಮಾಜಿಕ ಶ್ರೇಣೀಕರಣ ವ್ಯವಸ್ಥೆ ಅಥವಾ ವಿವಿಧ ವರ್ಗಗಳಲ್ಲಿ ಭಾಷಿಕ ಸಮುದಾಯ ವಿಭಜನೆಯಾಗುವ ರೀತಿಯು ಒಂದು. ಭಾರತದಂತಹ ಸಂಕೀರ್ಣ ಸಾಮಾಜಿಕ ವ್ಯವಸ್ಥೆಯುಳ್ಳ ರಾಷ್ಟ್ರಗಳಲ್ಲಿ 'ವರ್ಗ' ಪರಿಕಲ್ಪನೆಯನ್ನು ವಿಭಿನ್ನ ರೀತಿಯಲ್ಲಿ ವಿವರಿಸಿಕೊಳ್ಳಬೇಕಾಗುತ್ತದೆ. ಆದರೆ ಭಾಷಿಕ ಸಾಮಾಜಿಕ ಅಧ್ಯಯನದ ಉದ್ದೇಶಕ್ಕೆ 'ವರ್ಗ' ಎನ್ನುವ ಅಂಶವನ್ನು ಸಮಾಜಶಾಸ್ತ್ರೀಯ ನೆಲೆಯ ಸಂಕೀರ್ಣತೆಯೊಂದಿಗೆ ವಿವರಿಸಿಕೊಳ್ಳದೆ ಸ್ಥೂಲವಾಗಿ ಉನ್ನತ ವರ್ಗ ಮತ್ತು ಕೆಳವರ್ಗ ಅಥವಾ ಮಧ್ಯಮವರ್ಗ ಮತ್ತು ಕೆಳವರ್ಗ ಎಂದು ವರ್ಗೀಕರಿಸಿಕೊಂಡರೆ ಸಾಕು ಎಂದು ಸಾಮಾಜಿಕ ಭಾಷಾಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಇದರಿಂದ ಭಾಷೆಗೂ ವ್ಯಕ್ತಿಯ ಸಾಮಾಜಿಕ ವರ್ಗದ ಹಿನ್ನೆಲೆಗೂ ಇರುವ ಪರಸ್ಪರ ಸಂಬಂಧಗಳನ್ನು ಕಂಡುಕೊಳ್ಳಬಹುದು.

ಭಾಷೆಯ ಬಗ್ಗೆ ಸಾಮಾನ್ಯವಾದ ಒಂದು ಸಾರ್ವತ್ರಿಕ ಕಲ್ಪನೆಯಿರುತ್ತದೆ. ಭಾಷೆಯಲ್ಲಿ ಉಚ್ಚಾರ ಹೇಗಿರಬೇಕು. ಯಾವುದೋ ಒಂದು ಉಚ್ಚಾರ ಸರಿ ಯಾವುದೋ ಒಂದು ತಪ್ಪು. ಉದಾಹರಣೆಗೆ ಅಕ್ಷರಸ್ಥ, ನಗರ ಪ್ರದೇಶದವರ ಮಾತಿನ ತೀರಿ ಸರಿಯಾದುದು, ಇತರರು ಮಾತನಾಡುವ ರೀತಿ ಗ್ರಾಮ್ಯ ಅಥವಾ ಒರಟಾದುದು ಎಂಬ ಕಲ್ಪನೆಗಳಿರುತ್ತವೆ. ಇಂತಹ ವರ್ಗೀಕರಣ ಅಥವಾ ಹೇಳಿಕೆಗಳಿಗೆ ಸಾಮಾಜಿಕ ಭಾಷಾಶಾಸ್ತ್ರಜ್ಞರ ಅಗತ್ಯವಿರದೆ ಯಾರು ಬೇಕಾದರೂ ಹೇಳಬಹುದು. ಆದರೆ ಭಾಷೆಯ ಸಾಮಾಜಿಕ ಚಹರೆಗಳನ್ನು ಅವುಗಳ ಲಕ್ಷಣಗಳನ್ನು ವಿವರಿಸಲು

ಸಾಮಾಜಿಕ ಭಾಷಾಶಾಸ್ತ್ರಜ್ಞರ ಅವಶ್ಯಕತೆಯಿದೆ. ಇಂತಹ ಭಾಷಿಕ ವ್ಯತ್ಯಾಸಗಳಿಗೂ ಸಾಮಾಜಿಕ ಹಿನ್ನೆಲೆಗೂ ಇರುವ ಸಂಬಂಧವನ್ನು ಸಾಮಾಜಿಕ ಭಾಷಾಶಾಸ್ತ್ರದಲ್ಲಿನ ಅಧ್ಯಯನಗಳು ನಿರೂಪಿಸಿವೆ. ಕನ್ನಡದಲ್ಲಿಯೂ ಕಾಣಿಸಿಕೊಳ್ಳುವ ಉಚ್ಚಾರಣಾ ವ್ಯತ್ಯಾಸಗಳನ್ನು ಸರಿತಪ್ಪುಗಳ ಮಾದರಿಯಲ್ಲಿ ಸಾಮಾನ್ಯರು ಗಮನಿಸುತ್ತಾರೆ. ಆದರೆ ಈ ವ್ಯತ್ಯಾಸಗಳನ್ನು ಸಾಮಾಜಿಕ ಹಿನ್ನೆಲೆಯಲ್ಲಿ ನಿರೂಪಿಸಲು ಸಾಧ್ಯ.

ಪ್ರಸ್ತುತ ಅಧ್ಯಯನಕ್ಕೆ ಬಳ್ಳಾರಿ ಜಿಲ್ಲೆಯನ್ನು ಆಯ್ದುಕೊಂಡಿರುವುದರಿಂದ ಬಳ್ಳಾರಿ ಸಾಮಾಜಿಕ ಶ್ರೇಣಿಕರಣವು ಈ ಮೇಲೆ ಹೇಳಿದ ವಿಚಾರಗಳಿಗಿಂತ ಭಿನ್ನವೆನಿಲ್ಲ. ಏಕೆಂದರೆ ಬಳ್ಳಾರಿಯು ಸಹ ಒಂದು ಬಹುಭಾಷಿಕ ಪ್ರದೇಶವಾಗಿರುವುದರಿಂದ ಇಲ್ಲಿಯ ಕನ್ನಡ ಭಾಷೆಯ ಮೇಲೆ ತೆಲುಗು, ಉರ್ದು, ಲಂಬಾಣಿ, ತಮಿಳು, ಹಿಂದಿ, ಇಂಗ್ಲೀಷ್ ಇತ್ಯಾದಿ ಭಾಷೆಯ ಪ್ರಭಾವದಿಂದ ಕನ್ನಡ ಬಳಕೆಯ ಚಹರೆ ಭಿನ್ನವಾಗಿರುವುದನ್ನು ಕಾಣಬಹುದು. ಇಲ್ಲಿಯ ಜನರು ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಮೇಲೆ ಹೋದಾಗ ಭಾಷೆಯ ಮೇಲೆ ಅದರ ಪ್ರಭಾವವನ್ನು ಕಾಣಬಹುದು. ಅಂದರೆ ಇಂತಹ ಜನರ ಭಾಷೆಯು ಶಿಷ್ಟತೆಯಿಂದ/ಗ್ರಾಥಿಕ ಭಾಷೆಯಾಗಿರುತ್ತದೆ. ಆದರೆ ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಕೆಳಗಿರುವ ಜನರ ಭಾಷೆಯು ಗ್ರಾಮ್ಯವಾಗಿರುತ್ತದೆ. ಇಲ್ಲವೆ ದೀರ್ಘ ಸ್ವರಗಳನ್ನು ಹ್ರಸ್ವವಾಗಿ ಹ್ರಸ್ವಸ್ವರಗಳನ್ನು ದೀರ್ಘವಾಗಿ ಮಹಾಪ್ರಾಣಾಕ್ಷರಗಳನ್ನು ಅಲ್ಪ ಪ್ರಾಣಾಕ್ಷರಗಳಾಗಿ, ಊಷ್ಮ ಧ್ವನಿಗಳನ್ನು ಶಿಥಿಲಗೊಳಿಸಿ ಬಳಸುವುದು ಕಂಡುಬರುತ್ತದೆ.

ಸಾಮಾಜಿಕ ಶ್ರೇಣೀಕರಣ ಮತ್ತು ಸಮುದಾಯಗಳ ನಡುವಿನ ಸಾಮಾಜಿಕ ನಿರ್ಬಂಧದೊಡನೆ ಅವುಗಳ ಪ್ರತ್ಯೇಕತೆಯನ್ನು ನಿರ್ವಹಿಸುವಲ್ಲಿ ಜಾತಿ ಪ್ರಮುಖ ಪಾತ್ರ ವಹಿಸುತ್ತದೆ. ಒಂದು ಭಾಷಿಕ ಸಮುದಾಯದ ಒಳ ಭಿನ್ನತೆಗಳಿಗೆ ಸಾಮಾಜಿಕವಾದ ಜಾತಿ ವ್ಯವಸ್ಥೆಯೂ ಕಾರಣವಾಗುತ್ತದೆ. ಏಕೆಂದರೆ ಪ್ರತಿ ಜಾತಿಯು ಮೂಲಭೂತವಾಗಿ ಭಿನ್ನವಾದ ನಂಬಿಕೆ, ರೀತಿ, ನಡುವಳಿಕೆಗಳನ್ನು ಜೀವನ ಕ್ರಮವನ್ನು ಪಾರಂಪರಿಕವಾಗಿ ರೂಢಿಸಿಕೊಂಡಿರುತ್ತದೆ. ಈ ಕಾರಣದಿಂದಾಗಿ ಬಳಸುವ ಭಾಷೆಯಲ್ಲಿ ಭಾಷಾಭಿವ್ಯಕ್ತಿಯಲ್ಲಿ ವ್ಯತ್ಯಾಸಗಳು ಕಾಣಿಸಿಕೊಳ್ಳುತ್ತವೆ. ಆಗಾಗಿ ಜಾತಿ ಸಮುದಾಯಗಳ ಭಾಷೆಗೆ ಕೆಲವು ವಿಶಿಷ್ಟ ಲಕ್ಷಣಗಳು ಪ್ರಾಪ್ತವಾಗಿರುತ್ತವೆ. ಅವು ಧ್ವನಿ, ಪದ, ವಾಕ್ಯರಚನೆ ಮತ್ತು ವ್ಯಾಕರಣ ಘಟಕಗಳಲ್ಲಿಯೂ ಕಾಣಿಸಿಕೊಳ್ಳಬಹುದು. ಇಂತಹ ವಿಶಿಷ್ಟ ವಿಭಿನ್ನತೆಗಳನ್ನು ಆಧರಿಸಿ ಸಾಮಾಜಿಕ ಪ್ರಭೇಧಗಳನ್ನು ಗುರುತಿಸಲಾಗಿದೆ. ಧ್ವನಿ ಘಟಕಕ್ಕೆ ಸಂಬಂಧಿಸಿದ ಒಂದು ಉದಾಹರಣೆಯನ್ನು ಇಲ್ಲಿ ಗಮನಿಸಬಹುದು. ಬಳ್ಳಾರಿಯ ಪದಾದಿ ಪರಿಸರದಲ್ಲಿ ಹ್ರಸ್ವಸ್ವರ 'ಅ' ಧ್ವನಿಯ ಬದಲಿಗೆ ಹ್ರಸ್ವಸ್ವರ 'ಒ' ಧ್ವನಿಯನ್ನು ಬಳಸುತ್ತದೆ. ಉದಾಹರಣೆಗೆ 'ಕಲ್ಲು' ಎಂಬುದನ್ನು 'ಕೊಲ್ಲು' ಎಂದು 'ಕಣ್ಣು' ಎಂಬುದನ್ನು 'ಕೊಣ್ಣು' ಎಂದು ಉಚ್ಛರಿಸುತ್ತಾರೆ.

ಹೀಗೆ ಇಲ್ಲಿಯ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ವ್ಯವಸ್ಥೆಯಲ್ಲಿ ಭಿನ್ನತೆ ಇರುವುದರಿಂದ ಇಲ್ಲಿಯ ಮಕ್ಕಳು ಹಲವು ರೀತಿಯ ಭಾಷಿಕ ಸಮಸ್ಯೆಗಳನ್ನು ಎದುರಿಸುತ್ತಾರೆ. ಅವುಗಳನ್ನು ಮುಂದೆ ಚರ್ಚಿಸಲಾಗಿದೆ. ಜೊತೆಗೆ ವಿಭಿನ್ನ ಜಾತಿ ಸಮುದಾಯಗಳು ಇಲ್ಲಿ ಇರುವುದರಿಂದ ಆ ಜನಾಂಗದ ಭಾಷಿಕ ಪ್ರಭಾವವನ್ನು ಇಲ್ಲಿಯ ಮಕ್ಕಳಲ್ಲಿ ಗುರುತಿಸಬಹುದು.

## ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ಪರಿಸರ

ಮಧ್ಯಕಾಲಿನ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿರುವ ಗಡಿನಾಡ ಪ್ರದೇಶವಾದ ಬಳ್ಳಾರಿ ಜಿಲ್ಲೆಯು ಶೈಕ್ಷಣಿಕ ದೃಷ್ಠಿಯಿಂದ ತುಂಬಾ ಹಿಂದುಳಿದ ಜಿಲ್ಲೆಯಾಗಿದೆ. ಇದು ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಕನ್ನಡಿಗರೇ ಹೆಚ್ಚಾಗಿ ವಾಸಿಸುವ ಪ್ರದೇಶವಾಗಿದ್ದರಿಂದ ಬ್ರಿಟೀಷ ಸರ್ಕಾರದ ನಿರ್ಲಕ್ಷ್ಯಕ್ಕೆ ಒಳಗಾಗಿತ್ತು. ತೆಲುಗು ಇಲ್ಲಿ ಆಡಳಿತದ ಭಾಷೆಯಾಗಿದ್ದರೂ, ಕನ್ನಡ ಹಾಗೂ ತೆಲುಗು ಮಾತನ್ನು ಆಡುವ ಜನ ಇಲ್ಲಿ ಹೆಚ್ಚಾಗಿದ್ದಾರೆ.

ದೇಶದಲ್ಲಿ ಹೊಸ ಶಿಕ್ಷಣ ಪದ್ದತಿ ಜಾರಿಗೆ ಬರುವುದಕ್ಕಿಂತ ಮುಂಚೆ ಜಿಲ್ಲೆಯಾದ್ಯಂತ್ಯ ಬಹುತೇಕ ಎಲ್ಲಾ ದೊಡ್ಡ-ದೊಡ್ಡ ಗ್ರಾಮಗಳಲ್ಲಿಯೂ ಇಂಡೋಜಿನಿಯಸ್ ಮಾದರಿಯ ಎಲಿಮೆಂಟರಿ ಶಾಲೆಗಳು ಶಿಕ್ಷಣವನ್ನು ನೀಡುತ್ತಿದ್ದವು. ಈ ಶಾಲೆಗಳು ಅಯ್ಯನವರ ಮಠ ಅಥವಾ ಶಿಕ್ಷಕರೇ ತಮ್ಮ ಮನೆಗಳಲ್ಲಿ ಶಿಕ್ಷಣ ನೀಡುತ್ತಿದ್ದರು. ಈ ಶಾಲೆಗಳು ಬೆಳಿಗ್ಗೆ ೯.೦೦ ರಿಂದ ೧೦.೦೦ ಘಂಟೆಯವರೆಗೆ ಮದ್ಯಾಹ್ನ ೩.೦೦ ಘಂಟೆಯಿಂದ ಸಂಜೆಯವರೆಗೆ ನಡೆಯುತ್ತಿದ್ದವು. ಮಕ್ಕಳು ತಮ್ಮ ೫ನೇ ವಯಸ್ಸಿನಲ್ಲಿ ಶಾಲೆಗೆ ಸೇರುತ್ತಿದ್ದರು. ಓದುವುದು ಬರೆಯುವುದು ಅಂಕ ಗಣಿತ ಮತ್ತು ನೀತಿ ವಾಕ್ಯಗಳನ್ನು ಹೇಳಿಕೊಡುವುದರ ಮೂಲಕ ಪ್ರಾಥಮಿಕ ಜ್ಞಾನವನ್ನು ಮಕ್ಕಳಲ್ಲಿ ತುಂಬುತ್ತಿದ್ದರು. ಆಗ ಮಕ್ಕಳಿಗೆ ಯಾವುದೇ ರೀತಿಯ ಮುದ್ರಿತ ಪುಸ್ತಕವಾಗಲಿ ನಿರ್ದಿಷ್ಟ ಪಠ್ಯಕ್ರಮವಾಗಲಿ ಇರಲಿಲ್ಲ. ಮಕ್ಕಳ ಬೌದ್ಧಿಕ ಮಟ್ಟಕ್ಕೆ ತಕ್ಕಂತೆ ತರಗತಿಗಳನ್ನು ವಿಂಗಡಿಸಲಾಗುತ್ತಿತ್ತು. ಸಂಭಾವನೆಯ ರೂಪದಲ್ಲಿ ವಿದ್ಯಾರ್ಥಿಗಳು ಉಪಾಧ್ಯಾಯರಿಗೆ ದವಸಧಾನ್ಯ, ಉಪ್ಪು ಮತ್ತು ಹುಣಸೆಹಣ್ಣನ್ನು ಕೊಡುತ್ತಿದ್ದರು. ಉನ್ನತ ಶಿಕ್ಷಣವನ್ನು ಧರ್ಮ ಮತ್ತು ಸಾಹಿತ್ಯದ ರೂಪದಲ್ಲಿ ಮಂದಿರ ಮತ್ತು ಮಠಗಳ ಸಂಸ್ಕೃತ ಪಾಠಶಾಲೆಗಳಲ್ಲಿ ಹೇಳಿಕೊಡಲಾಗುತ್ತಿತ್ತು. ಆದರೆ ಈ ಎಲ್ಲಾ ಶಿಕ್ಷಣ ಸೌಲಭ್ಯಗಳು ಕೇವಲ ಮೆಲ್ಜಾತಿಯವರಿಗೆ ಮೀಸಲಾಗಿದ್ದವು. ಮಹಿಳೆ ಮತ್ತು ಇತರೆ ಹಿಂದುಳಿದ ಕೆಳಜಾತಿಯ ವಿದ್ಯಾರ್ಥಿಗಳ ಶಿಕ್ಷಣವು ಬಹುತೇಕ ವೃತ್ತಿಪರವಾಗಿದ್ದು ಅನುವಂಶಿಯವಾಗಿ ತಂದೆಯಿಂದ ಮಗನಿಗೆ ತರಬೇತಿಯ ರೂಪದಲ್ಲಿ ದೊರೆಯುತ್ತಿತ್ತು. ಮುಸ್ಲಿಂ ವಿದ್ಯಾರ್ಥಿಗಳಿಗೆ ಪ್ರಾಥಮಿಕ ಶಿಕ್ಷಣವು ಮಸೀದಿಗಳಲ್ಲಿ ನಡೆಯುತ್ತಿದ್ದು, ಉನ್ನತ ಶಿಕ್ಷಣವನ್ನು 'ಮದರಸಾ' ಹಾಗೂ 'ಮುಕ್ತಾಬ್'ಗಳಲ್ಲಿಯೂ ನೀಡಲಾಗುತ್ತಿತ್ತು. ಇದು ಕೂಡ ಬಹುತೇಕ ಧಾರ್ಮಿಕ ಸ್ವರೂಪದ ಶಿಕ್ಷಣವಾಗಿತ್ತು. ಇದು ಕೇವಲ ಬಳ್ಳಾರಿ ಜಿಲ್ಲೆಯ ಚಿತ್ರಣವಾಗಿರದೇ ಒಟ್ಟಾರೆ ದೇಶದ ಸ್ಥಿತಿಯಾಗಿತ್ತು.

ಬಳ್ಳಾರಿ ಜಿಲ್ಲೆಯಲ್ಲಿ ಪ್ರಪ್ರಥಮವಾಗಿ Indogenious ಮಾದರಿಯಲ್ಲಿ ಶ್ರೀ ಹೀರದ ಕರಿಬಸಪ್ಪನವರು ವೀರಶೈವ ಮತ್ತು ವೈದಿಕ ಧರ್ಮವನ್ನು ಅಭ್ಯಾಸಿಸಲು ಸಂಸ್ಕೃತ ಪಾಠಶಾಲೆಯನ್ನು ತೆರೆದರು. ಕಪ್ಪಗಲ್ ಅಯ್ಯಪ್ಪನವರು ಮತ್ತೊಂದು ಪಾಠಶಾಲೆಯನ್ನು ತೆರೆದು ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿ ಸೌಲಭ್ಯವನ್ನು ಕಲ್ಪಿಸಿಕೊಟ್ಟರು. ಅಂದಿನ ಮದ್ರಾಸ್ ಸರ್ಕಾರದ ಹರಿಜನ ಕಲ್ಯಾಣ ಇಲಾಖೆಯು ಸಹ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ವಿದ್ಯಾರ್ಥಿಗಳಿಗಾಗಿ "ಕಲ್ಯಾಣ ಮಂಡಳಿ ಶಾಲೆಗಳು" ಎಂಬ ವಿಶಿಷ್ಟ ಮಾದರಿಯ ಶಾಲೆಗಳನ್ನು ಜಿಲ್ಲೆಯ ಹಲವಾರು ಕಡೆ ತೆರೆಯಿಸಿತು.

"ಬಳ್ಳಾರಿ ಜಿಲ್ಲೆಯು ಬ್ರಿಟೀಷ್ ಆಳ್ವಿಕೆಗೆ ಒಳಪಟ್ಟು ಮದ್ರಾಸ್ ಪ್ರಾಂತ್ಯಕ್ಕೆ ಸೇರಿದ ಬಳಿಕ ಶಿಕ್ಷಣ ಕ್ಷೇತ್ರದಲ್ಲಿ ಹಲವಾರು ಸುಧಾರಣೆಗಳಾದವು. ಕ್ರಿ.ಶ. ೧೮೨೩ರಲ್ಲಿ ಬಳ್ಳಾರಿ ಜಿಲ್ಲೆಯ ಅಂದಿನ ಕಲೆಕ್ಟೊರೆಟ್ ಆಗಿದ್ದ ಸರ್ ಥಾಮಸ್ ಮನ್ರೋ ಅವರು ಒಂದು ಸಮಿತಿಯನ್ನು ರಚಿಸಿ ಜಿಲ್ಲೆಯಾದ್ಯಂತ ಪ್ರವಾಸ ಕೈಗೊಂಡರು. ಶೈಕ್ಷಣಿಕ ಸ್ಥಿತಿ ಗತಿಗಳನ್ನು ಅಧ್ಯಯನ ಮಾಡಿ ಬಳ್ಳಾರಿ ಜಿಲ್ಲೆಯು ಅತ್ಯಂತ ಹಿಂದುಳಿದ ಜಿಲ್ಲೆಯೆಂದು ಮದ್ರಾಸ್ ಗವರ್ನರ್‌ಗೆ ವರದಿ ಸಲ್ಲಿಸಿದರು. ಇವರ ಶಿಫಾರಸ್ಸಿನ ಮೇರೆಗೆ ಜಿಲ್ಲೆಯಲ್ಲಿ ಒಂದು ಕಲೆಕ್ಟೊರೆಟ್ ಶಾಲೆ ಮತ್ತು ಎರಡು ತಹಸಿಲ್ದಾರಿ ಶಾಲೆಗಳನ್ನು ಸ್ಥಾಪಿಸಲಾಯಿತು. ಆದರೆ ಈ ಶಾಲೆಗಳು ಶೈಕ್ಷಣಿಕವಾಗಿ ನೀರಿಕ್ಷಿಸಿದ ಫಲವನ್ನು ಕೊಡದ ಕಾರಣ ಮದ್ರಾಸ್ ಸರ್ಕಾರದ ಹೊಸ ಶಿಕ್ಷಣ ನೀತಿಯಿಂದಾಗಿ ಕ್ರಿ. ಶ. ೧೮೩೦ರಲ್ಲಿ ರದ್ದುಗೊಂಡವು"[೨].

ಕ್ರಿ.ಶ.೧೮೫೪ ಚಾರ್ಲ್ಸ್ ಉಡ್ಸ್‌ರ ಇತಿಹಾಸ ಪ್ರಸಿದ್ಧವಾದ ವರದಿಯ ಶಿಫಾರಸ್ಸಿನ ಮೇರೆಗೆ ಜಿಲ್ಲೆಯಲ್ಲಿ ಶೈಕ್ಷಣಿಕ ಸುಧಾರಣೆಗಳು ಸ್ವಲ್ಪ ಮಟ್ಟಿಗೆ ಆದವು. ಅನಂತರ ಈ ಭಾಗದಲ್ಲಿ ಎಲಿಮೆಂಟರಿ ಶಾಲೆಗಳು ಆರಂಭವಾದವು. ಇವು ವಿವಿಧ ಸಂದರ್ಭಗಳಲ್ಲಿ ಜಿಲ್ಲಾ ಮಂಡಳಿ ತಾಲ್ಲೂಕು ಮಂಡಳಿ ಹಾಗೂ ಸ್ಥಳೀಯ ಮಂಡಳಿಗಳ ನಿಯಂತ್ರಣದಲ್ಲಿದ್ದವು. ಇದೇ ವೇಳೆಯಲ್ಲಿ ಕ್ರಿಶ್ಚಿಯನ್ ಮಿಷನರಿಗಳು ಮತ್ತು ಇತರೆ ಖಾಸಗಿ ಸಂಸ್ಥೆಗಳು ಸಹ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಪ್ರಾಥಮಿಕ ಶಿಕ್ಷಣವನ್ನು ನೀಡುವ ಕಾಯಕವನ್ನು ಕೈಗೊಂಡವು. ಆಗ ಶಿಕ್ಷಣವು ಯೋರೋಪಿಯನ್ ಸಾಹಿತ್ಯ ಮತ್ತು ವಿಜ್ಞಾನವನ್ನು ಒಳಗೊಂಡಿತ್ತು. ೧೯ನೇ ಶತಮಾನದ ಮದ್ಯ ಭಾಗದಲ್ಲಿ ಜಿಲ್ಲೆಯಾದ್ಯಂತ ಕೇವಲ ಮೂರು ಶಾಲೆಗಳಿದ್ದವು. ಅವುಗಳಲ್ಲಿ ಮೊದಲನೇಯದು ಪ್ರಾವಿಶ್ಸಿಯಲ್ ಶಾಲೆಯನ್ನು ಬಳ್ಳಾರಿಯ ಮುನ್ಸಿಪಾಲಿಟಿ (೧೮೫೫) ನೋಡಿಕೊಳ್ಳುತ್ತಿತ್ತು. ಎರಡನೆಯದು ಹರಪನಹಳ್ಳಿಯ ತಾಲೂಕು ಬೋರ್ಡ್ ನೋಡಿಕೊಳ್ಳುತ್ತಿತ್ತು. ಮೂರನೇಯದು ಬಳ್ಳಾರಿಯ ಪ್ರತಿಷ್ಠಿತ ವಾರ್ಡ್ಲಾ ಕಾಲೇಜು ನೋಡಿಕೊಳ್ಳುತ್ತಿತ್ತು.

"ವಾರ್ಡ್ಲಾ ಕಾಲೇಜನ್ನು ಕ್ರಿ.ಶ. ೧೮೪೬ರಲ್ಲಿ ಲಂಡನ್ನಿನ ಕ್ರಿಶ್ಚಿಯನ್ ಮಿಷನರಿ ಸೊಸೈಟಿಯ ಸಹಾಯಕ ನಿರ್ದೇಶಕರಾಗಿದ್ದ ರೆವ್ಹರೆಂಡ್.ಜೆ.ಎಸ್.ವಾರ್ಡ್ಲ್ ಇವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಲಾಗಿತ್ತು.

ಶ್ರೀ ಜೆ.ಪಿ.ಕೋಟಿಲಿಂಗಂ ಎಂಬ ಪ್ರಾಚಾರ್ಯರ ನೇತೃತ್ವದಲ್ಲಿ ವಾರ್ಡ್ಲಾ ದ್ವಿತೀಯ ದರ್ಜೆಯ ಕಾಲೇಜಾಗಿ ಜಿಲ್ಲೆಯಲ್ಲಿ ತುಂಬಾ ಹೆಸರು ಗಳಿಸಿತು. ಆದರೆ ೧೯೦೮ರ ಬಳಿಕ ಈ ಸಂಸ್ಥೆಯನ್ನು ವಾರ್ಡ್ಲಾ ಹೈಸ್ಕೂಲಾಗಿ ಬದಲಾವಣೆ ಮಾಡಲಾಯಿತು".[೩] ಇವುಗಳನ್ನು ಹೊರತು ಪಡಿಸಿ ಜಿಲ್ಲೆಯಲ್ಲಿ ಮೂರು ಕಿರಿಯ ಪ್ರಾಥಮಿಕ ಮಾಧ್ಯಮಿಕ ಶಾಲೆಗಳಿದ್ದವು. ಅವುಗಳಲ್ಲಿ ಮೊದಲನೆಯದಾಗಿ ಶಾಲೆಯನ್ನು ಹೊಸಪೇಟೆಯ ತಾಲೂಕು ಮಂಡಳಿ ನೋಡಿಕೊಳ್ಳುತ್ತಿತ್ತು. ಎರಡನೆಯಾದಾಗಿ ಸಂಡೂರಿನ ಜೂಬ್ಲಿ ಸ್ಕೂಲ್ ಆಗಿದೆ. ಮೂರನೆಯದು ಬಳ್ಳಾರಿಯ ರೋಮನ್ ಕ್ಯಾಥೋಲಿಕ್ ಮಿಶನ್ನಿನ ಸೆಂಟ್ ಜೋಸೆಫ್ ಶಾಲೆ. ಹೆಣ್ಣುಮಕ್ಕಳಿಗಾಗಿ ಜಿಲ್ಲೆಯಲ್ಲಿ ಮೂರು ಅನುದಾನಿತ ಶಾಲೆಗಳಿದ್ದವು. ಅವುಗಳಲ್ಲಿ ಗುಡ್‌ಶೆಪರ್ಡಿನ ನನ್ಸ್‌ಗಳು ನಡೆಸುತ್ತಿದ್ದ ಸಂತ ಫಿಲೋಮಿನಾ ಮಾಧ್ಯಮಿಕ ಶಾಲೆ ಮೊದಲನೆಯದು. ಮತ್ತೆ ಎರಡು ಕಿರಿಯ ಮಾಧ್ಯಮಿಕ ಶಾಲೆಗಳು ಎರಡು ಮಿಶನರಿ ಸಂತ ಪ್ರಾನ್ಸ್ ಝೇವಿಯರಿನ ಸ್ಥಳೀಯ ನನ್ಸ್‌ಗಳು ನಡೆಸಿಕೊಂಡು ಬರುತ್ತದೆ.

ಜಿಲ್ಲಾ ಮಂಡಳಿಯು ಕ್ರಿಶ ೧೮೭೯ರಲ್ಲಿ ಬಳ್ಳಾರಿ ಪಟ್ಟಣದಲ್ಲಿ "ಶಿಕ್ಷಕರ ತರಬೇತಿ ಶಾಲೆ"ಯನ್ನು ಪ್ರಾರಂಭಿಸಿತು. ಸ್ಥಳಿಯ ಮಂಡಳಿಯ ಸಹಾಯದಿಂದ ಕ್ರಿಶ ೧೮೯೨ರಲ್ಲಿ ಪ್ರಾರಂಭಿಸಲಾಗಿದ್ದ ನ್ಯಾಷನಲ್ ಶಾಲೆಯನ್ನು ಸರ್ಕಾರವು ತನ್ನ ವಶಕ್ಕೆ ತೆಗೆದುಕೊಂಡಿದೆ. ಈ ಕಾಲಾವಧಿಯಲ್ಲಿ ಜಿಲ್ಲೆಯಾದ್ಯಂತ ಯಾವುದೇ ತಾಂತ್ರಿಕ ಅಥವಾ ಕೈಗಾರಿಕಾ ತರಬೇತಿ ಶಾಲೆಗಳು ಇರಲಿಲ್ಲ. ಆದರೆ ಈಗಾಗಲೆ ಸಂತ ಫಿಲೋಮಿನಾ ಶಾಲೆಯ ನನ್ಸ್‌ಗಳು ಸಂಗೀತ ಮತ್ತು ಚಿತ್ರಕಲೆಗಳನ್ನು ಅನೌಪಚಾರಿಕವಾಗಿ ತರಬೇತಿಯನ್ನು ನೀಡುತ್ತಿದ್ದರು.

ಕ್ರಿ.ಶ. ೧೯೨೩ರಲ್ಲಿ ಸರ್ಕಾರವು ಪೂರ್ವ ಪ್ರಾಥಮಿಕ ಶಿಕ್ಷಣವನ್ನು ವಿಸ್ತರಿಸುವ ಅವಶ್ಯಕತೆಯನ್ನು ಮನಗಂಡು, ಈಗಾಗಲೆ ಅಸ್ತಿತ್ವದಲ್ಲಿದ್ದ ಇಂಡೋಜಿನಿಯಸ್ ಮಾದರಿಯ ಶಾಲೆಗಳನ್ನು ಸುಧಾರಿಸುವ ಮತ್ತು ಸ್ಥಳಿಯ ಮಂಡಳಿಯ ಸಹಾಯದಿಂದ ಶಾಲೆಗಳು ಇಲ್ಲದೇ ಇರುವ ಪ್ರದೇಶಗಳಲ್ಲಿ ಹೊಸ ಶಾಲೆಗಳನ್ನು ಸ್ಥಾಪಿಸಲು ಪ್ರಾರಂಭಿಸಿತು. ಹೀಗೆ ಶಾಲೆಗಳೆ ಇಲ್ಲದಿರುವ ಪ್ರದೇಶಗಳಲ್ಲಿ ಶಾಲೆಗಳ ಸ್ಥಾಪನೆ ಸ್ಥಳೀಯರಿಗೆ ಹೊಸ ಹುರುಪು ನೀಡಿತು. ಮುಂದೆ ಬರುವಂತಹ ಖಾಸಗಿ ವ್ಯಕ್ತಿಗಳು ಅಥವಾ ಸಂಘಟನೆಗಳಿಗೆ ಸರ್ಕಾರವು ಉದಾರ ಸಹಾಯದಿಂದ ಧನವನ್ನು ನೀಡಿತು. ಇದರಿಂದಾಗಿ ಜಿಲ್ಲೆಯ ಸಾಕ್ಷರತೆಯ ಮಟ್ಟ ಪುರುಷರಲ್ಲಿ ೧೬.೮೩% ಮತ್ತು ಸ್ತ್ರೀಯರಲ್ಲಿ ಪ್ರತಿಶತ ೧.೩೩%ರಷ್ಟಾಯಿತು. ಬಳ್ಳಾರಿ ಜಿಲ್ಲೆಯು ೧೯೫೩ರಲ್ಲಿ ಹೊಸ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾಯಿತು. ಜಿಲ್ಲೆಯಲ್ಲಿ ೪೯೪ ಎಲಿಮೆಂಟರಿ ಶಾಲೆಗಳು ಅಸ್ತಿತ್ವದಲ್ಲಿದ್ದವು. ಕ್ರಿಶ ೧೯೫೩ರಲ್ಲಿ ಕಿರಿಯ ಪೂರ್ವ ಪ್ರಾಥಮಿಕ ಶಾಲೆಗಳಲ್ಲಿ ಒಟ್ಟು ೩೩.೮೦೦ ವಿದ್ಯಾರ್ಥಿಗಳು ಮತ್ತು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಒಟ್ಟು ೮.೬೦೭ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದರು.

ಕ್ರಿ.ಶ. ೧೯೫೬ ಡಿಸೆಂಬರ್‌ನಲ್ಲಿ ಸ್ವತಂತ್ರ ಭಾರತ ಸರ್ಕಾರವು 'ಶೈಕ್ಷಣಿಕ ಸಲಹಾ ಸಮಿತಿ'ಯನ್ನು ಸ್ಥಾಪಿಸಿತು. ಅದು ಹೊಸದಾಗಿ ರೂಪಗೊಂಡ ರಾಜ್ಯಕ್ಕೆ ವ್ಯವಸ್ಥಿತವಾದ ಪಠ್ಯಕ್ರಮ ಮತ್ತು ಸಾಮಾನ್ಯ ಶಿಕ್ಷಣ ಮಾದರಿಯನ್ನು ಕಾರ್ಯರೂಪಕ್ಕೆ ತರಲಾಯಿತು ಕರ್ನಾಟಕದಲ್ಲಿ ಸ್ವಾತಂತ್ರ್ಯ ಪೂರ್ವದಿಂದಲೂ ವೀರಶೈವ ಮಠಗಳು ಮತ್ತು ಇತರೆ ಖಾಸಗಿ ಸಂಘ ಸಂಸ್ಥೆಗಳು ಶೈಕ್ಷಣಿಕ ಕ್ಷೇತ್ರಕ್ಕೆ ನೀಡಿದ ಸೇವೆ ಮಹತ್ತರವಾದುದು. ಆರಂಭದಿಂದಲೂ ಸರ್ಕಾರದ ಪ್ರಯತ್ನಗಳಿಗೆ ಪೂರಕವಾದ ಜಿಲ್ಲೆಯ ಸೇವೆ ವಿವಿದೆಡೆಗಳಲ್ಲಿ ವಿವಿಧ ಸಂಘ ಸಂಸ್ಥೆಗಳು ಒಂದಲ್ಲ ಒಂದು ರೀತಿಯಲ್ಲಿ ಕೈಜೋಡಿಸುತ್ತಲೇ ಬಂದಿದೆ. ಈ ದಿಶೆಯಲ್ಲಿ ವೀರಶೈವ ವಿದ್ಯಾವರ್ಧಕ ಸಂಘ ಬಳ್ಳಾರಿ, ಉಜ್ಜೆಯಿನಿ ಶ್ರೀ ಜಗದ್ಗುರು ಸದ್ಧರ್ಮ ಸಿಂಹಾಸನ ಜ್ಞಾನಗುರು ವಿದ್ಯಾಪೀಠ, ಟಿ.ಎಮ್.ಎ.ಇ. ಶಿಕ್ಷಣ ಸಂಸ್ಥೆ ಹರಪನಹಳ್ಳಿ, ಹೊಸಪೇಟೆಯ ಥಿಯೋಸಫಿಕಲ್ ಸೋಸೈಟಿ, ಎಸ್.ಇ.ಎಸ್ ಶಿಕ್ಷಣ ಸಂಸ್ಥೆ ಸಂಡೂರು, ಶ್ರೀ ಸಿದ್ದಲಿಂಗೇಶ್ವರ ಶಿಕ್ಷಣ ಸಂಸ್ಥೆ ಕಾನಮಡಗು, ತುಂಗಾಭದ್ರಾ ಶಿಕ್ಷಣ ಸಂಸ್ಥೆ ಕೊಟ್ಟೂರು, ಎಸ್.ಎಸ್. ಇ. ಸಂಸ್ಥೆ ಸಿರುಗುಪ್ಪ, ರೇಣುಕ ವಿದ್ಯಾಸಂಸ್ಥೆ ಹಗರಿಬೊಮ್ಮನಹಳ್ಳಿ, ಶರಭೇಶ್ವರ ವಿದ್ಯಾಸಂಸ್ಥೆ ಬಳ್ಳಾರಿ ಇವೇ ಮುಂತಾದ ಜಿಲ್ಲೆಯ ಕೆಲವು ಪ್ರತಿಷ್ಠಿತ ಖಾಸಗಿ ಶಿಕ್ಷಣ ಸಂಸ್ಥೆಗಳಾಗಿದ್ದವು. ಇವು ಪ್ರಾಥಮಿಕ, ಪ್ರೌಢ, ಕಾಲೇಜು ಮಟ್ಟದ ಉನ್ನತ ಶಿಕ್ಷಣ ಸೇರಿದಂತೆ ಕಾನೂನು ತಾಂತ್ರಿಕ ವೈದಕೀಯ ಔಷಧಿಯ ಮತ್ತು ಇತರೆ ವೃತ್ತಿಪರ ಶಿಕ್ಷಣವನ್ನು ನೀಡುತ್ತವೆ.

ಈ ಮೇಲಿನ ಖಾಸಗಿ ಒಡೆತನದ ಶೈಕ್ಷಣಿಕ ಸಂಸ್ಥೆಗಳಲ್ಲದೆ ಇನ್ನೂ ಹಲವಾರು ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು ಕೂಡ ಜಿಲ್ಲೆಯ ಶೈಕ್ಷಣಿಕ ಪ್ರಗತಿಗೆ ಕಾರಣಿಭೂತವಾಗಿವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ "ಸರ್ಕಾರಿ ಸಂಯುಕ್ತ ಪದವಿ ಪೂರ್ವ ಕಾಲೇಜು (೧೮೫೪), ಸರ್ಕಾರಿ ಮಹಿಳೆಯರ ಸಂಯುಕ್ತ ಪದವಿ ಪೂರ್ವ ಕಾಲೇಜು (೧೯೦೪), ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು (೧೯೪೮), ಸರ್ಕಾರಿ ಕೈಗಾರಿಕೆ ತರಬೇತಿ ಕೇಂದ್ರ (೧೯೫೭), ಸರ್ಕಾರಿ ಶಿಕ್ಷಕರ ತರಬೇತಿ ಸಂಸ್ಥೆ (೧೯೫೯), ತಾರನಾಥ್ ಆಯುರ್ವೇದಿಕ್ ವಿದ್ಯಾಪೀಠ ಹಾಗೂ ಸರ್ಕಾರಿ ವೈದಕೀಯ ಮಹಾವಿದ್ಯಾಲಯ (೧೯೬೧) ಇವು ಬಳ್ಳಾರಿಯ ವಿದ್ಯಾಕಾಂಕ್ಷಿಗಳ ಜ್ಞಾನದಾಹವನ್ನು ತಣಿಸುವಲ್ಲಿ ಮಹತ್ವಪೂರ್ಣವಾದ ಪಾತ್ರ ವಹಿಸುತ್ತಾ ಬಂದಿವೆ. ಕ್ರಿಶ ೧೯೫೩ ಅಕ್ಟೋಬರ್ ೧ರಂದು ಬಳ್ಳಾರಿ ಜಿಲ್ಲೆಯು ಹೊಸ ಮೈಸೂರು ರಾಜ್ಯದಲ್ಲಿ ವಿಲೀನಗೊಂಡ ಬಳಿಕ ಸರ್ಕಾರವು ಜಿಲ್ಲಾ ಕೇಂದ್ರ ಸ್ಥಳಗಳ ಜೊತೆಗೆ ತಾಲೂಕು ಹಾಗೂ ಗ್ರಾಮೀಣ ಪ್ರದೇಶಗಳಲ್ಲೂ ಮುಕ್ತ ಮನಸ್ಸಿನಿಂದ ಶಿಕ್ಷಣ ಸಂಸ್ಥೆಗಳನ್ನು ಹುಟ್ಟು ಹಾಕುವ ಮೂಲಕ ಆಯಾ ಪ್ರದೇಶಗಳ ವಿದ್ಯಾಕಾಂಕ್ಷಿಗಳು ತಮ್ಮ ಜ್ಞಾನ ದಾಹವನ್ನು ತಣಿಸಿಕೊಳ್ಳಲು ಅವಕಾಶ ಮಾಡಿಕೊಟ್ಟಿತು".[೪] ಶಿಕ್ಷಣ ಪ್ರಚಾರ ಮತ್ತು ಪ್ರಸಾರಕ್ಕೆ ಅನೂಕೂಲವಾಗಲು ಖಾಸಗಿ ಶಿಕ್ಷಣ ಸಂಸ್ಥೆಗಳಿಗೂ ಅನುದಾನ ನೀಡುವ ಸಂಪ್ರಾದಾಯ ಹುಟ್ಟು ಹಾಕಿತು. ಜಿಲ್ಲೆಯ ಪ್ರತಿಷ್ಠಿತ ತಾಲೂಕಾದ ಹೊಸಪೇಟೆಯು ಈ ಭಾಗದ ಜನರ

ಜೀವನಾಡಿಯಾಗಿದೆ. ಪ್ರಾಚೀನ ಕಾಲದಿಂದಲೂ ಈ ತಾಲೂಕು ಶಿಕ್ಷಣಕ್ಷೇತ್ರಕ್ಕೆ ಮಹತ್ತರ ಕೊಡುಗೆಯನ್ನು ಸಲ್ಲಿಸುತ್ತಾ ಬಂದಿದೆ. ಸ್ವಾತಂತ್ರ್ಯಪೂರ್ವದಲ್ಲಿ ಜಿಲ್ಲೆಯಲ್ಲಿದ್ದ ೩ ಕಿರಿಯ ಮಾಧ್ಯಮಿಕ ಶಾಲೆಗಳಲ್ಲಿ ಮೊದಲನೆಯ ಶಾಲೆಯನ್ನು ಹೊಸಪೇಟೆ ತಾಲೂಕು ಮಂಡಳಿಯೇ ನೋಡಿಕೋಳ್ಳುತ್ತಿತ್ತು. ೧೯೨೦-೨೧ರಲ್ಲಿಯೇ ಪ್ರೌಢಶಾಲಾ ತರಗತಿಗಳನ್ನು ಇಲ್ಲಿ ನಡೆಸಲಾಗುತ್ತಿತ್ತು. ತುಂಗಭದ್ರಾ ಯೋಜನೆಯಿಂದಾಗಿ ಉರ್ದು ಮತ್ತು ತೆಲಗು ವಿಭಾಗಗಳನ್ನು ೧೯೫೦ರಲ್ಲಿ ತೆರೆಯಲಾಯಿತು. ಹಾಗೆಯೇ ಈಗಾಗಲೆ ಅಸ್ತಿತ್ವದಲ್ಲಿದ್ದ ಸರ್ಕಾರಿ ಬಾಲಕಿಯರ ಮಾಧ್ಯಮಿಕ ಶಾಲೆಯನ್ನು ಪ್ರೌಢಶಾಲೆಯಾಗಿ ಮಾರ್ಪಡಿಸಲಾಗಿದೆ. ತಾಲೂಕಿನಲ್ಲಿಯೇ ಮೊದಲ ಬಾರಿಗೆ ಖಾಸಗಿಯಾಗಿ ೧೯೫೫ರಲ್ಲಿ ಪುರಸಭೆ ನಿಯಂತ್ರಣಕ್ಕೆ ಬಂದಿತು.

ಹೊಸಪೇಟೆ ತಾಲೂಕಿನಲ್ಲಿ ಪದವಿ ಶಿಕ್ಷಣ ನೀಡುವ ಕಾಲೇಜುಗಳ ಸಂಖ್ಯೆ ಒಟ್ಟು ನಾಲ್ಕು. ಇವುಗಳಲ್ಲಿ ಒಂದು ಸರ್ಕಾರಿ, ಉಳಿದ ಮೂರು ಖಾಸಗಿ ಕಾಲೇಜುಗಳಾಗಿವೆ. ಇವುಗಳಲ್ಲಿ ಹೊಸಪೇಟೆನಗರದಲ್ಲಿರುವ ವಿಜಯನಗರ ಕಾಲೇಜು ಪ್ರಮುಖವಾದುದು. ಇದು ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘದ ಅಶ್ರಯದಲ್ಲಿದ್ದು ೧೯೬೪ರ ಆಗಷ್ಟ ೨೪ರಂದು ಅಂದಿನ ಭಾರತದ ರಾಷ್ಟ್ರಪತಿ ಡಾ. ಜಾಕೀರ್ ಹುಸೇನ್ ಅವರಿಂದ ಉದ್ಘಾಟನೆಗೊಂಡಿತು. ಇಲ್ಲಿ ಕಲಾ, ವಾಣಿಜ್ಯ ಮತ್ತು ವಿಜ್ಞಾನ ವಿಭಾಗಗಳಿವೆ. ಇದು ಸರ್ಕಾರದ ಅನುದಾನದಡಿಯಲ್ಲಿ ನಡೆಸಲ್ಪಡುತ್ತದೆ. ಹೊಸಪೇಟೆಯ ಥಿಯೋಸಫಿಕಲ್ ಸೊಸೈಟಿಯು ೧೯೮೪ರಲ್ಲಿ ಮಹಿಳಾ ಪ್ರಥಮ ದರ್ಜೆಯ ಕಾಲೇಜನ್ನು ಸ್ಥಾಪಿಸಿತು. ಕಂಪ್ಲಿಯಲ್ಲಿ ಪ್ರಥಮ ದರ್ಜೆ ಮಹಾವಿದ್ಯಾಲಯ ವಿದೆ. ಇದು ೧೯೮೭ – ೮೮ರಲ್ಲಿ ಪ್ರಾರಂಭಗೊಂಡಿತು. ಚಿತ್ರದುರ್ಗ ಜಿಲ್ಲಾ ಮದಕರಿನಾಯಕ ವಿದ್ಯಾ ಸಂಸ್ಥೆಯು ಶ್ರೀ ಹಂಪಿ ವಿರುಪಾಕ್ಷೇಶ್ವರ ಸ್ವಾಮಿ ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ವಿದ್ಯಾಲಯವನ್ನು ೧೯೯೧-೯೨ರಲ್ಲಿ ಸಾಲಿನಲ್ಲಿ ಕಮಲಾಪುರದಲ್ಲಿ ಪ್ರಾರಂಭಿಸಲಾಯಿತು. ತೆಗ್ಗಿನಮಠ ಶಿಕ್ಷಣ ಸಂಸ್ಥೆ ಆಶ್ರಯದಲ್ಲಿ ೧೯೮೩ರಲ್ಲಿ ಹೊಸಪೇಟೆಯಲ್ಲಿ ಪಾಲಿಟೆಕ್ನಿಕ್ ಕಾಲೇಜು ಆರಂಭಗೊಂಡಿತು. ಇದರಿಂದಾಗಿ ಈ ಭಾಗದ ವಿದ್ಯಾರ್ಥಿಗಳು ತಾಂತ್ರಿಕ ಶಿಕ್ಷಣದಲ್ಲಿ ತೊಡಗಿ ಡಿಪ್ಲೋಮೊ ಪದವಿಗಳನ್ನು ಪಡೆಯಲು ಅವಕಾಶವಾಯಿತು. ಈ ಕಾಲೇಜು ಪ್ರಾರಂಭವಾಗುವುದಕ್ಕಿಂತ ಮುಂಚೆ ವಿದ್ಯಾರ್ಥಿಗಳು ಬಳ್ಳಾರಿ ಮತ್ತು ಇತರೆಡೆಗೆ ಹೋಗಿ ತಾಂತ್ರಿಕ ಶಿಕ್ಷಣ ಪಡೆಯುತ್ತಿದ್ದರು. ೧೯೮೩ರಲ್ಲಿ ಪ್ರಾರಂಭಗೊಂಡ ತೆಗ್ಗಿನಮಠ ಸಂಸ್ಥೆಯ ಐ.ಟಿ.ಐ. ಕಾಲೇಜು ಈ ಭಾಗದ ಮಕ್ಕಳು ಕೈಗಾರಿಕ ತರಬೇತಿಯನ್ನು ಪಡೆದು ಸ್ಥಳೀಯ ಕೈಗಾರಿಕೆಗಳಲ್ಲಿ ಕಾರ್ಯ ನಿರ್ವಹಿಸತೊಡಗಿದ್ದಾರೆ. ಇದೆ ತೆಗ್ಗಿನಮಠದ ಸಂಸ್ಥೆಯು ೧೯೯೧ರಲ್ಲಿ ಹೊಸಪೇಟೆಯುಲ್ಲಿ ಆಯುರ್ವೇದ ವೈದಕೀಯ ಶಿಕ್ಷಣ ಸಂಸ್ಥೆ ಮತ್ತು ಅಸ್ಪತ್ರೆಯನ್ನು ಸಹ ಆರಂಭಿಸಿತು.

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕು ಶೈಕ್ಷಣಿಕವಾಗಿ ಹಿಂದುಳಿದ ಪ್ರದೇಶವಾಗಿದ್ದು ಸಾಧಿಸಬೇಕಾದ ಶೈಕ್ಷಣಿಕ ಪ್ರಗತಿ ನಿರೀಕ್ಷಿತ ಮಟ್ಟವನ್ನು ಮುಟ್ಟಿಲ್ಲ. ಸ್ವಾತಂತ್ರ್ಯಪೂರ್ವದಲ್ಲಿ ಅನೇಕ ಹಳ್ಳಿಗಳಲ್ಲಿ ಪ್ರಾಥಮಿಕ ಶಾಲೆಗಳಿದ್ದು, ಪ್ರೌಢಶಾಲಾ ಶಿಕ್ಷಣಕ್ಕೆ ಕೂಡ್ಲಿಗಿ ಹಾಗೂ ಕೊಟ್ಟೂರಿಗೆ ಹೋಗಬೇಕಿತ್ತು. ಸ್ವಾತಂತ್ರ್ಯನಂತರ ತಾಲೂಕು ಬೋರ್ಡ್‌ಗಳು ಅಸ್ತಿತ್ವಕ್ಕೆ ಬಂದ ಮೇಲೆ ಅದರ ಆಶ್ರಯದ ಪ್ರೌಢಶಾಲೆಗಳು ಪ್ರಾರಂಭವಾದವು. ೧೯೬೦ರ ದಶಕದಲ್ಲಿ ಚಿಕ್ಕಜೋಗಿಹಳ್ಳಿಯಲ್ಲಿ, ಕೂಡ್ಲಿಗಿ ಹಾಗೂ ಕೊಟ್ಟೂರಿನಲ್ಲಿ ತಾಲೂಕು ಬೋರ್ಡ್ ಶಾಲೆಗಳಿದ್ದು, ಅವು ಕಾರ್ಯ ನಿರ್ವಹಿಸುತ್ತವೆ. ಅನಂತರ ಕಾನಮಡುಗಿನಲ್ಲಿ ಶ್ರೀ ಶರಣಬಸವೇಶ್ವರ ಶಾಲೆಗಳು, ಪ್ರೌಢಶಾಲೆಗಳು ಪ್ರಾರಂಭಗೊಂಡವು. ವೀರಶೈವರ ಪಂಚಪೀಠಗಳಲ್ಲಿ ಒಂದಾದ ಉಜ್ಜನಿಯ ಶ್ರೀ ಸಿದ್ದೇಶ್ವರ ಜಗದ್ಗುರುಗಳು ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ನೀಡುವ ಉದ್ದೇಶದಿಂದ ಉಜ್ಜನಿಯಲ್ಲಿ ಅನಂತರ ಹೊಸಳ್ಳಿಯಲ್ಲಿ ಪ್ರೌಢಶಾಲೆಯನ್ನು ತೆರದು ಶಿಕ್ಷಣ ಪ್ರಸಾರ ಕಾರ್ಯವನ್ನು ನಡೆಸುತ್ತಾ ಬಂದಿದ್ದಾರೆ. ಕೂಡ್ಲಿಗಿ ತಾಲೂಕಿನ ಶೈಕ್ಷಣಿಕ ಕ್ಷೇತ್ರಕ್ಕೆ ಖಾಸಗಿ ಶಿಕ್ಷಣ ಸಂಸ್ಥೆಗಳ ಕೊಡುಗೆ ಅಪಾರವಾದುದು. ೧೯೮೦ರ ದಶಕದಲ್ಲಿ ಅನೇಕ ಖಾಸಗಿ ಪ್ರೌಢಶಾಲೆಗಳು ಪ್ರಾರಂಭವಾದವು. ಅದರಲ್ಲಿ ಕೂಡ್ಲಿಗಿ ಹಾಗೂ ಕೊಟ್ಟೂರಿನಲ್ಲಿ ರೇಣುಕಾ ವಿದ್ಯಾ ಸಂಘ ಆಶ್ರಯದಲ್ಲಿ ೨ ಪ್ರೌಢಶಾಲೆಗಳು ಆರಂಭಗೊಂಡವು. ಆದರೆ ಕಾಲೇಜು ಮಟ್ಟದಲ್ಲಿ ಶಿಕ್ಷಣದಲ್ಲಿ ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘದ ವತಿಯಿಂದ ಕೊಟ್ಟೂರಿನಲ್ಲಿ ೧೯೬೩ರಲ್ಲಿಯೇ ಸ್ಥಾಪಿತವಾದ ಶ್ರೀ ಕೊಟ್ಟೂರೇಶ್ವರ ಪದವಿಪೂರ್ವ ಮತ್ತು ಪದವಿ ಮಹಾವಿದ್ಯಾಲಯದ ಕೊಡುಗೆ ಮಹತ್ತರವಾದುದು. ಇವುಗಳ ಜೊತೆಗೆ ಹೀರೆಮಠ ವಿದ್ಯಾಪೀಠ ಸಿದ್ದಲಿಂಗೇಶ್ವರ ವಿದ್ಯಾಸಂಸ್ಥೆ ಕಾನಮಡಗು, ಶ್ರೀ ಜಗಳೂರು ಪಾಪಿನಾಯಕ ವಿದ್ಯಾ ಸಂಸ್ಥೆ ಇತ್ಯಾದಿ. ಕೂಡ್ಲಿಗಿ ತಾಲೂಕಿನಲ್ಲಿ ಒಟ್ಟು ೪೪ ಪ್ರೌಢಶಾಲೆಗಳು, ೭ ಪದವಿ ಪೂರ್ವ ಕಾಲೇಜುಗಳು, ೩ ಪ್ರಥಮ ದರ್ಜೆ ಕಾಲೇಜುಗಳು, ೫ ಡಿ.ಇಡಿ., ೧ ಸಿ.ಪಿ.ಇಡಿ, ೧ ಬಿ.ಪಿ.ಇಡಿ ಹಾಗೂ ೧೨ ಐ.ಟಿ.ಐ. ಕಾಲೇಜುಗಳು ಶೈಕ್ಷಣಿಕ ಕಾರ್ಯವನ್ನು ನಿರ್ವಹಿಸುತ್ತವೆ.

ಮತ್ತೊಂದು ತಾಲೂಕಾದ ಹೂವಿನ ಹಡಗಲಿಯು ಶೈಕ್ಷಣಿಕವಾಗಿ ಜಿಲ್ಲೆಯಲ್ಲಿ ಅತ್ಯಂತ ಹಿಂದುಳಿದ ತಾಲೂಕಾಗಿದೆ. ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಅವರಿಗೆ ಉನ್ನತ ಶಿಕ್ಷಣವನ್ನು ನೀಡುವ ಉದ್ದೇಶದಿಂದ ೧೯೭೦ರಲ್ಲಿ ಗಂಗಾವತಿ ಭಾಗ್ಯಮ್ಮ ಗ್ರಾಮೀಣ ಮಹಾವಿದ್ಯಾಲಯವನ್ನು ಹೂವಿನ ಹಡಗಲಿಯಲ್ಲಿ ಸ್ಥಾಪಿಸಲಾಯಿತು. ಇದು ಹೂವಿನ ಹಡಗಲಿಯ ಮೊಟ್ಟ ಮೊದಲ ಶೈಕ್ಷಣಿಕ ಸಂಸ್ಥೆಯಾಗಿದ್ದು ಶಿಕ್ಷಣ, ವಾಣಿಜ್ಯ ಹಾಗೂ ವಿಜ್ಞಾನ ವಿಭಾಗಗಳನ್ನು ಹೊಂದಿದೆ. ಪದವಿಪೂರ್ವ ಮತ್ತು ಪದವಿ ಹಂತದ ಶಿಕ್ಷಣವನ್ನು ನೀಡುವಲ್ಲಿ ಯಶಸ್ಸು ಸಾಧಿಸಿದೆ. ಇದರ ಜೊತೆಗೆಯೇ ತಾಲೂಕಿನಲ್ಲಿ ೮ ಪದವಿ ಪೂರ್ವ ಕಾಲೇಜುಗಳು, ತುಂಗಭದ್ರಾ ಪ್ರೌಢಶಾಲೆ, ಜ್ಞಾನಗಂಗಾ ಪ್ರೌಢಶಾಲೆ ಮುಂತಾದ ಶಿಕ್ಷಣ ಸಂಸ್ಥೆಗಳು ಶಿಕ್ಷಣದ ಪ್ರಸಾರ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ.

೧೯೯೭-೯೮ ರವರೆಗೂ ಬಳ್ಳಾರಿ ಜಿಲ್ಲೆಯ ಒಂದು ಪ್ರಮುಖ ತಾಲೂಕಾಗಿದ್ದ ಹರಪನಹಳ್ಳಿಯು ಈಗ ದಾವಣಗೇರಿ ಜಿಲ್ಲೆಗೆ ಸೇರ್ಪಡೆಯಾಗಿದ್ದು ಜಿಲ್ಲೆಯ ಒಟ್ಟು ಶೈಕ್ಷಣಿಕ ಸುಧಾರಣೆಯಲ್ಲಿ ಮಹತ್ತರವಾದ ಕೊಡುಗೆಯನ್ನು ಸಲ್ಲಿಸಿದೆ. ಹೀಗೆ ಬೆಳೆಯುತ್ತಾ ಬಂದು ಇಂದು ಅದು ೧ ಡಿ. ಫಾರ್ಮ, ೧ ಬಿಫಾರ್ಮಾ, ೧ ಎಂಫಾರ್ಮಾ, (ಎಸ್.ಸಿ.ಎಮ್ ಫಾರ್ಮಾಸಿ. ಕಾಲೇಜು), ಹರಪನಹಳ್ಳಿ ಹಾಗೂ ಹೊಸಪೇಟೆಗಳಲ್ಲಿ ಒಂದೊಂದು ಪಾಲಿಟೆಕ್ನಿಕ್ ಕಾಲೇಜು, ಎರಡು ಆಯುರ್ವೇದಿಕ್ ಕಾಲೇಜು, ವೈದಕೀಯ. ಶಿಕ್ಷಣ ಸಂಸ್ಥೆಗಳು, (ಭದ್ರಾವತಿ ಮತ್ತು ಹೊಸಪೇಟೆ) ೨ ಹೈಸ್ಕೂಲಗಳನ್ನು ಹಲವಾರು ಪ್ರಾಥಮಿಕ ಶಾಲೆಗಳನ್ನು ಹುಟ್ಟು ಹಾಕಿದೆ. ಬಳ್ಳಾರಿಯ ವಿ.ವಿ. ಸಂಘವು ೧೯೭೨ರಲ್ಲಿ ಅಂಬ್ಲಿದೊಡ್ಡಭರಮಪ್ಪ ಮಹಾವಿದ್ಯಾಲಯವನ್ನು ಸ್ಥಾಪಿಸಿತು. ಇದರಿಂದ ಹರಪನಹಳ್ಳಿಯ ತಾಲೂಕಿನ ಅಸಂಖ್ಯಾತ ವಿದ್ಯಾರ್ಥಿಗಳಿಗೆ ಉತ್ತಮ ಗುಣಮಟ್ಟದ ಶಿಕ್ಷಣ ಸಿಗುವತಾಯಿತು.

ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ಕ್ಷೇತ್ರಕ್ಕೆ ಮತ್ತೊಂದು ಬಳುವಳಿಯೆಂದರೆ ಸಿರುಗುಪ್ಪಾ ತಾಲೂಕಿನ ಪ್ರತಿಷ್ಠಿತ ಎಸ್.ಇ.ಎಸ್. ಶಿಕ್ಷಣ ಸಂಸ್ಥೆಯಾಗಿದೆ. ಇದು ೧೯೭೪ರಲ್ಲಿ ಕರ್ನಾಟಕ ಸರ್ಕಾರದ ಮಾಜಿ ಸಚಿವರಾಗಿದ್ದ ಪಿ. ರಾಮಯ್ಯ ಇವರ ನೇತೃತ್ವದಲ್ಲಿ ಉದ್ಘಾಟನೆಗೊಂಡಿತು. ಸಿರುಗುಪ್ಪ ತಾಲೂಕಿನ ಅತ್ಯಂತ ದೊಡ್ಡ ಶಿಕ್ಷಣ ಸಂಸ್ಥೆಯಾಗಿ ಬೆಳೆದಿರುವ ಈ ಎಸ್.ಇ.ಎಸ್. ಸಂಸ್ಥೆ ಕನ್ನಡ ಹಾಗೂ ಇಂಗ್ಲೀಷ್ ಮಾದ್ಯಮಗಳ ಪ್ರತ್ಯೇಕ ಪ್ರಾಥಮಿಕ ಪ್ರೌಢಶಾಲೆಗಳನ್ನು ಒಳಗೊಂಡಿದೆ. ಇದು ೧ ಬಾಲಕಿಯರ ಸಂಯುಕ್ತ ಪದವಿ ಪೂರ್ವ ಕಾಲೇಜು, ೧ ಸಹ ಶಿಕ್ಷಣ ಆಧಾರಿತ ಕಲಾ ಮತ್ತು ವಿಜ್ಞಾನ ಪದವಿ ಪೂರ್ವ ಕಾಲೇಜು, ವೃತ್ತಿಪರ ತರಬೇತಿ ವಿಭಾಗಗಳಾದ ಪ್ಯಾರ ಮೆಡಿಕಲ್ ಕಾಲೇಜು ಹೀಗೆ ಸುಮಾರು ಶಾಲೆಗಳು ಶೈಕ್ಷಣಿಕ ಕಾರ್ಯವೆಸಗುತ್ತಿವೆ. ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಶ್ವ ಹಿಂದೂ ಪರಿಷತ್ತಿನ ಜ್ಯೋತಿ ಪ್ರಾಥಮಿಕ ಮತ್ತು ಪ್ರೌಢಶಾಲೆ, ವಿಜಯಮೇರಿ ಕ್ರಿಶ್ಚಿಯನ್ ಮಿಷನರಿಯವರ ಪ್ರಾಥಮಿಕ ಮತ್ತು ಪ್ರೌಢಶಾಲೆ. ಬಳ್ಳಾರಿಯ ವಿ.ವಿ. ಸಂಘದವರ ವಿವೇಕಾನಂದರ ಪ್ರಾಥಮಿಕ ಪ್ರೌಢಶಾಲೆಗಳು ಹೀಗೆ ಸಿರುಗುಪ್ಪ ತಾಲೂಕಿನಲ್ಲಿ ಶೈಕ್ಷಣಿಕ ಸೇವೆ ಸಲ್ಲಿಸುತ್ತಿರುವ ಇತರ ಪ್ರಮುಖ ವಿದ್ಯಾಸಂಸ್ಥೆಗಳಾಗಿವೆ.

**ಜಿಲ್ಲೆಯ ಪ್ರಾಥಮಿಕ ಶಿಕ್ಷಣದ ಪ್ರಗತಿ**

ಕರ್ನಾಟಕದಲ್ಲಿ ಪ್ರಸ್ತುತ ದಶಕವನ್ನು ಶೈಕ್ಷಣಿಕ ರಚನಾತ್ಮಕ ಪ್ರಗತಿಪರ ಆಂದೋಲನ ಕಾಲವೆಂದು ಪರಿಗಣಿಸಬಹುದು. "೧೯೮೬ ರ ರಾಷ್ಟ್ರೀಯ ಶಿಕ್ಷಣ ನೀತಿಯಿಂದಾಗಿ ಹಾಗೂ ಅಕ್ಷರ ದಾಸೋಹ ದಾಖಲಾತಿ ಆಂದೋಲನ, ಬಾ ಮರಳಿ ಶಾಲೆಗೆ, ಕೂಲಿಯಿಂದ ಶಾಲೆಗೆ, ಬೀದಿಯಿಂದ ಶಾಲೆಗೆ, ಕೆಲವು ವಿಶೇಷ ಯೋಜನೆಗಳಡಿಯಲ್ಲಿ ಜಿಲ್ಲೆಯು ಶೈಕ್ಷಣಿಕವಾಗಿಯೂ ಸಾಕಷ್ಟು ಪ್ರಗತಿ ಸಾಧಿಸಿದೆ. ೧೯೬೧ರಲ್ಲಿ ಕೇವಲ ೨೦.೯%ರಷ್ಟಿದ್ದ ಜಿಲ್ಲೆಯ ಸಾಕ್ಷರತಾ ಪ್ರಮಾಣವು ೧೯೯೧ರಲ್ಲಿ

ಪ್ರತಿಶತ ೩೬.೦% ರಷ್ಟು ಹೆಚ್ಚಾಗಿದೆ. ೨೦೦೧ರಲ್ಲಿ ಜಿಲ್ಲೆಯ ಸಾಕ್ಷರತೆಯ ಪ್ರಮಾಣವು ಪ್ರತಿಶತ ೫೮% ರಷ್ಟಾಗಿದೆ. ೨೦೦೪-೦೫ರಲ್ಲಿ ಒಟ್ಟು ೧೬೨೭ ಪ್ರಾಥಮಿಕ ಶಾಲೆಗಳನ್ನು ಹೊಂದಿದ್ದು ಅವುಗಳಲ್ಲಿ ೧೨೭೦ ಸರ್ಕಾರಿ ಶಾಲೆಗಳು ಮತ್ತು ೩೫೨ ಖಾಸಗಿ ಶಾಲೆಗಳು ಜಿಲ್ಲೆಯ ಪ್ರಾಥಮಿಕ ಶಾಲೆಗಳಲ್ಲಿ ಒಟ್ಟು ೬೮೬೮ ಶಿಕ್ಷಕರು ಸೇವಾ ನಿರತವಾಗಿದ್ದು ಒಟ್ಟು ೩,೨೧,೯೨ (ವಿದ್ಯಾರ್ಥಿಗಳು ೧,೭೪,೦೩೦ ವಿದ್ಯಾರ್ಥಿನಿಯರು ೧೯,೭೬೬.೨) ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ".[೫]

## ಜಿಲ್ಲೆಯ ಪ್ರೌಢ ಶಿಕ್ಷಣದ ಪ್ರಗತಿ

ಬಳ್ಳಾರಿಯ ಕೇಂದ್ರಿಯ ಶಾಲೆ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು ಹಾಗೂ ಚಿಕ್ಕ ಜೋಗಿ ಹಳ್ಳಿಯ ನವೋದಯದ ವಸತಿ ಶಾಲೆಗಳು ಸೆರಿದಂತೆ ೨೦೦೪-೦೫ ರ ಹೊತ್ತಿಗೆ ಬಳ್ಳಾರಿ ಜಿಲ್ಲೆಯು ಒಟ್ಟು ೨೨೭ ಪ್ರೌಢ ಶಾಲೆಗಳನ್ನು ಹೊಂದಿದೆ. ಅವುಗಳಲ್ಲಿ ೮೧ ಸರ್ಕಾರಿ ಶಾಲೆಗಳು ಮತ್ತು ೧೪೬ ಖಾಸಗಿ ಶಾಲೆಗಳು ಇವೆ. ಒಟ್ಟು ಪ್ರೌಢ ಶಾಲೆಗಳಲ್ಲಿ ೫೪ ಅನುದಾನಿತ ಶಾಲೆಗಳಿದ್ದು, ಅವುಗಳಲ್ಲಿ ೩೩ ಸಾಮಾನ್ಯ ವರ್ಗದವರಿಂದ, ೩ ಪರಿಶಿಷ್ಠ ಜಾತಿಯವರಿಂದ, ೩ ಪರಿಶಿಷ್ಠ ವರ್ಗದವರಿಂದ, ೧ ಭಾಷೆ ಅಲ್ಪಸಂಖ್ಯಾತ ರಿಂದ, ೦೬ ಮತೀಯ ಅಲ್ಪಸಂಖ್ಯಾತರಿಂದ ನಡೆಯುವ ಶಾಲೆಗಳಾಗಿವೆ ಹಾಗೇಯೇ ಜಿಲ್ಲೆಯ ೯೨ ಅನುದಾನರಹಿತ ಖಾಸಗಿ ಪ್ರೌಢಶಾಲೆಗಳಲ್ಲಿ ೬೫ ಸಾಮಾನ್ಯ ವರ್ಗದವರಿಂದ, ೫ ಪರಿಶಿಷ್ಠ ಜಾತಿಯವರಿಂದ, ೧೦ ಪರಿಶಿಷ್ಠ ವರ್ಗದವರಿಂದ, ೧೨ ಮತೀಯ ಅಲ್ಪಸಂಖ್ಯಾತರಿಂದ ಮತ್ತು ಅಲ್ಪಸಂಖ್ಯಾತ ಭಾಷೆಯವರಿಂದ ನಡೆಯುವ ಶಾಲೆಗಳಾಗಿವೆ. ಸುಮಾರು ೧೦೪೨ ಶಿಕ್ಷಕರು ಬಳ್ಳಾರಿ ಜಿಲ್ಲೆಯ ವಿವಿಧ ಪ್ರೌಢಶಾಲೆಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ೬೯೯೧ ವಿದ್ಯಾರ್ಥಿಗಳು ಜಿಲ್ಲೆಯ ಪ್ರೌಢಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ೨೦೦೩-೦೪ ನೇ ಶೈಕ್ಷಣಿಕ ಸಾಲಿನಲ್ಲಿ ವರ್ಷದಲ್ಲಿ ಎಸ್. ಎಸ್.ಎಲ್. ಸಿ. ಪರೀಕ್ಷೆಗೆ ೨೬,೯೬೦ ವಿದ್ಯಾರ್ಥಿಗಳು ಕುಳಿತು ಕೊಂಡಿದ್ದು ಅದರಲ್ಲಿ ೮,೯೯೦ ಪುರುಷರು ಮತ್ತು ೬೦೬೦ ಮಹಿಳೆಯರು ಸೇರಿದಂತೆ ಒಟ್ಟು ೧೫,೦೫೦ ವಿದ್ಯಾರ್ಥಿಗಳು ಜಿಲ್ಲೆಯಲ್ಲಿ ಉತ್ತೀರ್ಣರಾಗಿದ್ದಾರೆ. ೨೦೦೩-೦೪ನೇ ಸಾಲಿನ ರಾಜ್ಯದ ಎಸ್.ಎಸ್.ಎಲ್.ಸಿ. ಫಲಿತಾಂಶ ೫೯.೦೭ ರಷ್ಟಿದೆ. ಅದಕ್ಕೆ ಹತ್ತಿರವಾಗಿ ಬಳ್ಳಾರಿ ಜಿಲ್ಲೆಯ ಫಲಿತಾಂಶವು ೫೫.೮% ರಷ್ಟಿದೆ.

## ಜಿಲ್ಲೆಯ ಪದವಿ ಪೂರ್ವ ಹಾಗೂ ಪದವಿ ಶಿಕ್ಷಣದ ಪ್ರಗತಿ.

ಪದವಿ ಪೂರ್ವ ಶಿಕ್ಷಣಕ್ಕೆ ಸಂಬಂಧಿಸಿದಂತೆ ಪ್ರಸ್ತುತವಾಗಿ ಜಿಲ್ಲೆಯಲ್ಲಿ ಒಟ್ಟು ೫೧ ಪದವಿ ಪೂರ್ವ ಕಾಲೇಜುಗಳಿದ್ದು ಅವುಗಳಲ್ಲಿ ೩೦ ಖಾಸಗಿ ಕಾಲೇಜುಗಳಿದ್ದು ೨೧ ಸರ್ಕಾರಿ ಕಾಲೇಜುಗಳಾಗಿವೆ, ಜಿಲ್ಲೆಯ ಒಟ್ಟು ಖಾಸಗಿ ಪದವಿ ಪೂರ್ವ ಶಿಕ್ಷಣ ಸಂಸ್ಥೆಗಳಲ್ಲಿ ೭ ಅನುಧಾನಿತ ಕಾಲೇಜುಗಳು ಮತ್ತು ೨೩ ಅನುದಾನರಹಿತ ಕಾಲೇಜುಗಳಿವೆ. ಮುಂದಿನ ಸಾಲಿನ ೨೦೦೪-೦೫ ಜಿಲ್ಲಾವಾರು ವಿವಿಧ ಹಂತದ ಶಿಕ್ಷಣ ಸಂಸ್ಥೆಗಳ ವಿವರವನ್ನು ನೀಡುತ್ತದೆ.

ಬಳ್ಳಾರಿ ಜಿಲ್ಲೆಯು ಸ್ನಾತಕ ಮತ್ತು ಸ್ನಾತಕೋತ್ತರ ಶಿಕ್ಷಣದಲ್ಲಿಯೂ ಇತ್ತೀಚೆಗೆ ಪ್ರಗತಿಯನ್ನು ಸಾಧಿಸುತ್ತಿದೆ. ಎರಡು ದಶಕಗಳ ಹಿಂದೆ ಜಿಲ್ಲೆಯಾದ್ಯಂತ ಸಾಮಾನ್ಯ ಶಿಕ್ಷಣಕ್ಕೆ ಸಂಬಂಧಿಸಿದ ಕೇವಲ ಏಳು ಸಂಸ್ಥೆಗಳು ಮಾತ್ರ ಇದ್ದವು. ಆದರೆ ೨೦೦೪-೦೫ ರವೆಳಗೆ ಸಾಮಾನ್ಯ ಶಿಕ್ಷಣ ಪ್ರಸಾರ ಮಾಡುವ ಪದವಿ ಮಹಾವಿದ್ಯಾಲಯಗಳು ಸಂಖ್ಯೆಯಲ್ಲಿ ೧೨ ಕ್ಕೆ ಏರಿವೆ. ಅವುಗಳಲ್ಲಿ ಬಹುತೇಕ ಮಹಾವಿದ್ಯಾಲಯಗಳು ಕರ್ನಾಟಕದ ಪ್ರತಿಷ್ಠಿತ ವಿದ್ಯಾಸಂಸ್ಥೆಗಳಲ್ಲಿ ಒಂದಾದ ಬಳ್ಳಾರಿ ವೀರಶೈವ ವಿದ್ಯಾವರ್ಧಕ ಸಂಘದಿಂದ ಸ್ಥಾಪಿಸಲ್ಪಟ್ಟಿವೆ. ಅವುಗಳಲ್ಲಿ ಬಹುತೇಕ ಸಂಸ್ಥೆಗಳು ಜಿಲ್ಲೆಯ ಪ್ರಥಮ ಕಾಲೇಜುಗಳಾಗಿವೆ. ಸ್ವಾತಂತ್ರ್ಯದ ಅನಂತರ ಜಿಲ್ಲೆಯ ಪದವಿ ಹಂತದ ಶಿಕ್ಷಣ ಪ್ರಸಾರ ಮಾಡುವ ಕೆಲಸವನ್ನು ಮೊಟ್ಟ ಮೊದಲು ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘವು ಕೈಗೆತ್ತಿಕೊಂಡು ಅಂದಿನಿಂದ ಇಂದಿನವರೆಗೂ ಈ ಭಾಗದ ಬಡ ವಿದ್ಯಾರ್ಥಿಗಳಿಗೆ ವರದಾನವಾಗಿ ಪರಿಣಮಿಸಿವೆ. ಜಿಲ್ಲೆಯಲ್ಲಿ ಸಾಮಾನ್ಯ ಶಿಕ್ಷಣವನ್ನು ಪ್ರಸಾರ ಮಾಡುತ್ತಿರುವ ಪದವಿ ಹಂತದ ಮಹಾವಿದ್ಯಾಲಯಗಳು ಇದ್ದು ೧೧ ಖಾಸಗಿ ಶಿಕ್ಷಣ ಸಂಸ್ಥೆಗಳಾಗಿವೆ. ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳನ್ನು ಹೊರತುಪಡಿಸಿ ಇನ್ನುಳಿದ ಬಹುತೇಕ ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕಲಾ, ವಾಣಿಜ್ಯ, ವಿಜ್ಞಾನ ಹಾಗೂ ಬಿ.ಬಿ.ಎಂ. ವಿಭಾಗಗಳಿದ್ದು ಇಂದಿನ ಅಧುನಿಕ ದಿನಗಳ ಬೇಡಿಕೆ ವಿಷಯಗಳಾದ ಬಯೋಟೆಕ್ನಾಲಜಿ, ಕಂಪ್ಯೂಟರ್ ಸೈನ್ಸ್, ಎಲಕ್ಟ್ರಾನಿಕ್ ವಿಷಯಗಳನ್ನು ಹೊಂದಿವೆ. ೧೯೯೧ ರ ಜನ ಗಣತಿಯ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ಪದವಿ ಹಂತದ ಸಾಮಾನ್ಯ ಶಿಕ್ಷಣವನ್ನು ಪಡೆಯುತ್ತಿರುವ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ ೯,೫೬೫. ಇವುಗಳನ್ನು ಹೊರತುಪಡಿಸಿ ಬಳ್ಳಾರಿಯ ಕೂಡ್ಲಿಗಿ ತಾಲೂಕಿನ ಹಿರಿಯ ದೈಹಿಕ ಶಿಕ್ಷಣ ತರಬೇತಿ ಕೇಂದ್ರ ಮತ್ತು ದೈಹಿಕ ಮಹಾವಿದ್ಯಾಲಯ. ಎರಡು ಪ್ರಾಥಮಿಕ ಶಿಕ್ಷಕರ ತರಬೇತಿ ಕೇಂದ್ರ, ವೀರಶೈವ ವಿದ್ಯಾವರ್ಧಕ ಸಂಘದವರಿಂದ ೧೯೬೩ರಲ್ಲಿ ಸ್ಥಾಪಿತವಾದ ಕೊಟ್ಟೂರೇಶ್ವರ ಶಿಕ್ಷಣ ಮಹಾವಿದ್ಯಾಲಯ ಬಳ್ಳಾರಿ ಮತ್ತು ೧೯೭೫ರಲ್ಲಿ ಸ್ಥಾಪಿತವಾದ ವುಂಕಿ ಸಣ್ಣ ರುದ್ರಪ್ಪ ಮಹಾವಿದ್ಯಾಲಯಗಳು. ಇವು ಜಿಲ್ಲೆಯ ಕೆಲವು ವೃತ್ತಿಪರ ಶಿಕ್ಷಣ ಕೇಂದ್ರಗಳಾಗಿವೆ. ವಿ.ವಿ ಸಂಘದವರಿಂದ ಸ್ಥಾಪಿತವಾದ ಕಾನೂನು ಮತ್ತು ಶಿಕ್ಷಣ ಮಹಾವಿದ್ಯಾಲಯಗಳು ಪರೀಕ್ಷೆಗಳಲ್ಲಿ ಪ್ರತಿ ವರ್ಷ ಹೆಚ್ಚಿನ ರ್‍ಯಾಂಕ್‌ಗಳಿಸುವುದರ ಮೂಲಕ ವಿಶ್ವವಿದ್ಯಾಲಯ ಮಟ್ಟದಲ್ಲಿ ಜಿಲ್ಲೆಯ ಕೀರ್ತಿಯನ್ನು ಬೆಳಗಿಸಿದ್ದಾರೆ.

**ಜಿಲ್ಲೆಯ ವೃತ್ತಿಪರ ಶಿಕ್ಷಣದ ಪ್ರಗತಿ**

ಪ್ರಸ್ತುತ ಬಳ್ಳಾರಿ ಜಿಲ್ಲೆಯು ೫ ಪಾಲಿಟೆಕ್ನಿಕಲ್ ಕಾಲೇಜುಗಳನ್ನು ಹತ್ತು ಹಲವಾರು ಕೈಗಾರಿಕೆ ತರಬೇತಿ ಕೇಂದ್ರಗಳು ಸ್ಥಾಪಿತವಾಗಿವೆ. ಇವುಗಳು ಯಶಶ್ವಿಯಾಗಿ ನಡೆಸಿಕೊಂಡು ಹೋಗುತ್ತಿವೆ. ವೀರಶೈವ ಕಾಲೇಜು ಜಿಲ್ಲೆಯ ಮೊಟ್ಟಮೊದಲ ಸಂಸ್ಥೆಯಾಗಿದೆ. ಅನಂತರ ವೀರಶೈವ ವಿದ್ಯಾವರ್ಧಕ ಸಂಘವು ಇತ್ತೀಚೆಗೆ ಬಳ್ಳಾರಿಯಲ್ಲಿ ತೆಗ್ಗಿನಮಠ ಶಿಕ್ಷಣ ಸಂಸ್ಥೆಯು, ೧೯೮೩ರಲ್ಲಿ

ಹೊಸಪೇಟೆಯಲ್ಲಿಯೂ ತಲಾ ಒಂದೊಂದು ಪಾಲಿಟೆಕ್ನಿಕಲ್ ಕಾಲೇಜುಗಳನ್ನು ಸ್ಥಾಪಿಸಲಾಯಿತು. ಎಸ್.ಇ.ಎಸ್. ಪಾಲಿಟೆಕ್ನಿಕ್ ಸಂಸ್ಥೆ ಸಿರುಗುಪ್ಪದಲ್ಲಿ ಪ್ರಾರಂಭಿಸಲಾಯಿತು. ಜಿಲ್ಲೆಯ ಈ ಕಾಲೇಜುಗಳು ಈ ಭಾಗದ ವಿದ್ಯಾರ್ಥಿಗಳ ಬೇಡಿಕೆಗೆ ತಕ್ಕಂತೆ ಸಿವಿಲ್, ಮೆಕಾನಿಕಲ್, ಆಟೋಮೋಬೈಲ್ಸ್, ಎಲಾಕ್ಟ್ರಾನಿಕ್ಸ್ ಮತ್ತು ಕಮ್ಯುನಿಕೇಶನ್ಸ್, ಕಂಪ್ಯೂಟರ್ ಮತ್ತು ಎಲಾಕ್ಟ್ರಾನಿಕ್ಸ್ ಇಂಜಿನಿಯರಿಂಗ್ ಮುಂತಾದ ವಿಭಾಗಗಳನ್ನು ಒಳಗೊಂಡಿವೆ. ಬಳ್ಳಾರಿಯ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯು (೧೯೫೭) ತೆಗ್ಗಿನಮಠದ ಸಂಸ್ಥೆಯವರು ಹೊಸಪೇಟೆಯಲ್ಲಿ ಸ್ಥಾಪಿಸಿದ ಕೈಗಾರಿಕಾ ತರಬೇತಿಯ ಸಂಸ್ಥೆ ಮತ್ತು ವೀರಶೈವ ವಿದ್ಯಾವರ್ಧಕ ಸಂಘದವರು ಬಳ್ಳಾರಿಯಲ್ಲಿ ಸ್ಥಾಪಿಸಿದ ತರಬೇತಿ ಸಂಸ್ಥೆ ಈ ಜಿಲ್ಲೆಯ ಪ್ರಮುಖ ಕೈಗಾರಿಕಾ ಶಿಕ್ಷಣ ಸಂಸ್ಥೆಗಳಾಗಿವೆ.

ಪದವಿ ಹಂತದ ತಾಂತ್ರಿಕ ಶಿಕ್ಷಣಕ್ಕೊಸ್ಕರ ಜಿಲ್ಲೆಯಲ್ಲಿ ಮೂರು ತಾಂತ್ರಿಕ ಮಹಾವಿದ್ಯಾಲಯಗಳು ಅಸ್ತಿತ್ವಕ್ಕೆ ಬಂದವು. ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘವು ಕ್ರಿಶ. ೧೯೮೦ರಲ್ಲಿ ವಿಜಯನಗರ ತಾಂತ್ರಿಕ ಮಹಾವಿದ್ಯಾಲಯ ಎಂಬ ಸಂಸ್ಥೆಯನ್ನು ಮತ್ತು ಹಿಂದಿನ ಮಾಜಿ ಮಂತ್ರಿಗಳು ಸಂಸದರೂ ಆದ ಶ್ರೀಮತಿ ಬಸವರಾಜೇಶ್ವರಿ ಬಳ್ಳಾರಿ ಇಂಜನಿಯರಿಂಗ್ ಕಾಲೇಜು ಎಂಬ ಸಂಸ್ಥೆಯನ್ನು ಬಳ್ಳಾರಿ ಪಟ್ಟಣದಲ್ಲಿ ಸ್ಥಾಪಿಸಿದರು. ಈ ಕಾಲೇಜುಗಳಲ್ಲಿ ಅಧುನಿಕ ವೈಜ್ಞಾನಿಕ ಯುಗದ ಬೇಡಿಕೆಗಳಿಗೆ ತಕ್ಕಂತೆ ಕಾಮಗಾರಿ ವಿಭಾಗ, ತಾಂತ್ರಿಕ ವಿಭಾಗ, ಕೈಗಾರಿಕಾ ಉತ್ಪನ್ನ ವಿಭಾಗ, ವಿದ್ಯುನ್ಮಾನ ವಿಭಾಗ, ಮಾಹಿತಿ ವಿಜ್ಞಾನ ವಿಭಾಗ, ಮತ್ತು ಉಪಕರಣ ಮತ್ತು ತಂತ್ರಜ್ಞಾನ ವಿಭಾಗ ಹಾಗೂ ಮಾಸ್ಟರ್ ಆಫ್ ಕಂಪ್ಯೂಟರ್ ಅಪ್ಲಿಕೇಷನ್ ಈ ಮುಂತಾದ ಪ್ರಮುಖ ವಿಭಾಗಗಳನ್ನು ಹೊಂದಿದೆ.

ಇತ್ತೀಚಿಗೆ ೧೯೯೮ರಲ್ಲಿ ವೀರಶೈವ ವಿದ್ಯಾವರ್ಧಕ ಸಂಘವು ವಿಜಯನಗರದ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ (ಎಂ.ಬಿ.ಎ.) ಸ್ಥಾಪಿಸುವುದರ ಮೂಲಕ ಈ ವಿಭಾಗದ ವಿದ್ಯಾರ್ಥಿಗಳಿಗೆ ಸ್ನಾತಕ್ಕೋತ್ತರ ಹಂತದಲ್ಲಿ ಮ್ಯಾನೆಜ್‌ಮೆಂಟ್‌ಗೆ ಸಂಬಂಧಿಸಿದ ಶಿಕ್ಷಣವನ್ನು ಪಡೆಯುವ ಸುವರ್ಣಾವಕಾಶ ಒದಗಿಸಿಕೊಟ್ಟಿವೆ.

"ವೈದ್ಯಕೀಯ ಶಿಕ್ಷಣಕ್ಕೆ ಸಂಬಂಧಿಸಿದಂತೆ ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘದವರು ಬಳ್ಳಾರಿಯಲ್ಲಿ ತೋಗರಿ ವೀರಮಲ್ಲಪ್ಪ ಸ್ಮಾರಕ ಔಷಧೀಯ ಮಹಾವಿದ್ಯಾಲಯವನ್ನು, ೧೯೮೫ರಲ್ಲಿ ಡಿ.ಫಾರ್ಮ್ಸ್ ಮತ್ತು ಬಿ.ಫಾರ್ಮ್ಸ್ ವಿಭಾಗಗಳನ್ನು ಪ್ರಾರಂಭಿಸಲಾಯಿತು. ಹಾಗೆಯೇ ಇದೆ ಸಂಸ್ಥೆಯಿಂದ ಹೊಸಪೇಟೆಯಲ್ಲಿ ವಿಜಯನಗರ ಕಾಲೇಜಿನ ಆವರಣದಲ್ಲಿ ದೊಡ್ಡಮನಿ ರಾಮಚಂದ್ರಪ್ಪ ಶೆಟ್ಟಿಸಾವಿತ್ರಮ್ಮ ಕಾಲೇಜ್ ಆಫ್ ಫಾರ್ಮಸಿ ಸ್ಥಾಪನೆ, ಎಸ್.ಇ.ಎಸ್. ಶಿಕ್ಷಣ ಸಂಸ್ಥೆಯಿಂದ ಸಿರುಗುಪ್ಪದಲ್ಲಿಯೂ ಡಿ.ಫಾರ್ಮ ಕೋರ್ಸಿಗೆ ಫಾರ್ಮಸಿ ಕಾಲೇಜನ್ನು ತೆರೆಯಲಾಯಿತು. ಇವುಗಳಲ್ಲದೆ ಶರಭೇಶ್ವರ ವಿದ್ಯಾಸಂಸ್ಥೆಯವರಿಂದ ೧೯೯೭ರಲ್ಲಿ ಬಳ್ಳಾರಿಯಲ್ಲಿ ಶರಭೇಶ್ವರ ಕಾಲೇಜ್ ಆಫ್

ನರ್ಸಿಂಗ್‌ನ್ನು, ಜವಾಹರ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯಿಂದ ಇಂಡಿಯನ್ ಸ್ಕೂಲ್ ಆಫ್ ನರ್ಸಿಂಗ್ ಹಾಗೂ ಸತ್ಯಂ ಶಿಕ್ಷಣ ಸಂಸ್ಥೆಯಿಂದ ಬಳ್ಳಾರಿ ಇನ್ಸ್‌ಸ್ಟಿಟ್ಯುಟ್ ಆಫ್ ನರ್ಸಿಂಗ್‌ಗಳೆಂಬ ಸಂಸ್ಥೆಗಳು ಬಳ್ಳಾರಿ ನಗರದಲ್ಲಿ ಪ್ರಾರಂಭವಾದವು. ಕರ್ನಾಟಕದ ಪ್ರಸಿದ್ಧ ವೈದ್ಯಕೀಯ ಕಾಲೇಜುಗಳಲ್ಲಿ ಒಂದಾದ ವಿಜಯನಗರ ಸರ್ಕಾರಿ ವೈದ್ಯಕೀಯ ಕಾಲೇಜು ೧೯೬೧ರಲ್ಲಿ ಅಗಸ್ಟ್‌ನಲ್ಲಿ ಕೇವಲ ೨೫ ವಿದ್ಯಾರ್ಥಿಗಳೊಂದಿಗೆ ಪ್ರಾರಂಭವಾಯಿತು. ೧೯೬೬ ಅಗಸ್ಟ್ ೧೨ರಿಂದ ವೈದಕೀಯ ಕಾಲೇಜಿನಲ್ಲಿ ಆಸ್ಪತ್ರೆಯನ್ನು ಪ್ರಾರಂಭಿಸಲಾಯಿತು. ೧೯೭೦-೭೧ರಲ್ಲಿ ಕಾಲೇಜಿನ ವಿದ್ಯಾರ್ಥಿಗಳ ಸಂಖ್ಯೆಯು ೭೦೯ಕ್ಕೆ ಏರಿತು. ಅದರಲ್ಲಿ ೬೫ ವಿದ್ಯಾರ್ಥಿನಿಯರು ಸಹಿತ ವ್ಯಾಸಂಗ ಮಾಡುತ್ತಿದ್ದರು. ಪ್ರಾರಂಭದಲ್ಲಿ ಇದು ಮೈಸೂರು ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ಇತ್ತು. ಮುಂದೆ ೧೯೬೫ರಲ್ಲಿ ಈ ಮಹಾವಿದ್ಯಾಲಯವು ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಟ್ಟಿತು. ಈ ಮಹಾವಿದ್ಯಾಲಯವು ಅಸ್ತಿತ್ವಕ್ಕೆ ಬರುವುದಕ್ಕಿಂತ ಪೂರ್ವದಲ್ಲಿಯೆ ೧೯೪೭ರಲ್ಲಿ ತಾರಾನಾಥ ಆಯುರ್ವೇದಿಕ್ ವಿದ್ಯಾಪೀಠವು ಬಳ್ಳಾರಿಯ ಸಂಗನಕಲ್ಲಿನಲ್ಲಿ ತಾರಾನಾಥ ಆಯುರ್ವೇದಿಕ್ ವೈದ್ಯಕೀಯ ಮಹಾವಿದ್ಯಾಲಯ ಪ್ರಾರಂಭಿಸಿತು. ಈ ಶಿಕ್ಷಣ ಸಂಸ್ಥೆಯು ಸಾರ್ವಜನಿಕರ ಧನ ಸಹಾಯದಿಂದ ನೆಡೆಸಲಾಗುತಿತ್ತು. ನಂತರ ಕರ್ನಾಟಕ ಸರ್ಕಾರ ವಹಿಸಿಕೊಂಡಿತು. ೧೯೬೮-೬೯ ರ ವೇಳೆಗೆ ಇದರಲ್ಲಿ ವೈದ್ಯಕೀಯಕ್ಕೆ ಸಂಬಂಧಪಟ್ಟಂತೆ ಡಿಪ್ಲೋಮೊ ಕೋರ್ಸ್‌ಗಳನ್ನು ನಡೆಸಲಾಗುತಿತ್ತು.[೬] ಅನಂತರ ಈ ಮಹಾವಿದ್ಯಾಲಯದಲ್ಲಿ ಬಿ.ಎಸ್.ಬಿ.ಎಮ್ ಪದವಿ ಕೋರ್ಸ್ ಪ್ರಾರಂಭಿಸಲಾಯಿತು. ಇತ್ತೀಚಿಗೆ ಕ್ರಿ.ಶ. ೧೯೯೧ರಲ್ಲಿ ತೆಗ್ಗಿನಮಠದ ಸಂಸ್ಥೆಯು ಹೊಸಪೇಟೆಯಲ್ಲಿ ಆಯುರ್ವೇದಿಕ್ ವೈದ್ಯಕೀಯ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿತು. ಈ ಭಾಗದ ವಿದ್ಯಾರ್ಥಿಗಳು ಬಿ.ಎ.ಎಂ.ಎಸ್. ಪದವಿಯನ್ನು ಪಡೆಯುವ ಅವಕಾಶ ನೀಡಿತು. ಈ ಮಹಾವಿದ್ಯಾಲಯವು ಸಂಸ್ಕೃತ ಸಿದ್ಧಾಂತ ದ್ರವ್ಯಗುಣ, ರಸಶಾಸ್ತ್ರ, ಶರೀರ ಶಾಸ್ತ್ರ, ಕಾಯ ಚಿಕಿತ್ಸಾ ಮತ್ತು ಪ್ರಸೂತಿ ತಂತ್ರಗಳೆಂಬ ವಿಭಾಗಗಳನ್ನು ಹೊಂದಿದೆ.

**ಡಿ.ಇಡಿ. ಬಿ.ಇಡಿ ಕಾಲೇಜುಗಳ ಸ್ಥಾಪನೆ**

ಬಳ್ಳಾರಿ ಜಿಲ್ಲೆಯ ಶಿಕ್ಷಕರ ಶಿಕ್ಷಣದ ಬಗ್ಗೆ ನೋಡುವುದಾದರೆ ಪ್ರೌಢಶಾಲಾ ಶಿಕ್ಷಕರ ತರಬೇತಿಗೆ ಜಿಲ್ಲೆಯಲ್ಲಿ ಸುಮಾರು ಆರು ಬಿ.ಇಡಿ. ಕಾಲೇಜುಗಳ ತರಬೇತಿ ಸಂಸ್ಥೆಗಳು ಕಾರ್ಯನಿರ್ವಸುತ್ತವೆ. ಬಳ್ಳಾರಿಯಲ್ಲಿ ಎರಡು ಬಿ.ಇಡಿ. ಜೊತೆಗೆ ಎರಡು ಎಂ.ಇಡಿ. ಹಾಗು ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯವು ಇದೆ. ಹೊಸಪೇಟೆ, ಹಡಗಲಿ, ಕೂಡ್ಲಿಗಿ, ಕೊಟ್ಟೂರೂನಲ್ಲಿ ತಲಾ ಒಂದೊಂದು ಬಿ.ಇಡಿ. ಕಾಲೇಜುಗಳಿದ್ದು, ಇವು ಶಿಕ್ಷಕ ತರಬೇತಿ ಸಂಸ್ಥೆಗಳಾಗಿವೆ. ಇನ್ನೂ ಪ್ರಾಥಮಿಕ ಶಾಲಾ ಶಿಕ್ಷಕರ ತರಬೇತಿಗೆ ಸಂಬಂದಿಸಿದಂತೆ ಜಿಲ್ಲೆಯಲ್ಲಿ ಸುಮಾರು ೨೮ ಡಿ.ಇಡಿ.

ಕಾಲೇಜಗಳು ತರಬೇತಿಯನ್ನು ನೀಡುತ್ತಿವೆ. ಇದರಿಂದ ಆರ್ಥಿಕವಾಗಿ ಹಿಂದುಳಿದ ವಿದ್ಯಾರ್ಥಿಗಳು ತಮ್ಮ ಊರಿನಲ್ಲಿ ಇದ್ದುಕೊಂಡು ತರಬೇತಿ ಪಡೆಯಲು ಅನೂಕೂಲವಾಗಿದೆ.

## ಜಿಲ್ಲೆಯ ಸ್ನಾತಕೋತ್ತರ ಶಿಕ್ಷಣದ ಪ್ರಗತಿ

ಸ್ನಾತಕೋತ್ತರ ಶಿಕ್ಷಣವನ್ನು ಈ ಪ್ರಾಂತದಲ್ಲಿ ಅಭಿವೃದ್ಧಿಗೊಳಿಸಿ ಕೊಳ್ಳುವುದಕೋಸ್ಕರ ಕರ್ನಾಟಕ ವಿಶ್ವವಿದ್ಯಾಲಯವು ೧೯೭೪ರಲ್ಲಿ ಜಿಲ್ಲೆಯ ಸಂಡೂರಿನ ನಂದಿಹಳ್ಳಿಯಲ್ಲಿ ಶ್ರೀ ಕೃಷ್ಣದೇವರಾಯ ಸ್ನಾತಕೋತ್ತರ ಕೇಂದ್ರವನ್ನು ಸ್ಥಾಪಿಸಿತು. ಅನಂತರ ೧೯೭೯ರಲ್ಲಿ ಇದು ಗುಲಬರ್ಗ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಟ್ಟಿತು. ಈ ಕೇಂದ್ರವು ಸದ್ಯದಲ್ಲಿ ಭೂಗರ್ಭಶಾಸ್ತ್ರ, ಮಿನರಲ್ ಪ್ರಾಸೆಸಿಂಗ್, ಮಿನರಲ್ ಎಕ್ಸ್‌ಪ್ಲೋರೇಶನ್‌ಗಳೆಂಬ ವಿಭಾಗಗಳನ್ನು, ಕನ್ನಡ ಹಾಗೂ ಸಮಾಜಶಾಸ್ತ್ರ ವಿಭಾಗಗಳನ್ನು ಒಳಗೊಂಡಿದೆ. ಅನಂತರ ಕರ್ನಾಟಕದ ನಾಡು, ನುಡಿ, ಕಲೆ, ಹಾಗೂ ಸಂಸ್ಕೃತಿ ಅಧ್ಯಯನ ಮತ್ತು ಸಂಶೋಧನೆಗಾಗಿ ರೂಪ ತಾಳಿದ ಸಂಸ್ಥೆ "ಹಂಪಿ ಕನ್ನಡ ವಿಶ್ವವಿದ್ಯಾಲಯವು" ೧೯೯೧ರಲ್ಲಿ ಪ್ರಾರಂಭವಾಯಿತು. ವಿಶ್ವವಿದ್ಯಾಲಯ ಕನ್ನಡ ಮನಸ್ಸುಗಳನ್ನು ಬೆಸೆಯಲು ಸಹಾಯಕವಾಗಿದೆ. ಅದೇ ರೀತಿಯಾಗಿ ೧೯೯೩ರಲ್ಲಿ ಗುಲಬರ್ಗಾ ವಿಶ್ವವಿದ್ಯಾಲಯವು ಬಳ್ಳಾರಿಯಲ್ಲಿ ಸ್ನಾತಕೋತ್ತರ ಕೇಂದ್ರವನ್ನು ಸ್ಥಾಪಿಸಿತು. ಈಗ ಸಂಸ್ಥೆಯು ಎಂ.ಬಿ.ಎ., ಎಂ.ಎಸ್.ಸಿ, ಇಂಡಸ್ಟ್ರಿಯಲ್ ಕೆಮಿಸ್ಟ್ರಿಗಳೆಂಬ ವಿಭಾಗಗಳನ್ನು ಹೊಂದಿವೆ.

ಒಟ್ಟಾರೆಯಾಗಿ ಹಿಂದುಳಿದ ಪ್ರದೇಶವೆಂದೆ ಗುರುತಿಸಿಕೊಂಡಿರುವ ಬಳ್ಳಾರಿ ಜಿಲ್ಲೆ ಶೈಕ್ಷಣಿಕವಾಗಿ ತನ್ನದೆಯಾದ ಮಹತ್ವ ಪಡೆದುಕೊಂಡಿದೆ. ಶೈಕ್ಷಣಿಕವಾಗಿ ಜಿಲ್ಲೆಯು ಸಾಧಿಸಬೇಕಾದುದ್ದು ಸಾಕಷ್ಟು ಇದೆ.

## ಭೌಗೋಳಿಕ ಪರಿಸರ

ಈ ಜಿಲ್ಲೆ ದೀರ್ಘ ಕಾಲದಿಂದ ದ್ವಿಭಾಷಾ ಪ್ರದೇಶವಾಗಿದೆ. ಭಾಷಾವಾರು ಪ್ರಾಂತಗಳು ರಚನೆಯಾದ ಮೇಲೆ ಇದರ ಪೂರ್ವಭಾಗ ಸಂಪೂರ್ಣ ಆಂಧ್ರಪ್ರದೇಶದ ಗಡಿಯನ್ನು ಹೊಂದಿದೆ. "ಈ ಜಿಲ್ಲೆಯು ೧೫°-೩೦° ಕರ್ನಾಟಕದ ಪೂರ್ವಭಾಗ ಮದ್ಯದಲ್ಲಿ ದಕ್ಷಿಣೋತ್ತರವಾಗಿ ಹಬ್ಬಿದೆ. ೧೪°- ೩೦° ಉತ್ತರ ಅಕ್ಷಾಂಶ ಹಾಗೂ ೭೫°-೪೦° ಮತ್ತು ೭೭°-೧೧° ಪೂರ್ವ ರೇಖಾಂಶಗಳು ಇವುಗಳ ಮದ್ಯದಲ್ಲಿದೆ. ಈ ಜಿಲ್ಲೆಯು ಉತ್ತರದಲ್ಲಿ ರಾಯಚೂರು ಜಿಲ್ಲೆ, ಪಶ್ಚಿಮದಲ್ಲಿ ಗದಗ ಜಿಲ್ಲೆ, ದಕ್ಷಿಣದಲ್ಲಿ ಚಿತ್ರದುರ್ಗ ಜಿಲ್ಲೆ ಹಾಗೂ ಪೂರ್ವದಲ್ಲಿ ಆಂಧ್ರಪ್ರದೇಶದ ಕರ್ನೂಲ್ ಮತ್ತು ಅನಂತಪುರ ಜಿಲ್ಲೆಗಳಿಂದ ಸುತ್ತುವರೆದಿದೆ."[೨] ತುಂಗಭದ್ರನದಿಯು ಜಿಲ್ಲೆಯಲ್ಲಿ ಪೂರ್ವ ಮತ್ತು ಉತ್ತರಾಭಿಮುಖವಾಗಿ ಹರಿಯುತ್ತದೆ. ಇದರ ಉಪನದಿಗಳು ಅಲ್ಲದೆ ಹಗರಿ ಮತ್ತು ಚಿಕ್ಕಹಗರಿ ಹಳ್ಳಗಳು ಹರಿಯುತ್ತವೆ. ಈ ಜಿಲ್ಲೆಯಲ್ಲಿ ಬೆಣಚು ಕಲ್ಲುಗಳಿಂದ ಕೂಡಿದ ಕಪ್ಪು ಮಣ್ಣಿನ ಭೂಮಿ ಹೆಚ್ಚಾಗಿದೆ.

"ಈ ಜಿಲ್ಲೆ ರಾಜ್ಯದ ಅಧಿಕ ಉಷ್ಣಾಂಶ ಇರುವ ಜಿಲ್ಲೆಗಳಲ್ಲಿ ಒಂದಾಗಿದೆ. ಚಳಿಗಾಲದಲ್ಲಿ ಕೆಲವೊಮ್ಮೆ ೧೫° ಸೆ. ಯಷ್ಟು ಕನಿಷ್ಠ ಉಷ್ಣಾಂಶವನ್ನು ಹೊಂದಿರುವುದನ್ನು ಬಿಟ್ಟರೆ ವರ್ಷದ ಹೆಚ್ಚಿನ ಅವಧಿಯಲ್ಲಿ ಅಧಿಕ ಉಷ್ಣಾಂಶ ಇರುತ್ತದೆ. ಜಿಲ್ಲೆಯ ವಿಸ್ತೀರ್ಣ ೯,೮೮೫ ಚದರ ಕಿಲೋ ಮೀಟರ್‌ಗಳಷ್ಟಿದೆ. ಇದು ರಾಜ್ಯದ ಒಟ್ಟು ವಿಸ್ತೀರ್ಣದ ಶೇಕಡ ೫.೧೬ ರಷ್ಟಿದ್ದು, ೧೧ ನೇ ಸ್ಥಾನದಲ್ಲಿದೆ. ಇಲ್ಲಿ ಸಿಗುವ ಕಬ್ಬಿಣ ಮತ್ತು ಮ್ಯಾಂಗನೀಸ್ ಖನಿಜಗಳಿಗೆ ವಿಶ್ವ ಮಾರುಕಟ್ಟೆಯಲ್ಲಿ ಉತ್ತಮ ಸ್ಥಾನವಿದೆ. ಇದರ ಜೊತೆಗೆ ಇನ್ನೂ ಅನೇಕ ಲೋಹ ಮತ್ತು ಅದಿರಿನ ನಿಕ್ಷೇಪ ಪ್ರಮಾಣ ೧೮.೮೧ ಲಕ್ಷ ಟನ್‌ಗಳೆಂದು ಅಂದಾಜು ಮಾಡಲಾಗಿದೆ. ಇಲ್ಲಿ ಉತ್ಪಾದನೆಯಾಗುವ ಕಬ್ಬಣದ ಅದಿರು ಅರ್ಧಕ್ಕಿಂತ ಹೆಚ್ಚು ಭಾಗವು ವಿದೇಶಗಳಿಗೆ ರಫ್ತಾಗುತ್ತದೆ."[೮] ಅತಿ ಹೆಚ್ಚು ಖನಿಜ ಸಂಪತ್ತು ಹೊಂದಿರುವ ಈ ಪ್ರದೇಶವು ಹೆಚ್ಚಿನ ಉದ್ಯೋಗ (ಕೂಲಿ)ವನ್ನು ಸೃಷ್ಟಿಸಿರುವುದರಿಂದ ಬೇರೆ ಬೇರೆ ಪ್ರದೇಶಗಳಿಂದ ಉದ್ಯೋಗವನ್ನಾಧರಿಸಿ ಬರುವವರ ಸಂಖ್ಯೆ ಸಹಜವಾಗಿದೆ. ಇಲ್ಲಿನ ಪ್ರಮುಖ ಬೆಳೆಗಳೆಂದರೆ, ಭತ್ತ, ಜೋಳ, ರಾಗಿ, ಸಜ್ಜೆ, ನವಣೆ, ಮೆಣಸಿನ ಕಾಯಿ, ಹತ್ತಿ, ಶೇಂಗಾ, ತೊಗರಿ ಇತ್ಯಾದಿ. ೧೯೫೩ರಲ್ಲಿ ತುಂಗಭದ್ರ ಜಲಾಶಯ ಯೋಜನೆ ಕಾರ್ಯಗತವಾದಾಗ ಈ ಜಿಲ್ಲೆಯಲ್ಲಿ ಹಸಿರು ಕ್ರಾಂತಿ ಪ್ರಾರಂಭವಾಯಿತು. ಇದು ಅಧಿಕ ಪ್ರಮಾಣದಲ್ಲಿ ನೀರಾವರಿ ಸೌಕರ್ಯ ಪಡೆದಿರುವ ಜಿಲ್ಲೆಗಳ ಪೈಕಿ ಇದೂ ಒಂದು.

**ರಾಜಕೀಯ ಪರಿಸರ**

ಜಿಲ್ಲೆಯ ಇತಿಹಾಸ ಮೌರ್ಯರ ಕಾಲದಿಂದ ಪ್ರಾರಂಭವಾಗುತ್ತದೆ. ಇವರ ನಂತರ ಕ್ರಮವಾಗಿ ಶಾತವಾಹನರು, ಬನವಾಸಿಯ ಕದಂಬರು, ಬಾದಮಿ, ಚಾಲುಕ್ಯರು, ನೋಳಂಬರು, ಗಂಗರ ಅಧೀನದಲ್ಲಿ ಈ ಜಿಲ್ಲೆಯ ಕೆಲವು ಭಾಗಗಳು ಇದ್ದವೆಂದು ಚಾರಿತ್ರಿಕ ದಾಖಲೆಗಳಿಂದ ತಿಳಿದು ಬರುತ್ತದೆ. ೧೧-೧೨ ನೇ ಶತಮಾನದಲ್ಲಿ ಕಲ್ಯಾಣದ ಚಾಲುಕ್ಯರ ಸಾಮಂತರಾಗಿದ್ದ ಉಚ್ಚಂಗಿಯ ಪಾಂಡ್ಯರು ಈ ಪ್ರದೇಶದಲ್ಲಿ ಆಳುತ್ತಿದ್ದರು. ಮಹಮದ್ ಬಿನ್-ತುಘಲಕ್‌ನ ಕಾಲದಿಂದ ಅಂತಿಮವಾಗಿ ಇದು ಪತನವಾಯಿತು. ಮುಂದೆ ಸುಮಾರು ಮುನ್ನೂರು ವರ್ಷಗಳ ಕಾಲ ಇದೆ ದಕ್ಷಿಣ ಭಾರತವನ್ನು ಆಳಿದ ವಿಜಯನಗರದ ಅರಸರು ಸೋತ ಮೇಲೆ ವಿಜಯನಗರ ಹಾಳು ಹಂಪೆಯಾಯಿತು. ಕದನದ ನಂತರದಲ್ಲಿ ಈ ಜಿಲ್ಲೆ ಆದಿಲ್‌ಶಾಹಿ ಸುಲ್ತಾನರ ಮತ್ತು ಕೆಲವು ಪಾಳೇಗಾರರ ಆಳ್ವಿಕೆಗೆ ಒಳಪಟ್ಟಿತು. ತರುವಾಯ ಮರಾಠರು ಮತ್ತು ಮೊಘಲರು ಇಲ್ಲಿ ಅಧಿಪತ್ಯ ನಡೆಸಿದರು. ೧೮ನೇ ಶತಮಾನದ ಕೊನೆಯ ಭಾಗದಲ್ಲಿ ಮೈಸೂರಿನ ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನ್ ಈ ಜಿಲ್ಲೆಯನ್ನು ಸಂಪೂರ್ಣವಾಗಿ ತನ್ನ ಅಧಿನಕ್ಕೆ ಒಳ ಪಡಿಸಿಕೊಂಡರು. ೧೭೯೨ ರ ಒಪ್ಪಂದದ ಪ್ರಕಾರ ಈ ಜಿಲ್ಲೆಯ ಕೆಲವು ಭಾಗಗಳನ್ನು ಟಿಪ್ಪು ಹೈದಾರಬಾದಿನ ನಿಜಾಮನಿಗೆ ಬಿಟ್ಟು ಕೊಟ್ಟ, ಶ್ರೀರಂಗ ಪಟ್ಟಣದ ಪತನಾ ನಂತರ ೧೮೦೦ರ ಹೊತ್ತಿಗೆ ಈ ಜಿಲ್ಲೆ ಬ್ರೀಟಿಷರಿಗೆ

ಸೇರಿ ಮದರಾಸು ಪ್ರಾಂತದ ಭಾಗವಾಯಿತು. ೧೯೫೩ರಲ್ಲಿ ವಾಂಛ್ಚುರವರ ವರದಿ ಪ್ರಕಾರ ಆಂಧ್ರಪ್ರದೇಶದಿಂದ ಕರೆಯಲಾದ ರಾಜ್ಯದಲ್ಲಿ ಅಂದಿನ ಬಳ್ಳಾರಿ ಜಿಲ್ಲೆಯ ಆದವಾನಿ, ಆಲೂರು ಮತ್ತು ರಾಯದುರ್ಗ ತಾಲೂಕುಗಳ ವಿಲಿನಾ ಮಿಕ್ಕಾಭಾಗ ಮೈಸೂರು ಸಂಸ್ಥಾನಕ್ಕೆ ಸೇರಿತು.

ಹೀಗೆ ಕಳೆದ ಇನ್ನೂರು ಮುನ್ನೂರು ವರ್ಷಗಳ ಕಾಲಾವಧಿಯಲ್ಲಿ ಬಳ್ಳಾರಿ ಜಿಲ್ಲೆಯ ಗಡಿರೇಖೆಗಳು ಪುನರ್ ರಚಿಸಲಾಗಿದೆ. ಅನೇಕ ಅಧಿಪತ್ಯಗಳ ಆಳ್ವಿಕೆಯ ಅನುಭವವು ಈ ಜಿಲ್ಲೆಯಾಗಿದೆ. ಈ ಜಿಲ್ಲೆ ಏಳು ತಾಲೂಕುಗಳನ್ನು ಒಳಗೊಂಡಿದೆ. ೧. ಬಳ್ಳಾರಿ, ೨. ಹೊಸಪೇಟೆ, ೩. ಹಡಗಲಿ, ೪ ಹಗರಿಬೊಮ್ಮನಹಳ್ಳಿ, ೫ ಕೂಡ್ಲಿಗಿ, ೬ ಸಂಡೂರು, ಮತ್ತು ೭ ಸಿರುಗುಪ್ಪ ಇದನ್ನು ಭೂಪಟ ೧ರಲ್ಲಿ ಕಾಣಬಹುದು. ೧೯೫೦ಕ್ಕೆ ಹಿಂದೆ ಬಳ್ಳಾರಿ ಜಿಲ್ಲೆ ೯ ತಾಲೂಕುಗಳನ್ನು ಒಳಗೊಂಡಿತ್ತು ಅವುಗಳಲ್ಲಿ ಆಲೂರು ಆದವಾನಿ ಮತ್ತು ರಾಯದುರ್ಗ ಪ್ರಮುಖವಾದವು. ರಾಜ್ಯ ಪುನರ್ ವಿಂಗಡನೆಯ ಸಮಯದಲ್ಲಿ ಈ ತಾಲೂಕುಗಳು ಆಂಧ್ರಪ್ರದೇಶಕ್ಕೆ ವರ್ಗಾಯಿಸಲ್ಪಟ್ಟವು. (ಇಂದೂ ರಾಯದುರ್ಗವು ನೆರೆಯ ರಾಜ್ಯವಾದ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಭಾಗವಾಗಿದ್ದರೆ, ಆಲೂರು ಮತ್ತು ಆದವಾನಿಗಳು ಕರ್ನೂಲ್ ಜಿಲ್ಲೆಯ ಭಾಗವಾಗಿವೆ.) ಅನೇಕ ಶತಮಾನಗಳಿಂದಲೂ ಬಳ್ಳಾರಿ ಜಿಲ್ಲೆ ಹಾಗೂ ಅಂಧ್ರದಲ್ಲಿರುವ ಕರ್ನೂಲ್, ಕಡಪ ಮತ್ತು ಅನಂತಪುರ ಜಿಲ್ಲೆಗಳು ಒಂದೇ ಅಧಿಪತ್ಯದಲ್ಲಿದ್ದವು. ಈ ಪ್ರದೇಶವನ್ನು ೧೮೦೦ರಲ್ಲಿ ಹೈದ್ರಾಬಾದಿನ ನಿಜಾಮನು ಬ್ರಿಟೀಷರಿಗೆ ನೀಡಿದ್ದರಿಂದ ಇವುಗಳನ್ನು "ಸೀಡೇಡ್ ಡಿಸ್ಟ್ರಿಕ್ಟ್" (ದತ್ತ ಮಂಡಲದ ಭಾಗ) ಎಂದು ಕರೆಯಲಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿರುವ ಸಿರುಗುಪ್ಪ, ಬಳ್ಳಾರಿ, ಸಂಡೂರು, ಮತ್ತು ಹೊಸಪೇಟೆ ತಾಲೂಕುಗಳನ್ನು ಪೂರ್ವಭಾಗದ ತಾಲೂಕುಗಳೆಂದು ಹಡಗಲಿ, ಕೂಡ್ಲಿಗಿ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕುಗಳನು ಪಶ್ಚಿಮ ಭಾಗದ ತಾಲೂಕುಗಳೆಂದು ಕರೆಯುವುದು ರೂಢಿಯಲ್ಲಿದೆ. ಪ್ರಾಕೃತಿಕವಾಗಿ ಹಾಗೂ ಆರ್ಥಿಕವಾಗಿ ಜಿಲ್ಲೆಯ ಪೂರ್ವ ಭಾಗವು ಸಮೃದ್ಧಿಯಾಗಿದ್ದರೆ, ಪಶ್ಚಿಮ ಭಾಗವು ಅಭಾವ ಪ್ರದೇಶವಾಗಿದೆ. ಕೃಷಿಯನ್ನು ಬದುಕನ್ನಾಗಿ ಮಾಡಿಕೊಂಡಿರುನ ಜನರ ಪ್ರಮಾಣದ ದೃಷ್ಟಿಯಿಂದ ಈ ಜಿಲ್ಲೆಯ ಪಶ್ಚಿಮ ಭಾಗದ ತಾಲೂಕುಗಳು ಮೊದಲು ಮೂರು ಸ್ಥಾನಗಳಲ್ಲಿವೆ. ಅಂದರೆ ಕೃಷಿಯೇತರ ಚಟುವಟಿಕೆಗಳು ಇಲ್ಲವೇ ಇಲ್ಲ. ಇದರಿಂದಾಗಿ ಆರ್ಥಿಕವಾಗಿ ಮತ್ತು ಪ್ರಾಕೃತಿಕವಾಗಿ ಸಮೃದ್ಧಿಯಾಗಿರುವ ಜಿಲ್ಲೆಯ ಪೂರ್ವಭಾಗದಲ್ಲಿ ಹೆಚ್ಚು ಔದ್ಯೋಗಿಕರಣ ಪ್ರಕ್ರಯಯೇ ನೆಲೆಗೊಂಡಿದೆ. ಆದಕಾರಣ ಔದ್ಯಮಿಕರಣ ಪ್ರಕ್ರಿಯೆಯು ಸೃಷ್ಟಿಸಿರುವ ಉದ್ಯೋಗ ಅವಕಾಶಗಳಿಂದಾಗಿ, ಕನ್ನಡ ತೆಲುಗು ದ್ವಿಭಾಷಿಕತೆಯ ಪ್ರಮಾಣ ಈ ಭಾಗದಲ್ಲಿ ಹೆಚ್ಚಾಗಿದೆ. ಕರ್ನಾಟಕದಲ್ಲಿ ಉಳುಮೆಗಾರರಿಗಿಂತ, ಕೃಷಿ ಕಾರ್ಮಿಕರಿಗಿಂತ ಅಧಿಕವಾಗಿರುವ ಜಿಲ್ಲೆಗಳಲ್ಲಿ ಬಳ್ಳಾರಿಯು ಒಂದಾಗಿದೆ. ಇಲ್ಲಿನ ಸಾಕ್ಷರತೆ ಪ್ರಮಾಣವು ಅತ್ಯಂತ ಕೆಳ ಮಟ್ಟದಲ್ಲಿದೆ. ಮಹಿಳೆಯರ ಸಾಕ್ಷರತೆಯು ಪುರುಷರ ಸಾಕ್ಷರತೆಯ ಪ್ರಮಾಣಕ್ಕಿಂತ ಶೇಕಡಾ ೨೬.೭೪ ರಷ್ಟು ಕಡಿಮೆ ಇದೆ. ಅದ್ದರಿಂದ ಕನ್ನಡ ಭಾಷಿಕರು, ಏಕ

ಭಾಷಿಕರು ಹೆಚ್ಚಾಗಿರುವದನ್ನು ಗಮನಿಸಬಹುದಾಗಿದೆ. ಇತ್ತೀಚಿನ ಜನಗಣತಿಯ ಮಾಹಿತಿಯ ಪ್ರಕಾರ ಸಾಕ್ಷರತೆಯ ಪ್ರಮಾಣವು ಸ್ವಲ್ಪ ಪ್ರಮಾಣದಲ್ಲಿ ಹೆಚ್ಚಾಗುತ್ತಿರುವ ಅಂಶಗಳು ಕಂಡು ಬಂದಿವೆ. ಇದರಿಂದಲೆ ದ್ವಿಭಾಷಿಕ ಭಾಷಾ ಬಳಕೆಯ ನೆಲೆಗಳಲ್ಲೂ ಬದಲಾವಣೆ ಉಂಟಾಗಿರಬಹುದು.

## ಬಳ್ಳಾರಿ ಕನ್ನಡದ ಮೇಲೆ ಬಂದಿರುವ ಲೇಖನಗಳ ಅವಲೋಕನ

ಬಳ್ಳಾರಿ ಪರಿಸರದಲ್ಲಿ ಬಳಕೆಯಾಗುತ್ತಿರುವ ಕನ್ನಡ ಭಾಷೆಯನ್ನು ಕುರಿತಂತೆ ಬಂದಿರುವ ಲೇಖನಗಳು ತುಂಬಾ ಕಡಿಮೆ. ಅವುಗಳಲ್ಲಿ ದೊರೆತ ಕೆಲವು ವಿದ್ವಾಂಸರ ವಿಚಾರಗಳನ್ನು ಮಾತ್ರ ಇಲ್ಲಿ ನೀಡಲಾಗಿದೆ.

ಬಳ್ಳಾರಿಯಲ್ಲಿ ಬಳಕೆಯಾಗುತ್ತಿರುವ ಕನ್ನಡದ ಪ್ರಬೇಧವನ್ನು ಕುರಿತಂತೆ ಮತ್ತು ದ್ವಿತೀಯ ಭಾಷೆ, ದ್ವಿಭಾಷ ಸ್ಥಿತಿಯನ್ನು ಕುರಿತಂತೆ ಕೆಲವು ವಿದ್ವಾಂಸರ ವಿಚಾರಗಳನ್ನು ಗಮನಿಸಲಾಗಿದೆ. ಸಂಗಮೇಶ ಸವದತ್ತಿ ಮಠರವರ (೧೯೭೬; ೫೩-೫೪) ಕನ್ನಡದ ಭಾಷಾ ಪ್ರಬೇಧಗಳ ನಿರ್ಮಾಣ ಕಾರಣಗಳನ್ನು ಕುರಿತಂತೆ ಲೇಖನವೊಂದರಲ್ಲಿ ಕನ್ನಡ ಭಾಷೆಯ ಮೇಲೆ ಅನೇಕ ಅನ್ಯ ಭಾಷೆಗಳು ಪ್ರಭಾವ ಬೀರಿವೆ. ಅದ್ದರಿಂದ ಪ್ರಬೇಧಗಳನ್ನುಂಟು ಮಾಡುವಲ್ಲಿ ಅನ್ಯಭಾಷೆಗಳು ಯಾವ ಯಾವ ಕನ್ನಡ ಪ್ರದೇಶಗಳಲ್ಲಿ ಪ್ರಭಾವ ಬೀರಿವೆಯೆಂಬುದನ್ನು ಕರ್ನಾಟಕದ ಈಗಿನ ರಾಜಕೀಯ ಗಡಿಗಳನ್ನು ಆಧಾರವಾಗಿಟ್ಟುಕ್ಕೊಂಡು ವಿವರಿಸಿದ್ದಾರೆ. ಇವುಗಳಲ್ಲಿ ಉರ್ದು, ಮರಾಠಿ, ತೆಲುಗು, ತಮಿಳು, ಮಲೆಯಾಳಂ, ಪ್ರಭಾವಿತ ಪ್ರಬೇಧಗಳನ್ನು ಗುರುತಿಸಿದ್ದಾರೆ. ಹೀಗೆ ಕನ್ನಡದ ಮೇಲೆ ಅನ್ಯಭಾಷೆ ಪ್ರಭಾವವನ್ನು ತೆಲುಗು ಬೀರಿಲ್ಲ. ಆದರೂ ತೆಲುಗು ಪ್ರಭಾವಿತ ಪ್ರಬೇಧವನ್ನು ಗುರುತಿಸುವಷ್ಟು ಕನ್ನಡದಲ್ಲಿ ದೊರೆಯುತ್ತದೆ. ಬೀದರ್, ಕಲುಬುರ್ಗಿ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ತುಮಕೂರು ಮತ್ತು ಕೋಲಾರ ಜಿಲ್ಲೆಗಳ ಪೂರ್ವಭಾಗವೆಲ್ಲ ಅಂಧ್ರಪ್ರದೇಶಕ್ಕೆ ಹತ್ತಿಕೊಂಡಿರುವುದರಿಂದ ಇವೆಲ್ಲಾ ಪ್ರದೇಶಗಳಲ್ಲಿ ತೆಲುಗು ಭಾಷೆಯ ಪ್ರಭಾವ ಒಂದೇ ಮಟ್ಟದಾಗಿಲ್ಲದೆ. ಆಯಾ ಪ್ರಬೇಧಕ್ಕನುಗುಣವಾಗಿ ಭೌಗೋಳಿಕ, ರಾಜಕೀಯ, ಸಾಮಾಜಿಕ ಕಾರಣಗಳಿಂದಾಗಿ ಪ್ರಭಾವ ಹೆಚ್ಚು ಕಡಿಮೆ ಯಾಗಿದೆ. ಬಳ್ಳಾರಿ ಜಿಲ್ಲೆಯ, ಬಳ್ಳಾರಿ ತಾಲ್ಲೂಕು ಹಾಗೂ ಸಿರುಗುಪ್ಪ ತಾಲ್ಲೂಕು ಸಂಪೂರ್ಣವಾಗಿ ತೆಲುಗು ಪ್ರಭಾವಕ್ಕೆ ಒಳಪಟ್ಟಿದೆ. ಆಂಧ್ರದ ಜನತೆಯೊಂದಿಗೆ ಇವರ ಸಂಪರ್ಕ ಬಹುಕಾಲ ಇದ್ದುದ್ದರಿಂದ ಈ ಪ್ರದೇಶದಲ್ಲಿ ಸಾಕಷ್ಟು ಜನ ತೆಲುಗರು ನೆಲೆಸಿದ್ದಾರೆ.

"ಒಕ್ಕರೂಪಾಯಿ, ಒಕಟಿ, ಚೇಯಿ, ಪೋ, ಚೂಡು, ಡಬ್ಬು, ದೊಂಗಲು, ಚಪ್ಪು, ಪಾಮು, ಇಂತಹ ಬಹುಮುಖ್ಯ ತೆಲುಗು ಪದಗಳು ಕನ್ನಡದಲ್ಲಿ ಸೇರಿವೆ. ರಾಯಚೂರು, ಬೀದರ ಹಾಗೂ ಕಲುಬುರ್ಗಿ ಜಿಲ್ಲೆಯ ಪೂರ್ವ ಗಡಿ ಭಾಗದಲ್ಲಿ ತೆಲುಗರಿದ್ದರು ಕೋಲಾರ ಬೆಂಗಳೂರು ಜಿಲ್ಲೆಯ ಪ್ರದೇಶಗಳಷ್ಟು ದಟ್ಟವಾಗಿಲ್ಲ. ತೆಲುಗು ಪ್ರಭಾವಿತ ಕನ್ನಡ ಪ್ರಬೇಧವನ್ನು ಈ ಕೆಳಗಿನಂತೆ ಗುರುತಿಸಬಹುದು.

* ಹೆಚ್ಚು ದಟ್ಟ ಪ್ರಭಾವವುಳ್ಳ ಪಾವಗಡ, ಮಧುಗಿರಿ, ಕೋಲಾರ ಪ್ರದೇಶಗಳು.
* ಕಡಿಮೆ ಪ್ರಭಾವವುಳ್ಳ ಬೀದರ, ಕಲುಬುರ್ಗಿ, ರಾಯಚೂರು ಪ್ರದೇಶಗಳು.
* ಮದ್ಯಮ ಪ್ರಭಾವವುಳ್ಳ ಬಳ್ಳಾರಿ, ಚಿತ್ರದುರ್ಗ, ಪ್ರದೇಶಗಳು ಎಂಬ ಮೂರು ಮಟ್ಟಗಳಲ್ಲಿ ಗುರುತಿಸಲಾಗಿದೆ."[೧೦]

ಕನ್ನಡ ಸಂದರ್ಭದಲ್ಲಿ ಈಗಾಗಲೇ ಹಲವು ಪ್ರಾದೇಶಿಕ ಭಾಷಾ ಪ್ರಬೇಧಗಳನ್ನು ಗುರುತಿಸಲಾಗಿದೆ. ಅದೆ ನಿಟ್ಟಿನಲ್ಲಿ ಡಾ॥ ವೀರಭದ್ರಶರ್ಮಾರವರು "ಬಳ್ಳಾರಿ ಜಿಲ್ಲೆಯ ಕನ್ನಡ" ಎನ್ನುವ ಲೇಖನದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿನ ಸಿರುಗುಪ್ಪ ಬಳ್ಳಾರಿ ಹೊಸಪೇಟೆ ಮತ್ತು ಸಂಡೂರು ತಾಲೂಕುಗಳು ಉನ್ನತ ಭಾಗದ ತಾಲೂಕುಗಳೇಂದು ಗುರ್ತಿಸಿಕೊಂಡು ಉನ್ನತ ಭಾಗದ ತಾಲೂಕುಗಳಲ್ಲಿ ಬಳಕೆಯಾಗುವ ಭಾಷೆಯೇ "ಬಳ್ಳಾರಿ ಕನ್ನಡ" ಅಥವ "ಬಳ್ಳಾರಿ ಉಪಭಾಷೆ"[೧೧] ಎಂದು ಕರೆದಿದ್ದಾರೆ. ಇನ್ನಿತರ ಭಾಷೆ ಕನ್ನಡದ ಪ್ರಬೇಧಗಳಿಗಿಂತ ಈ ಪ್ರಬೇಧವು ಶ್ರುತಿ, ತಾನ, ಒತ್ತು, ಸ್ವರ, ವಿಧಾನಗಳ ವಿಶೇಷತೆಯಿಂದಾಗಿ ಈ ಭಾಷೆಯು ಕರ್ಣ ಸುಲಬ ರಾಗಾತ್ಮಕತೆಯನ್ನು ಪಡೆದುಕೊಂಡು, ತನ್ನತನದಿಂದ ಮೆರೆದಿದೆಯಲ್ಲದೇ ಈ ಭಾಷೆಗೆ ವಿಶಿಷ್ಟವಾದ ಹಲವಾರು ಅಪರೂಪದ ಶಬ್ದರೂಪಗಳಿರುವುದನ್ನು ಗುರುತಿಸಿದ್ದಾರೆ. ಉನ್ನತ ಭಾಗದ ತಾಲೂಕಿನಲ್ಲಿ ಬಳಕೆಯಾಗುತ್ತಿರುವ ಕನ್ನಡದ ಪ್ರಬೇಧವನ್ನು ಮೈಸೂರು ಪ್ರಬೇಧಕ್ಕೆ ಹತ್ತಿರವಿರುವ ಹಲವು ಶಬ್ದಗಳು ಕಂಡು ಬರುವದರಿಂದ ಸಂಶೋಧಕರಲ್ಲಿ ಕುತುಹಲಕಾರಿಯಾಗಿದೆ. ಅಲ್ಲದೆ ಅನೇಕ ಪ್ರಬೇಧ ಭಾಷೆಗಳನ್ನಾಡುವ ಜನಗಳ ಸಂಪರ್ಕ ಮತ್ತು ನಿತ್ಯ ವ್ಯವಹಾರ ಇತರ ಪ್ರದೇಶಗಳೊಂದಿಗೆ ಬೆಳೆಯುತ್ತಿದ್ದರೂ ಸಹ ಈ ಜನಗಳ ಭಾಷೆಯ ಮೇಲೆ ಯಾವುದೇ ಬೇರೊಂದು ಪ್ರಬೇಧದ ಭಾಷೆಯ ಪ್ರಭಾವವು ಬೀರುವುದು ಸಾಧ್ಯವಾಗಿಲ್ಲ. ಇದಕ್ಕೆ ಈ ಭಾಷೆಯನ್ನಾಡುವ ಜನರಲ್ಲಿ ಬಹುವಿಧವಾದ ಪ್ರಾಂತ್ಯಾಭಿಮಾನ ಅಥವಾ ವೈಯಕ್ತಿಕತೆ ಕಾರಣವಾಗಿರಬಹುದು. ಜೊತೆಗೆ ಭಾಷಿಕರನೇಕರು ಅನೇಕ ವರ್ಷದಿಂದ ಇಲ್ಲಿ ನೆಲೆಸಿರುವದರಿಂದ ಮತ್ತು ದಿನನಿತ್ಯದ ವ್ಯವಹಾರ ವ್ಯಾಪಾರಗಳು ಆಂಧ್ರದ ಇತರ ಪ್ರದೇಶಗಳೊಂದಿಗೆ ನಡೆಯುವುದರಿಂದ ಬಳ್ಳಾರಿ ಜನರು ಆಡು ಭಾಷೆಯಲ್ಲಿ ತೆಲುಗಿನ ಡಬ್ಬು, ಪಪ್ಪು, ಪಾಮು, ಚಪ್ಪು ಒಕಟಿ, ದೊಂಗ, ಚೇಯಿ, ಪೋ, ಚೂಡು, ಕಚ್ಚು, ಶಬ್ದಗಳು ಕನ್ನಡದಲ್ಲಿ ಬೆರೆತಿವೆ.

ರಾಜಕೀಯವಾಗಿ ಸಾಂಸ್ಕೃತಿಕವಾಗಿ ಮಹತ್ವ ಪಡೆದ ಕ್ಷೇತ್ರ ಇದಾಗಿದ್ದು ಇಲ್ಲಿ ವಿಜಯನಗರದ ಹಂಪಿಯಲ್ಲಿ ಬಳಸುತ್ತಿದ್ದ ಭಾಷೆಯ ಪ್ರತಿಷ್ಠೆ ಪಡೆದುಕೊಂಡು ಸುತ್ತಲು ಹಬ್ಬಿ ಸ್ವೀಕೃತವಾಗಿದೆ. ಇಲ್ಲಿಂದಲೇ ಅನೇಕ ಸೀಮಾರೇಖೆಗಳು ಹೊರಡುವುದನ್ನು ಅರಿಯಬಹುದಾಗಿದೆ. ಈ ಉಪಭಾಷೆ ಸೀಮಾರೇಖೆಗಳು ಜಿಲ್ಲೆಯ ಉತ್ತರಕ್ಕಿರುವ ರಾಯಚೂರು, ಗಂಗಾವತಿ ಮತ್ತು ಸಿಂಧನೂರು

ತಾಲ್ಲೂಕುಗಳವರೆಗೂ ಹರಡಿಕೊಂಡಿವೆ. ಇಂತಹ ಸೀಮಾರೇಖೆಗಳು ಸಮುದಾಯದಿಂದ ಸುತ್ತುವರೆಯಲ್ಪಟ್ಟ ಸಿರುಗುಪ್ಪ, ಬಳ್ಳಾರಿ, ಹೊಸಪೇಟೆ. ಸಂಡೂರು, ಗಂಗಾವತಿ, ಸಿಂಧನೂರು ತಾಲ್ಲೂಕುಗಳ ಪ್ರದೇಶವನ್ನು ಉಪಭಾಷೆ ಕ್ಷೇತ್ರವೆಂದು ಕರೆಯಲಾಗಿದೆ. ಈ ಸೀಮಾರೇಖೆಗಳು ಬಳ್ಳಾರಿ ಜಿಲ್ಲೆಯ ಅವನತ ಭಾಗದ ತಾಲ್ಲೂಕಗಳಾದ ಮಲ್ಲಾಪುರ, ಹಡಗಲಿ, ಹರಪನಹಳ್ಳಿ ಮತ್ತು ಕೂಡ್ಲಿಗಿಗಳವರೆಗೂ ಸಮಾನಂತರವಾಗಿ ಹರಡಲೇಬೇಕಾಗಿತ್ತು. ಆದರೆ ಹಾಗಾಗಿಲ್ಲ. ಕಾರಣವೆನೆಂದರೆ ನೈಸರ್ಗಿಕ ಅಂತಕವಾದ ಸಂಡೂರು ಬೆಟ್ಟಗಳು ಮತ್ತು ದಟ್ಟವಾದ ಅರಣ್ಯ ಬೆಟ್ಟಗಳು ಅವುಗಳಿಗೆ ತೊಂದರೆಯುಂಟಾಗಿದೆ. ಸಂಡೂರಿನ ಬೆಟ್ಟ ವಾಯುವ್ಯ ಆಗ್ನೆಗೆ ಹಬ್ಬಿವೆ. ಜಿಲ್ಲೆಯ ಉನ್ನತ ಭಾಗಗಳ ತಾಲ್ಲೂಕುಗಳಾದ ಜನರು ಆಡುವ ಭಾಷೆಯಲ್ಲಿ ಕಾಣಬಹುದಾದ ಒತ್ತು, ಶೃತಿ, ತಾನ, ಸ್ವರ ಭಾರಗಳು ಅವನತ ಭಾಗದ ತಾಲ್ಲೂಕುಗಳ ಜನರ ಭಾಷೆಯಲ್ಲಿ ಎಳ್ಳಷ್ಟು ಕಂಡುಬರುವುದಿಲ್ಲ. ಹರಪನಹಳ್ಳಿ ತಾಲ್ಲೂಕಿನ ಭಾಷೆಯ ಮೇಲೆ ಹರಿಹರ ಮತ್ತು ದಾವಣಗೇರೆಯ ಕನ್ನಡದ ಪ್ರಭಾವವಿರುವುದನ್ನು ಕಾಣುತ್ತೇವೆ. ಅಲ್ಲದೇ ಈ ಪ್ರಭಾವವು ಮಲ್ಲಾಪುರ ತಾಲ್ಲೂಕಿನವರೆಗೂ ಹರಡಿದೆ ಎಂಬುದು ಸ್ಪಷ್ಠ. ಕೂಡ್ಲಿಗಿ ತಾಲ್ಲೂಕಿನ ಭಾಷೆಯ ಮೇಲೆ ಚಿತ್ರದುರ್ಗ ಜಿಲ್ಲೆಯ ಜಗಳೂರು ಕನ್ನಡವು ಅಲ್ಲದೆ ಹರಪನಹಳ್ಳಿ ದಾವಣಗೇರೆ, ಹರಿಹರಗಳ ಕನ್ನಡದ ಪ್ರಭಾವವು ಇದ್ದು ಇಲ್ಲಿನ ಕನ್ನಡ ಕಲಸುಮೇಲೋಗರವಾಗಿರುವಂತೆ ತೋರುತ್ತದೆ.

ಆರ್.ಕೆ.ದುರ್ಗದಾಸ್ ರವರು ತಮ್ಮ ಸಂಶೋಧನಾ ಮಹಾ ಪ್ರಬಂಧದಲ್ಲಿ, ಬಳ್ಳಾರಿ ಜಿಲ್ಲೆ ಬಯಲಾಟದಲ್ಲಿ ಬಳ್ಳಾರಿ ಜಿಲ್ಲೆಯ ಕನ್ನಡ–ತೆಲುಗು ದ್ವಿಭಾಷೆ ಸಂದರ್ಭದಲ್ಲಿ ಕುರಿತಂತೆ ಕೆಲವು ವಿಚಾರಗಳಲ್ಲಿ ಬಳ್ಳಾರಿ ಜಿಲ್ಲೆ ತನ್ನದೇಯಾದ ಉಪಭಾಷೆಯನ್ನು ಹೊಂದಿದೆ. ಹೊಸಪೇಟೆ, ಹಗರಿಬೊಮ್ಮನಹಳ್ಳಿ, ಹಡಗಲಿ, ಹರಪನಹಳ್ಳಿ, ಕೂಡ್ಲಿಗಿ ಮತ್ತು ಸಂಡೂರುಗಳ ಉಚ್ಚಾರಣೆಯಲ್ಲಿ ಶೃತಿ, ಲಯಗಳಲ್ಲಿ ಏಕರೂಪತೆ ಇದೆ. ಗಡಿನಾಡಾದ ಬಳ್ಳಾರಿ ಸಿರುಗುಪ್ಪ ಭಾಗದ ಭಾಷೆಯಲ್ಲಿ ತೆಲುಗು ಭಾಷೆಯಲ್ಲಿ ತೆಲುಗು ಭಾಷೆಯ ಪ್ರಭಾವ ಹೆಚ್ಚಿದೆ. ಆಂಧ್ರದಿಂದ ವಲಸೆ ಬಂದವರಲ್ಲಿ ಕನ್ನಡ ತೆಲುಗು ಇವೆರೆಡರ ಮಿಶ್ರರೂಪದ ಭಾಷೆಯ ಬಳಕೆ ಇದೆ. ಬಯಲಾಟಗಳು ಇವೆಲ್ಲಾ ಪ್ರದೇಶಗಳಲ್ಲಿ ನಡೆಯುವದರಿಂದ ಆಯಾ ಭಾಗದ ಪ್ರಾದೇಶಿಕ ಭಾಷೆಯ ಪ್ರಭಾವ ಅವುಗಳ ಮೇಲಾಗಿದೆ. ಕಥೆ ಕಲಿಸುವ ನಾಯಕ ಒಂದು ಭಾಗದವನಿದ್ದು ಅವನು ಒಂದು ಲಿಖಿತ ಕಥೆವಹಿಯ ಪಾಠವನ್ನು ಉರುಹೊಡಿಸಿದಾಗಲೂ ಪಾತ್ರಗಳು ರಂಗದ ಮೇಲೆ ಬಂದು ಮಾತನಾಡುವಾಗ ತಮ್ಮದೇಯಾದ ಪ್ರಾದೇಶಿಕ ಉಚ್ಚಾರಣೆ ಮರೆತಿರುವುದಿಲ್ಲ. ತಕ್ಕ ಮಟ್ಟಿಗೆ ವಿದ್ಯಾವಂತರು ಅನುಸರಿಸಬಹುದು. ಹೆಚ್ಚಾಗಿ ಬಯಲಾಟಗಳು ಅಚ್ಚೊತ್ತಿದಂತೆ ಕಾಣುತ್ತದೆ. ಬಳ್ಳಾರಿ, ಸಿರುಗುಪ್ಪ ಪಾತ್ರಗಳು ರಂಗದ ಮೇಲೆ ಬಂದು ಮಾತನಾಡುವಾಗ ತಮ್ಮದೇಯಾದ ಪಾತ್ರ ಸಂಬೋಧಿಸುತ್ತಿರುವಾಗ ಕೊನೆಯಲ್ಲಿ ಧೀರ್ಘಕಾಕು ಇದ್ದು, ಶ್ರುತಿ ಆರೋಹದ ಕಡಗೆ ಒಲಿಸುತ್ತದೆ. ಅನಕ್ಷರಸ್ಥರು

ಮಾತನಾಡುವಾಗ ಮಹಾಪ್ರಾಣ, ಅಲ್ಪಪ್ರಾಣ, ಧ್ವನಿ ಜಾರುವಿಕೆಯಿಂದ ಮಹಾಪ್ರಾಣ ವಾಗಿಸುವುದು ಮತ್ತು "ಹ" ಕಾರವು ಲೋಪವಾಗುವುದು ಬಯಲಾಟದ ಆಡುಭಾಷೆಯಲ್ಲಿ ಕಂಡುಬರುವುದು. ವಿಶೇಷವಾಗಿ ಗಡಿನಾಡಿನಲ್ಲಿ ಒಂದೇ ಭಾಷೆ ಬಳಕೆಯಲ್ಲಿ ಇಲ್ಲದಿರುವದರಿಂದ ಈ ವೈಪರೀತ್ಯಗಳು ಇಲ್ಲಿ ಕಾಣುತ್ತವೆ.

ಗಡಿಗೆ ಹತ್ತಿರುವ ಪ್ರದೇಶಗಳಲ್ಲಿ ಮುಖ್ಯವಾದ ಹನಕನಾಳು, ಎಮ್ಮಿಗನೂರು, ರಾಮಸಾಗರಗಳಲ್ಲಿ ಬಯಾಲಾಟ ಭಾಷೆಯಲ್ಲಿ ತೆಲುಗು ಕನ್ನಡ ದ್ವಿಭಾಷಿಕ ಸ್ಥಿತಿ ಒಡೆದು ಕಾಣುತ್ತದೆ. ಇಲ್ಲಿ ಸಿಗುವ ಬಯಾಲಾಟ ಹಸ್ತಪ್ರತಿಗಳು ಸಹ ಇದೇ ಮಾದರಿಯವು. ಗರುಡಚೇಡು ಹನುಮಂತಪ್ಪ ತೆಲುಗು ಕನ್ನಡ ದ್ವಿಭಾಷಿಕ ಕವಿಯಾಗಿ ಬಯಲಾಟ ಕೃತಿ ರಚಿಸಿರುವುದು ಸಹ ಉಂಟು. ಇಲ್ಲಿ ಕನ್ನಡಿಗರು ಬಯಲಾಟ ಆಡುವಾಗ ಅಲ್ಲಿನ ತೆಲುಗು ಮತ್ತು ಕನ್ನಡ ಜನಗಳಿಗೆ ಸಮಾನವಾಗಿಯೇ ಅರ್ಥವಾಗುವಂತೆ ಕೆಲವೊಂದು ಸನ್ನಿವೇಶಗಳಲ್ಲಿ "ತೆಲುಗಿನ" ಮಾತು ಮತ್ತು ಹಾಡುಗಳನ್ನು ಸೇರಿಸುವುದು ವಾಡಿಕೆಯಾಗಿದೆ. ಉದಾಹರಣೆಗೆ 'ವೋ ಮಾಮಾ ಶಿವನ ನೇತ್ರಾಗ್ನಿಂ ನಾಂ ಭುರ್ತುನಿ ಪಂಪುಟ ನ್ಯಾಯಮ, "ನಾ ಪತಿ, ನೀಕೇಮ ಚೇಸಿಯುಂಡನೋ, ಶ್ರೀ ಹರಿ" ಈ ಮೇಲಿನ ಸನ್ನಿವೇಶದಲ್ಲಿ ಕನ್ನಡಿಗರು ಪಾತ್ರ ಕಟ್ಟಿರುವಾಗ ಇಲ್ಲಿನ ದ್ವಿಭಾಷೆಯಲ್ಲಿ ಯಾವುದೋ ಒಂದು ಪ್ರತಿಷ್ಠಿತವಾಗಿ ಇಲ್ಲವೇ ಔಪಚಾರಿಕವಾಗಿ ಕಾಣುವುದಿಲ್ಲ. ಇಲ್ಲಿನ ದ್ವಿಭಾಷಿಕತೆ ಕೇವಲ ಪ್ರಾದೇಶಿಕ ಮಟ್ಟದ್ದಾಗಿ ತೋರುತ್ತದೆ. ಬಳ್ಳಾರಿ ಜಿಲ್ಲೆ ಕರ್ನಾಟಕದಲ್ಲಿ ಇತ್ತ ಹಳೆ ಮೈಸೂರಿಗೂ ಸೇರದೇ ಅತ್ತ ಉತ್ತರ ಕರ್ನಾಟಕದ ಪರಂಪರೆಯನ್ನು ಒಳಗೊಂಡಿದೆ. ಮಧ್ಯವರ್ತಿಯಾಗಿ ತುಂಗಭದ್ರೆಯ ಕರ್ನಾಟಕಕ್ಕೆ ಹತ್ತಿರವಿರುವ ಈ ಜಿಲ್ಲೆಯ ಸೀಮೆಯು ಒಂದು ಬದಿಯಲ್ಲಿ ಅಂಧ್ರಕ್ಕೆ ಹತ್ತಿರವಿರುವ, ಇನ್ನೊಂದು ಬದಿಯಲ್ಲಿ ಒಟ್ಟಾರೆ ಹೇಳುವುದಾದರೆ ಒಂದು ದ್ವೀಪವಾಗಿ ಊಳಿದುಕೊಂಡಿದೆ[೨]. ದುರ್ಗಾದಾಸ್ ರವರು ಬಳ್ಳಾರಿ ಕನ್ನಡವನ್ನು ಕುರಿತಂತೆ ಮತ್ತು ದ್ವಿಭಾಷಾ ಸಂದರ್ಭವನ್ನು ಕುರಿತಂತೆ ಹೇಳುವ ವಿಚಾರಗಳನ್ನು ಒಪ್ಪಬಹುದಾದರೂ, ಬಳ್ಳಾರಿ ಒಂದು ದ್ವೀಪವಾಗಿ ಊಳಿದುಕೊಂಡಿದೆ ಎನ್ನುವ ವಿಚಾರವನ್ನು ಒಪ್ಪಲಾಗದು. ಏಕೆಂದರೆ ಬಳ್ಳಾರಿ ಒಂದು ದ್ವೀಪವಾಗಿ ಉಳಿದುಕೊಂಡಿದ್ದರೆ ಇದೊಂದು ದ್ವಿಭಾಷಾ ಪ್ರದೇಶವಾಗಲು ಸಾಧ್ಯವಿರಲಿಲ್ಲ. ಅನೇಕ ಭಾಷೆಯ ಭಾಷಿಕರಿಗೆ ಇದು ತೆರೆದುಕೊಂಡಿರುವುದರಿಂದ ಇದೊಂದು ದ್ವೀಪವಾಗಿ ಉಳಿಯಲು ಸಾಧ್ಯವಿಲ್ಲ.

## ಅಡಿಟಿಪ್ಪಣಿಗಳು

೦೧. ಡಾ. ಪಿ. ಮಹಾದೇವಯ್ಯ, ಬಳ್ಳಾರಿ ಜಿಲ್ಲೆಗೆ ತೆಲುಗರ ವಲಸೆ, ಪುಟ–೧೦

೦೨. ಡಾ. ಎಸ್.ಬಿ. ಯಾದವಾಡ, ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ಪುಟ–೧೫೧

೦೩. ಡಾ. ಕೆ.ರವೀಂದ್ರನಾಥ್, ಸಂಪಾದಕರು, ಕೋಗಳಿನಾಡು, ಪುಟ–೯೩

೦೪. ಅದೇ, ಪುಟ : ೯೪

೦೫. ವೆ.ಮಾ. ರಾಜಶೇಖರ, ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ಸೌಲಭ್ಯಗಳು, ಪುಟ-೧೬

೦೬. ಡಾ. ರವೀಂದ್ರನಾಥ್, ಸಂಪಾದಕರು, ಕೋಗಳಿನಾಡು, ಪುಟ-೯೫

೦೭. ಡಾ. ಪಿ.ಮಹಾದೇವಯ್ಯ, ಬಳ್ಳಾರಿ ಜಿಲ್ಲೆಗೆ ತೆಲುಗರ ವಲಸೆ, ಪುಟ-೯

೦೮. ಪ್ರೊ. ಬಿ: ಶೇಷಾದ್ರಿ ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕರಣ ಆಂದೋಳನ, ಪುಟ-೧

೦೯. ಎಂ.ಭಾಗ್ಯಲಕ್ಷ್ಮೀ, ಬಳ್ಳಾರಿ ಪರಿಸರದ ಕನ್ನಡ-ತೆಲುಗು ದ್ವಿಭಾಷಿಕತೆ; ಸಮಜೋಭಾಷಿಕ ಅಧ್ಯಯನ, ಪುಟ: ೬೯

೧೦. ಸಂಗಮೇಶ ಸವದತ್ತಿಮಠ, ಕನ್ನಡ ಭಾಷಾ ಪ್ರಭೇದಗಳ ನಿರ್ಮಾಣ ಕಾರಣಗಳು, ಪುಟ-೫೩, ೫೪

೧೧. ವೀರಭದ್ರ ಶರ್ಮಾ.ಕೆ., ಬಳ್ಳಾರಿ ಜಿಲ್ಲೆಯ ಕನ್ನಡ, ಪುಟ-೨೧೯, ೧೨೫, ೧೨೭

೧೨. ದುರ್ಗಾದಾಸ್.ಆರ್.ಕೆ., ಬಳ್ಳಾರಿ ಜಿಲ್ಲೆಯ ಬಯಲಾಟಗಳು, ಪುಟ-೧೫೬, ೧೫೮

ಅಧ್ಯಾಯ ೩

# ಭಾಷಾ ಬೋಧನೆ ಮತ್ತು ಕಲಿಕೆಯ ಹೊಸ ವಿಧಾನಗಳ ಸಮೀಕ್ಷೆ ಹಾಗೂ ಮಾಧ್ಯಮ ಕುರಿತಾದ ಚಿಂತನೆಗಳು

## ಬೋಧನೆ

ಬೋಧನೆಯು ಒಂದು ಕಲೆ. ಬೋಧನೆ ಉದ್ದೇಶಪೂರ್ವಕ ಹಾಗೂ ಪ್ರಜ್ಞಾಪೂರ್ವಕವಾದ ಕ್ರಿಯೆಯಾಗಿರುತ್ತದೆ. ಮನಸ್ಸಿಗೆ ತೋಚುವ ವಿಚಾರ ಹೇಳುವುದು ಬೋಧನೆಯಾಗುವುದಿಲ್ಲ. ಬೋಧನೆ ಒಂದು ಮನೋವೈಜ್ಞಾನಿಕ ಕ್ರಿಯೆಯಾಗಿರುವುದರಿಂದ ಇರುವ ವಿಷಯವನ್ನು ವಿವರಿಸುವುದರ ಬದಲು ಅರ್ಥವಾಗುವ ಹಾಗೆ ಮಕ್ಕಳ ಹಂತಕ್ಕೆ ಇಳಿದು ಪರಿಣಾಮಕಾರಿ ಹಾಗೂ ಶಾಶ್ವತ ಕಲಿಕೆಯನ್ನುಂಟು ಮಾಡುವುದು ಬೋಧನೆಯಾಗಿದೆ. ಬೋಧನೆಯು ಶಿಕ್ಷಣದ ಅವಿಭಾಜ್ಯ ಅಂಗ. ಶಿಕ್ಷಣದ ನೈಜ ಸ್ವರೂಪ ಮತ್ತು ಗುಣಾತ್ಮಕತೆ ಬೋಧನೆಯಲ್ಲಿ ಅಡಕವಾಗಿದೆ. ಮಕ್ಕಳು ಕಲಿಯುವಂತೆ ಸಹಾಯಮಾಡುವ ಕ್ರಿಯೆ ಬೋಧನೆ. ಪ್ರಾಥಮಿಕ ಶಾಲೆಯಲ್ಲಿ ಬೋಧನೆಯು ಕ್ರಿಯಾತ್ಮಕತೆಯಿಂದ ಕೂಡಿರಬೇಕು. ಏಕೆಂದರೆ ಪ್ರಾಥಮಿಕ ಶಿಕ್ಷಣವು ಮಗುವಿಗೆ ಉತ್ತಮ ಶಿಕ್ಷಣದ ಬುನಾದಿಯನ್ನು ಹಾಕುತ್ತದೆ. ಉತ್ತಮ ಬೋಧನೆಯಿಂದ ಶಿಕ್ಷಣದ ಗುಣಮಟ್ಟ ಹೆಚ್ಚುತ್ತದೆ.

ವಿದ್ಯಾರ್ಥಿಗಳನ್ನು ಕಲಿಯುವಂತೆ ಪ್ರೇರೇಪಿಸುವುದೆ ಬೋಧನೆಯಾಗಿರುತ್ತದೆ. ಒಬ್ಬ ಶಿಕ್ಷಕನ ಬೋಧನೆಯು ಎಷ್ಟು ಪರಿಣಾಮಕಾರಿಯಾಗಿದೆ ಎಂದು ನಿರ್ಧರಿಸಬೇಕಾದರೆ ಬೋಧಿಸಿದ ವಿಷಯವನ್ನು ವಿದ್ಯಾರ್ಥಿಗಳು ಎಷ್ಟು ಚೆನ್ನಾಗಿ ಕಲಿತಿದ್ದಾರೆ ಎಂಬುದರ ಮೇಲೆ ನಿರ್ಧರಿತವಾಗುತ್ತದೆ. ಹೀಗೆ ಒಬ್ಬ ಶಿಕ್ಷಕನ ಬೋಧನೆ ಎಷ್ಟು ಪರಿಣಾಮಕಾರಿಯಾಗಿದೆ ಎಂಬುದನ್ನು ವಿದ್ಯಾರ್ಥಿಗಳೆ ನಿರ್ಧರಿಸುತ್ತಾರೆ. ಹಾಗಾಗಿ ಕ್ರಮವರಿತು ಬೋಧನೆ ಮಾಡಿದಾಗ ಮಾತ್ರ ಕಲಿಕೆ ಪರಿಣಾಮಕಾರಿಯಾಗುತ್ತದೆ.

## ಕಲಿಕೆ

ಕಲಿಕೆಯು ಜೀವಿಗಳಲ್ಲಿ ಕಂಡುಬರುವ ಸಹಜ ಹಾಗೂ ಅನಿವಾರ್ಯ ಪ್ರಕ್ರಿಯೆಯಾಗಿದೆ. ಕಲಿಯುವಿಕೆ ಶೈಕ್ಷಣಿಕ ಪ್ರಕ್ರಿಯೆಯಲ್ಲಿ ಒಂದು. ಶಿಕ್ಷಕರು ಹಾಗೂ ಪಾಲಕರು ಮಕ್ಕಳಿಗೆ ಸೂಕ್ತವಾದ ಕಲಿಕೆಯ ವಾತಾವರಣವನ್ನು ನಿರ್ಮಿಸಬೇಕಾದ ಅನಿವಾರ್ಯತೆಯಿದೆ. ಶಿಕ್ಷಣ ರಂಗದಲ್ಲಿ ಕಲಿಯುವಿಕೆಗೆ ಒಂದು ಮಹತ್ವವಾದ ಸ್ಥಾನವಿದೆ. ಕೇವಲ ಓದು-ಬರಹ ಕಲಿಯುವುದು ಮಾತ್ರ ಕಲಿಕೆಯಲ್ಲ. ಇದು ಕಲಿಕೆಯ ಸಂಕುಚಿತಾರ್ಥ. ಶಿಕ್ಷಣವೆಂದರೆ ಅನುಭವಗಳ ಮೂಲಕ ವ್ಯಕ್ತಿಯ ವರ್ತನೆಯಲ್ಲಾಗುವ ಶಾಶ್ವತ ಬದಲಾವಣೆಯೆ ಕಲಿಕೆ. ಕಲಿಕೆ ಎಂಬುದು ಕೇವಲ ಶಾಲೆಯಲ್ಲಿ ಮಾತ್ರ ನಡೆಯುವ ಚಟುವಟಿಕೆಯಲ್ಲ. ಮಗುವು ಹುಟ್ಟಿನಿಂದ ಸಾಯುವವರೆಗೆ ಈ ಮಾರ್ಪಾಡು ಎಲ್ಲ ಕಾಲಗಳಲ್ಲಿಯು ನಡೆಯುತ್ತಿರುತ್ತದೆ. ಕಲಿಕೆ ಎನ್ನುವುದು ನರ ಮಂಡಲದಲ್ಲಿ ಆಗುವ ಬದಲಾವಣೆ ಆಗಿದೆ. ಆದ್ದರಿಂದ ಈ ಬದಲಾವಣೆಯು ನರ ಮಂಡಲಕ್ಕೂ ಸಂಬಂಧಪಟ್ಟದ್ದಾಗಿದೆ. ಪ್ರತಿಯೊಬ್ಬ ವ್ಯಕ್ತಿಯು ಸಹಜ ಪ್ರವೃತ್ತಿಗಳೊಡನೆ ಜನಿಸುತ್ತಾನೆ. ಅವುಗಳನ್ನು ಸುಧಾರಿಸಿ ಸಂಪನ್ನಗೊಳಿಸುವುದು, ಅವುಗಳಲ್ಲಿ ಮಾರ್ಪಾಡನ್ನು ಉಂಟುಮಾಡುವುದು ಅವಶ್ಯ. ಈ ಪ್ರಪಂಚ ಇಷ್ಟೊಂದು ಪ್ರಗತಿ ಹಾಗೂ ಸುಧಾರಣೆಗಳನ್ನು ಹೊಂದಿರುವುದು ಕಲಿಕೆಯಿಂದಲೆ. ಪ್ರತಿಯೊಬ್ಬ ಮನುಷ್ಯನ ಜೀವನದಲ್ಲಿ ಕಲಿಕೆಯ ಸನ್ನಿವೇಶಗಳು ಸಾಮಾನ್ಯ ಹಾಗೂ ಸ್ವಭಾವಿಕ. ಪ್ರತಿಯೊಂದು ಹಂತದಲ್ಲಿ ವ್ಯಕ್ತಿ ಏನಾದರೂ ಕಲಿಯುತ್ತಲೆ ಇರುತ್ತಾನೆ. ವ್ಯಕ್ತಿಯ ಬದುಕಿನಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಕಲಿಕೆಯ ಪ್ರಕ್ರಿಯೆಯು ನಡೆಯುತ್ತಲೆ ಇರುತ್ತದೆ. ಒಟ್ಟಿನಲ್ಲಿ ವ್ಯಕ್ತಿಯ ಹುಟ್ಟಿನಿಂದ ಸಾಯುವವರೆಗೆ ನಿರಂತರವಾಗಿ ಹೊಸ ಹೊಸ ಅನುಭವಗಳನ್ನು ಗಳಿಸುತ್ತಾ ಹೋಗುತ್ತಾನೆ. ಇದರಿಂದ ಅವನ ವರ್ತನೆಗಳು ಪರಿವರ್ತನೆಗೊಳ್ಳುತ್ತವೆ. ಹೀಗೆ ಅನುಭವಗಳಿಂದ ವರ್ತನೆಯಲ್ಲಿ ಉಂಟಾದ ಪರಿವರ್ತನೆಯೆ 'ಕಲಿಕೆ'ಯಾಗಿದೆ. ಇಂತಹ ಕಲಿಕೆಯು ಸಿದ್ಧತೆ, ಅಭ್ಯಾಸ ಹಾಗೂ ಪರಿಣಾಮ ಎಂಬ ಮೂರು ನಿಯಮಗಳ ಮೂಲಕ ಸಾಗಬೇಕು. ಆಗ ಮಾತ್ರ ಉತ್ತಮ ಕಲಿಕೆಯನ್ನು ರೂಢಿಸಿಕೊಳ್ಳಲು ಸಾಧ್ಯ ಎಂದು ಥಾರ್ನಡೈಕ್ ಹೇಳಿದ್ದಾನೆ.

## ಬೋಧನೆ ಹಾಗೂ ಕಲಿಕೆಯ ವಿಧಾನಗಳು

ಬೋಧನೆ, ಕಲಿಕೆ ಹಾಗೂ ಪಠ್ಯಕ್ರಮಗಳು ಶೈಕ್ಷಣಿಕ ಪ್ರಕ್ರಿಯೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದಿವೆ. ಶಿಕ್ಷಣವು ಬೋಧನೆ ಹಾಗೂ ಕಲಿಕೆಯನ್ನು ಅವಲಂಬಿಸಿರುವುದರಿಂದ ಇವುಗಳ ಸುಧಾರಣೆಯನ್ನು ಮಾಡಲು ರಾಷ್ಟ್ರ, ರಾಜ್ಯ ಸರ್ಕಾರಗಳು ಹಲವಾರು ಯೋಜನೆ, ಕಾರ್ಯಕ್ರಮಗಳನ್ನು ರೂಪಿಸಿ, ಅವುಗಳನ್ನು ಜಾರಿಗೆ ತರುತ್ತಲಿವೆ. ಬೋಧನೆ ಹಾಗೂ ಕಲಿಕೆಯನ್ನು

ಪರಿಣಾಮಕಾರಿಯಾಗಿಸಲು ಹಿಂದಿನಿಂದ ಇಂದಿನವರೆಗೂ ಪ್ರಯತ್ನಗಳು ನಡೆಯುತ್ತಲೆ ಬಂದಿವೆ. ಅದರಿಂದ ಬೋಧನೆ ಹಾಗೂ ಕಲಿಕೆಯಲ್ಲಿ ಕಾಲದಿಂದ ಕಾಲಕ್ಕೆ ಹಲವಾರು ಬದಲಾವಣೆಗಳನ್ನು ಕಾಣಲಾಗಿದೆ. ಅಲ್ಲದೆ, ಬೋಧನೆ ಹಾಗೂ ಕಲಿಕೆಗೆ ಹೊಸ ಹೊಸ ವಿಧಾನಗಳನ್ನು ಅನುಸರಿಲಾಗುತ್ತದೆ. ಅಂತಹ ಕೆಲ ಹೊಸ ವಿಧಾನಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಹೇಳಲಾಗಿದೆ.

### ರ.ಗ.ಸ.ದ.ಅ. ವಿಧಾನ

"ಭಾಷಾ ಕಲಿಕೆಯಲ್ಲಿ ಹೊಸತನ ತರಬೇಕು ಎಂಬ ದೃಷ್ಟಿಯಿಂದ ರ.ಗ.ಸ.ದ.ಅ. ಅಕ್ಷರಗಳ ಮೂಲಕ ಪದರಚನೆ ಮಾಡಲು ಅನುಕೂಲವಾಗುವಂತೆ ಸಾಮರ್ಥ್ಯಾಧಾರಿತ ರೀತಿಯಲ್ಲಿ ಭಾಷಾ ಪಠ್ಯವಸ್ತುವನ್ನು ಬದಲಾಯಿಸಲಾಗಿದೆ".[೧] ಇದಕ್ಕೆ ಸಂಬಂಧಿಸಿದಂತೆ ಶಿಕ್ಷಕರಿಗೆ ತರಬೇತಿ ಕೊಡಲಾಗಿದೆ. ತರಬೇತಿ ಪಡೆದಂತ ಶಿಕ್ಷಕರು ಶ್ರಮವಹಿಸಿ ಮಕ್ಕಳಿಗೆ ಬೋಧನೆ ಮಾಡಿದ್ದಾರೆ. ತಕ್ಕಮಟ್ಟಿಗೆ ಮಕ್ಕಳ ಕಲಿಕೆಯಲ್ಲಿ ಬದಲಾವಣೆ ಕಾಣಬಹುದು. ಆದರೆ ಶಿಕ್ಷಕರು ಬೋಧನೆಯಲ್ಲಿ ಆದ ಹಲವಾರು ಬದಲಾವಣೆಗಳನ್ನು ತಿಳಿದುಕೊಂಡರು. ಸಾಮಾನ್ಯವಾಗಿ ಬಹುತೇಕ ಶಿಕ್ಷಕರು ಮಕ್ಕಳ ಮಾನಸಿಕ ಸಾಮರ್ಥ್ಯವನ್ನು ಅರಿತುಕೊಳ್ಳದೆ ಮತ್ತೆ ಸಾಂಪ್ರದಾಯಿಕ ವಿಧಾನಗಳ ಮೂಲಕ ಬೋಧನೆ ಮಾಡುತ್ತಿರುವುದನ್ನು ನಾವು ಕಾಣಬಹುದಾಗಿದೆ.

ಈ ವಿಧಾನವು ಕಂಠವಾದ ಅಥವಾ ಬಾಯಿಪಾಠ ಮಾಡುವ ವಿದ್ಯಾರ್ಥಿಗಳ ಯಾಂತ್ರಿಕ ಕಲಿಕೆಯನ್ನು ನಿಯಂತ್ರಿಸಲು ಸಾಧ್ಯವಾದರೂ ಮಕ್ಕಳಲ್ಲಿ ವರ್ಣಮಾಲೆಯಲ್ಲಿನ ಎಲ್ಲ ಅಕ್ಷರಗಳ ಪರಿಕಲ್ಪನೆ ಇಲ್ಲದಂತಾಗುತ್ತದೆ. ಅಲ್ಲದೆ ಈ ವಿಧಾನದಲ್ಲಿ ಬಳಸಿದ ಪದಗಳ ರಚನೆಯು ಆಯಾ ಸ್ಥಳೀಯ ಪರಿಸರಕ್ಕೆ ತಕ್ಕಂತೆ ಇಲ್ಲದಿರುವುದರಿಂದ ಮಕ್ಕಳು ಆ ಪದಗಳ ಪರಿಕಲ್ಪನೆ/ಅರ್ಥವನ್ನು ತಿಳಿಯದೆ ಕಲಿಕೆ ವಿಫಲವಾಗುತ್ತದೆ.

### ಸಾಮರ್ಥ್ಯಾಧಾರಿತ ಬೋಧನೆ

ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳ ಬುದ್ಧಿಮಟ್ಟಕ್ಕೆ ಮತ್ತು ಸಾಮರ್ಥ್ಯಕ್ಕೆ ತಕ್ಕಂತೆ ಬೋಧನಾ ಕಾರ್ಯ ನಡೆಯಬೇಕು. ಬೋಧನಾ ಚಟುವಟಿಕೆಗಳ ಮೂಲಕ ನೇರವಾಗಿ ಸಾಮರ್ಥ್ಯವನ್ನು ವೃದ್ಧಿಸಬಹುದು. ಬೋಧನೆ ಆನಂದದಾಯಕವಾಗಿರಬೇಕು. ಬೋಧನೆ ಮಕ್ಕಳಿಗೆ ಕುತೂಹಲ ಕೆರಳಿಸುವಂತಿರಬೇಕು. ಮಗುವು ಲವಲವಿಕೆಯಿಂದ, ಉತ್ಸಾಹದಿಂದ ಭಾಗವಹಿಸಬೇಕಾದರೆ ಮಗುವಿನ ಸಾಮರ್ಥ್ಯಾಧಾರಿತ ಬೋಧನೆ ನಡೆಯಬೇಕು. ಆಗ ಮಗುವಿನಲ್ಲಿ ಸ್ವತಂತ್ರವಾಗಿ ನೋವಿಲ್ಲದೆ, ಬೇಸರವಿಲ್ಲದೆ ಕಲಿಕೆಯು ಪರಿಣಾಮಕಾರಿಯಾಗಿ ನಡೆಯಬೇಕು ಎಂಬ ಉದ್ದೇಶದಿಂದ ಸರ್ಕಾರ ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಕಲಿಕೆಯ ಕನಿಷ್ಠ ಮಟ್ಟಗಳನ್ನು ಮೊದಲು ಜಾರಿಗೆ

ತರಲು ಪ್ರಸ್ಥಾಪಿಸಲಾಯಿತು. ಪ್ರಾಥಮಿಕ ತರಗತಿಯ ಪ್ರತಿ ವಿಷಯಗಳಲ್ಲಿಯೂ ಅತಿ ಅವಶ್ಯಕವಾಗಿ ಗಳಿಸಬೇಕಾದ ಸಾಮರ್ಥ್ಯವನ್ನು ಮಗುವು ಗಳಿಸುವಂತೆ ಶಿಕ್ಷಕರು ಬೋಧಿಸುವುದೆ "ಸಾಮರ್ಥ್ಯಾಧಾರಿತ ಬೋಧನೆ".

ರಾಷ್ಟ್ರಮಟ್ಟದಲ್ಲಿ ಪ್ರತಿಯೊಂದು ವಿಷಯದಲ್ಲಿ ನಿರ್ದಿಷ್ಟ ಕ್ಷೇತ್ರಗಳನ್ನು ಗುರುತಿಸಿ, ಪ್ರತಿಯೊಂದು ಕ್ಷೇತ್ರಗಳಲ್ಲಿಯು ಆಯಾ ವರ್ಗದಲ್ಲಿ ಗಳಿಸಬೇಕಾದ ಸಾಮರ್ಥ್ಯಗಳನ್ನು ನಿರ್ದಿಷ್ಟ ಪಡಿಸಲಾಗಿದೆ. ಉದಾಹರಣೆಗೆ ಭಾಷಾ ಕ್ಷೇತ್ರಗಳಲ್ಲಿ ಪ್ರತಿಯೊಂದು ತರಗತಿಗೆ ಅನುಗುಣವಾಗಿ ನಾಲ್ಕು ಕೌಶಲದಲ್ಲಿ ಪ್ರತಿಯೊಂದು ಮಗು ಪಡೆಯಬಹುದಾದ ಸಾಮರ್ಥ್ಯಗಳನ್ನು ಗುರುತಿಸಿ, ಆಯಾ ತರಗತಿಯಲ್ಲಿ ಅವುಗಳ ಬಗ್ಗೆ ಪ್ರಭುತ್ವ ಪಡೆಯಬೇಕಾಗುತ್ತದೆ. ಸಾಮರ್ಥ್ಯಗಳಿಗೆ ಅನುಗುಣವಾಗಿ ಬೋಧನೆ ಮಾಡಲು ಶಿಕ್ಷಕ ಈ ಬೋಧನಾ ವಿಧಾನಗಳನ್ನು ಮೊದಲು ಅರಿತಿರಬೇಕು. ಈ ಸಾಮರ್ಥ್ಯಾಧಾರಿತ ಬೋಧನೆಯು ಆರು ಹಂತಗಳನ್ನು ಒಳಗೊಂಡಿದ್ದು, ಅವುಗಳನ್ನು ಸಮರ್ಪಕವಾಗಿ ಮಾಡಿದಾಗ ಮಾತ್ರ ಕಲಿಕೆ ಪರಿಣಾಮಕಾರಿಯಾಗುತ್ತದೆ. ಇಂತಹ ಪರಿಣಾಮಕಾರಿ ಕಲಿಕೆಯನ್ನುಂಟು ಮಾಡುವ ಸಾಮರ್ಥ್ಯಾಧಾರಿತ ಬೋಧನೆಯ ಹಂತಗಳು ಈ ಕೆಳಗಿನಂತೆ ನೋಡಬಹುದು.

೧. ಪೂರ್ವ ಸಿದ್ದತಾ ಚಟುವಟಿಕೆ

೨. ಕಲಿಕಾ ಪೂರಕ ಚಟುವಟಿಕೆ

೩. ಕಲಿಕಾಂಶ ಚಟುವಟಿಕೆ

೪. ಅಭ್ಯಾಸ ಚಟುವಟಿಕೆ

೫. ಬಳಕೆಯ ಹಂತ

೬. ಮೌಲ್ಯಮಾಪನ ಚಟುವಟಿಕೆ

ಈ ಬೋಧನೆಯು ಒಂದರಿಂದ ನಾಲ್ಕನೇ ತರಗತಿಯ ವರೆಗೆ ಆರು ಹಂತಗಳಲ್ಲಿ ನಡೆಯುತ್ತಿದ್ದರೆ, ಐದು, ಆರು, ಏಳನೇ ತರಗತಿಗೆ ಅಂದರೆ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ನಾಲ್ಕು ಹಂತಗಳಲ್ಲಿ ನಡೆಯುತ್ತದೆ. ಈ ಸಾಮರ್ಥ್ಯಾಧಾರಿತ ಬೋಧನೆ ವಿಧಾನವು ಉತ್ತಮ ಬೋಧನಾ ವಿಧಾನವಾಗಿದ್ದು, ಕೆಲ ಶಿಕ್ಷಕರು ಇದರ ಸಮರ್ಪಕ ಬಳಕೆ ಮಾಡಿಕೊಳ್ಳುತ್ತಿಲ್ಲ. ಕಾರಣ ಸೌಲಭ್ಯಗಳ ಕೊರತೆ, ಸಮಯದ ಅಭಾವ, ಆಸಕ್ತಿ ಇಲ್ಲದೆ ಇರುವುದು. ಹೀಗಾಗಿ ಇದು ಶಾಲೆಗಳಲ್ಲಿ ಸಮರ್ಪಕವಾಗಿ ಬಳಕೆ ಯಾಗಿಲ್ಲದಿರುವುದು ವಿಷಾದನೀಯವಾಗಿದೆ.

ಶಿಕ್ಷಕರು ಮೊದಲು ತರಗತಿಯ ಪಾಠಗಳಿಗೆ ಸಂಬಂಧಿಸಿದಂತೆ ತಮ್ಮನ್ನು ತೊಡಗಿಸಿಕೊಳ್ಳದಿರುವಿಕೆ, ಪಾಠಕ್ಕೆ ಸಂಬಂಧಿಸಿದಂತೆ ಪೂರ್ವ ಯೋಜನೆ ಮಾಡಿಕೊಳ್ಳದಿರುವುದು, ವಿದ್ಯಾರ್ಥಿಗಳ ಸಾಮರ್ಥ್ಯ ಹಾಗೂ ಉಪಸಾಮರ್ಥ್ಯಗಳನ್ನು ಅರಿಯುವಲ್ಲಿ ವಿಫಲವಾಗಿರುವುದು.

ಈ ಬೋಧನೆಯಲ್ಲಿ ಎಲ್ಲಾ ಮಕ್ಕಳು ಸಮರ್ಪಕವಾಗಿ ಭಾಗವಹಿಸದಿರುವುದು, ಸೌಲಭ್ಯಗಳ ಕೊರತೆ, ಶಾಲೆಯ ವಾತಾವರಣ ಸರಿ ಇಲ್ಲದೆ ಇರುವುದು, ಅಲ್ಲದೆ ಸರ್ಕಾರವು ಯೋಜನೆಯನ್ನು ರೂಪಿಸುವಲ್ಲಿ ಹಲವಾರು ಲೋಪದೋಷಗಳನ್ನು ಒಳಗೊಂಡಿದೆ. ಅದರಲ್ಲಿ ಮುಖ್ಯವಾಗಿ ಈ ಸಾಮರ್ಥ್ಯಾಧಾರಿತ ಬೋಧನೆ ಕಡಿಮೆ ಸಂಖ್ಯೆ ಮಕ್ಕಳಿರುವ ತರಗತಿಗೆ ಹೆಚ್ಚು ಸೂಕ್ತ. ಆದರೆ ತರಗತಿಯ ಮಕ್ಕಳ ಸಂಖ್ಯೆ ಹೆಚ್ಚಾಗಿದ್ದಾರೆ. ಈ ಎಲ್ಲಾ ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ಬೋಧಿಸಲು ಸಾಧ್ಯವಿಲ್ಲ.

**ಕೇಳಿ-ಕಲಿ**

ಈಶಾನ್ಯ ವಲಯದ ಕೆಲವು ಜಿಲ್ಲೆಗಳಲ್ಲಿ ೩ನೇ ತರಗತಿಯ ಮಕ್ಕಳಿಗೆ ಪ್ರಾರಂಭವಾದ 'ಕೇಳಿ-ಕಲಿ' ಕಾರ್ಯಕ್ರಮ ಮಕ್ಕಳ ಆಕರ್ಷಣೆ ಹಾಗೂ ಗುಣಾತ್ಮಕ ಕಲಿಕೆಯಲ್ಲಿ ಆದ ಬದಲಾವಣೆಗಳನ್ನು ಆಧಾರಿಸಿದೆ. ರಾಜ್ಯದಾದ್ಯಂತ ವಿಸ್ತರಿಸಿ ಹಂತ ಹಂತವಾಗಿ ಪ್ರಸಾರವಾಗುತ್ತಾ ಬಂದಿದೆ. ೬, ೭ ಮತ್ತು ೮ನೇ ತರಗತಿಗಳಿಗೆ ಕೇಳಿ-ಕಲಿ ಪ್ರಸಾರವಾಗುತ್ತಿದ್ದು, ಇ.ಡಿ.ಸಿ. ನಿರ್ಮಿಸಿರುವ ಚುಕ್ಕಿ ಚಿನ್ನ ಮತ್ತು ಚಿನ್ನರ ಚುಕ್ಕಿ ೧ ರಿಂದ ೫ನೇ ತರಗತಿಗಳಿಗೆ ಪ್ರಸಾರವಾಗುತ್ತದೆ. ರಾಜ್ಯದ ೧೦ ಬಾನುಲಿ ಕೇಂದ್ರಗಳಿಂದ ಪ್ರಸಾರವಾಗುತ್ತಿರುವ ಪಾಠಗಳು ಕಲಿಕಾ ಕ್ಷೇತ್ರಗಳನ್ನು ಪರಿಗಣಿಸಿ ನಿರ್ಮಾಣಗೊಂಡಿವೆ. "ಕೇಳಿ-ಕಲಿ ಬಾನುಲಿ ಕಾರ್ಯಕ್ರಮವನ್ನು ಮೊದಲು ೨೦೦೦-೦೧ರ ಶೈಕ್ಷಣಿಕ ವರ್ಷದಲ್ಲಿ ಆಕಾಶವಾಣಿಯು ಗುಲ್ಬರ್ಗಾ ಮತ್ತು ರಾಯಚೂರು ಕೇಂದ್ರದ ವ್ಯಾಪ್ತಿಯಲ್ಲಿ ಬರುವ ಶಾಲೆಗಳ ಮೂರನೇ ತರಗತಿ ಮಕ್ಕಳಿಗಾಗಿ ಪ್ರಸಾರಮಾಡಲಾಯಿತು. ಮರು ವರ್ಷ ಅಂದರೆ ೨೦೦೧-೦೨ರ ಶೈಕ್ಷಣಿಕ ವರ್ಷದಲ್ಲಿ ಉತ್ತರ ಕರ್ನಾಟಕದ ೧೧ ಡಿ.ಪಿ.ಇ.ಪಿ. ಜಿಲ್ಲೆಗಳ ೩-೪ನೇ ತರಗತಿಗಳ ಮಕ್ಕಳಿಗಾಗಿ ಬಾನುಲಿ ಪಾಠಗಳನ್ನು ತಲುಪಿಸಲಾಯಿತು. ಕಾರ್ಯಕ್ರಮದ ಮೂರನೆ ಹಂತದಲ್ಲಿ ಅಂದರೆ ಶೈಕ್ಷಣಿಕ ವರ್ಷ ೨೦೦೨-೦೩ರಲ್ಲಿ ಕರ್ನಾಟಕದ ಎಲ್ಲಾ ಜಿಲ್ಲೆಗಳ ೩, ೪ ಮತ್ತು ೫ನೇ ತರಗತಿ ಎಲ್ಲಾ ಜಿಲ್ಲೆಗಳ ಬಾನುಲಿ ಪಾಠಗಳ ಪ್ರಯೋಜನ ಲಭ್ಯವಾದಷ್ಟು ಕಾರ್ಯಕ್ರಮದ ಯಶಸ್ಸನ್ನು ಕಂಡು, ೨೦೦೩-೦೪ನೇ ಸಾಲಿಗೆ ೬ನೆ ತರಗತಿಗೂ ಕೆಲವು ಪಾಠಗಳನ್ನು ವಿಸ್ತರಿಸಲಾಯಿತು. ಹಾಗೂ ಹಿಮ್ಮಾಹಿತ ಆಧಾರದ ಮೇಲೆ ೩ ಮತ್ತು ೪ನೇ ತರಗತಿಯ ಮಕ್ಕಳಿಗೆ ಚುಕ್ಕಿ, ಚಿನ್ನ ಹೀಗೆ ವಿಸ್ತರಿಸಲ್ಪಟ್ಟು, ೨೦೦೬-೦೭ನೇ ಸಾಲಿನಿಂದ ೧ ಮತ್ತು ೨ನೇ ತರಗತಿಗೆ ಚಿನ್ನರ ಚುಕ್ಕಿ, ೩, ೪ ಮತ್ತು ೫ನೇ ತರಗತಿಗಳಿಗೆ ಕೇಳಿ-ಕಲಿ ರೇಡಿಯೋ ಪಾಠಗಳು ಪ್ರಸಾರವಾಗುತ್ತಿವೆ".[೨]

ಕೇಳಿ-ಕಲಿ ಕಾರ್ಯಕ್ರಮದ ಪಠ್ಯದಲ್ಲಿ ಹಲವಾರು ಕಠಿಣ ಕ್ಷೇತ್ರಗಳನ್ನು ಆಯ್ಕೆ ಮಾಡಿಕೊಂಡು ವಿವರಿಸುವ ಪ್ರಯತ್ನ ಮಾಡಲಾಗಿದೆ. ಹಾಡು, ಸಂಗೀತ ಮತ್ತು ಧ್ವನಿ ಪರಿಣಾಮಗಳ ಯುಕ್ತ

ಬಳಕೆಯಿಂದ ಪಾಠಗಳನ್ನು ಸುಲಭ, ಗ್ರಹ್ಯವೂ ಆಕರ್ಷಣೀಯವು ಆಗುವಂತೆ ಪ್ರಸ್ತುತಮಾಡಿದೆ. ಈ ಪಾಠಗಳನ್ನು ರಾಜ್ಯದ ಎಲ್ಲಾ ಭಾಗದ ಪ್ರತಿಧ್ವನಿತ ಶಿಕ್ಷಕ-ಶಿಕ್ಷಕಿಯರ, ತಜ್ಞ ಮಾರ್ಗದರ್ಶಕರು ಏರ್ಪಡಿಸಿದ್ದಾರೆ. ಪಠ್ಯಕ್ರಮದ ಅಂಶಗಳನ್ನು ಸಿದ್ಧಪಡಿಸಿದ್ದಾರೆ. ಪಠ್ಯಕ್ರಮ ಹಾಗೂ ನಿರ್ಧಾರಿತ ಸಾಮರ್ಥ್ಯ ಗಮನದಲ್ಲಿಟ್ಟುಕೊಂಡು ಬಾನುಲಿ, ಎಜುಶ್ಯಾಟ್ ಕಾರ್ಯಕ್ರಮಗಳ ವೇಳಾಪಟ್ಟಿ ೨೦೦೭-೦೮ ರೂಪಿಸಿದೆ. ಈ ಬಾನುಲಿ ಪಾಠಗಳು ಕೇವಲ ಪಠ್ಯಪುಸ್ತಕಗಳಿಗಷ್ಟೆ ಆಧಾರವಾಗಿಲ್ಲ, ಅಲ್ಲಲ್ಲಿ ಪೂರಕ ಮಾಹಿತಿ ಹೊಸ ಅನುಭವ ಮತ್ತು ವಿನೂತನ ಶ್ರೇಣಿಗಳನ್ನು ಅಳವಡಿಸಿಕೊಳ್ಳಲಾಗಿದೆ. ಕರ್ನಾಟಕದ ವಿವಿಧ ಭಾಗಗಳಲ್ಲಿ ಬಳಕೆಯಲ್ಲಿರುವ ಭಾಷೆಯ ಸೊಗಡು, ಉಚ್ಚಾರ ಮತ್ತು ಭಾಷೆಗಳನ್ನು ಯುಕ್ತವಾಗಿ ಬಳಸಿಕೊಂಡಿವೆ. ಹಾಗಿದ್ದರೂ, ಈ ಬಾನುಲಿ ಪಾಠಗಳು ತರಗತಿಯ ಬೋಧನೆಗೆ ಪರ್ಯಾಯವಲ್ಲ. ಇವು ಕೇವಲ ಪೂರಕವಾದದು ಇದರ ಕೆಲ ಅಂಶಗಳನ್ನು ಶಿಕ್ಷಕ-ಶಿಕ್ಷಕಿಯರು ಗಮನಿಸಬೇಕು. ಕೇಳಿ-ಕಲಿ ಪಾಠ ಫಲಪ್ರದವಾಗಲು ವರ್ಗ ಶಿಕ್ಷಕರ ವಿಶೇಷ ಕಾಳಜಿ ಅವಶ್ಯಕ.

**"ಓದುವೆ ನಾನು"**

ಪ್ರಾಥಮಿಕ ಶಿಕ್ಷಣದ ಸಾರ್ವತ್ರಿಕರಣದ ಆಶ್ರಯದಲ್ಲಿ ಶಿಕ್ಷಣದ ಗುಣಮಟ್ಟ ಸುಧಾರಣೆ ಒಂದು ಪ್ರಮುಖ ಉದ್ದೇಶವಾಗಿದೆ. ಇತ್ತೀಚಿನ ವರ್ಷಗಳಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಗುಣಾತ್ಮಕ ಬದಲಾವಣೆಗೆ ಹಲವು ಪ್ರಯತ್ನಗಳು ನಡೆದಿವೆ ಹಾಗೂ ನಡೆಯುತ್ತಿವೆ. ಆದರೂ ಮಕ್ಕಳ ಕಲಿಕೆಯು ನಿರೀಕ್ಷಿತ ಮಟ್ಟ ತಲುಪಲಿಲ್ಲ ಎನ್ನುವುದು ಸತ್ಯ. ಇತ್ತೀಚಿನ ವರದಿಗಳು ಕೂಡಾ ಈ ವಿಷಯವನ್ನು ದೃಢಪಡಿಸಿವೆ. ಪ್ರಾಥಮಿಕ ಶಾಲಾ ಹಂತದಲ್ಲಿ ಭಾಷೆಯನ್ನು ಸುಲಲಿತವಾಗಿ ಆಲಿಸುವುದು, ಮಾತನಾಡುವುದು, ಓದುವುದು ಮತ್ತು ಬರೆಯುವುದು ಇವು ವಿದ್ಯಾರ್ಥಿಗಳು ಮೂಲಭೂತವಾಗಿ ಗಳಿಸಬೇಕಾಗಿರುವ ಸಾಮರ್ಥ್ಯಗಳಾಗಿವೆ. ವಿದ್ಯಾರ್ಥಿಗಳಲ್ಲಿ ಓದುವ ಸಾಮರ್ಥ್ಯವನ್ನು ಬೆಳೆಸಲು ಪೂರಕವಾಗುವ ನಿಟ್ಟಿನಲ್ಲಿ ತಯಾರಿಸುವ ಸಾಮಾಗ್ರಿಗಳೇ "ಓದುವೆ ನಾನು" ಕಾರ್ಡುಗಳು.

ಓದುವೆ ನಾನು ಕಲಿಕಾ ಸಾಮಾಗ್ರಿಗಳನ್ನು ಅಕ್ಷರ ಪ್ರತಿಷ್ಠಾನದ ಸಹಯೋಗದೊಂದಿಗೆ ಸರ್ವ ಶಿಕ್ಷಣ ಅಭಿಯಾನ ತಯಾರಿಸಿ ಆಯ್ದ ೧೧ ಜಿಲ್ಲೆಗಳ ಪ್ರತಿ ಶಾಲೆಯ ಆಯ್ದ ಮಕ್ಕಳಿಗೆ ನೀಡಲಾಗುತ್ತದೆ. ಹಲವಾರು ಭಾಷಾತಜ್ಞರು, ಶಿಕ್ಷಣತಜ್ಞರು ಮತ್ತು ಸಂಪನ್ಮೂಲ ವ್ಯಕ್ತಿಗಳು ತಂದ ಈ ವಿನ್ಯಾಸ ರಚನೆ, ವಿಷಯವಸ್ತುವಿನ ಆಯ್ಕೆಯನ್ನು ತೀರ್ಮಾನಿಸಲು ಹಲವಾರು ಕಾರ್ಡುಗಳನ್ನು ಪ್ರೋ. ಲಿಂಗದೇವರು ಹಳೆಮನೆ, ಕೇಂದ್ರೀಯ ಭಾಷಾ ಅಧ್ಯಯನ ಸಂಸ್ಥೆ ಮೈಸೂರು ಮತ್ತು ಪ್ರೋ. ಎನ್. ರಘುನಾಥ ವಿಶ್ರಾಂತ ಪ್ರಾಧ್ಯಾಪಕರು, ಪ್ರಾಂತೀಯ ಶಿಕ್ಷಣ ಸಂಸ್ಥೆ, ಮೈಸೂರು

ರವರ ಅಧ್ಯಕ್ಷತೆಯಲ್ಲಿ ನಡೆಸಲಾಗುತ್ತಿತ್ತು. ಸಮಾನತೆಯ ತೀರ್ಮಾನದಂತೆ ಒಟ್ಟು ೬೦ ಕಾರ್ಡುಗಳನ್ನು ಮಾಡಲಾಗಿದೆ. ಸಾಮರ್ಥ್ಯಗಳ ಆಧಾರದ ಮೇಲೆ ಈ ಕಾರ್ಡುಗಳನ್ನು ಹಲವಾರು ಗುಂಪುಗಳನ್ನಾಗಿ ಮಾಡಲಾಗಿದೆ.

ಓದುವಿಕೆಯಲ್ಲಿ ಹಿಂದುಳಿದಿರುವ ವಿದ್ಯಾರ್ಥಿಗಳ ಓದುವ ಸಾಮರ್ಥ್ಯವನ್ನು ವೃದ್ಧಿಸಲು ಅನುವುವಾಗುವಂತೆ ಚಿತ್ರಗಳ ಕಾರ್ಡ್‌ಗಳು, ಸರಳ ಪದಗಳ ಕಾರ್ಡುಗಳು, ಗುಣಿತಾಕ್ಷರಯುಕ್ತ ಪದಗಳ ಕಾರ್ಡುಗಳು, ಒತ್ತಕ್ಷರಯುಕ್ತ ಪದಗಳು, ಪದಗುಚ್ಛಗಳು, ಪ್ರಾಸಬದ್ಧವಾಗಿರುವ ಕವನಗಳು, ಹಾಗೂ ಕಥೆಗಳನ್ನು ಒಳಗೊಂಡಂತೆ ಕಾರ್ಡುಗಳನ್ನು ರಚಿಸಲಾಗಿದೆ. ಇಲಾಖೆಯ ಈ ಪ್ರಯತ್ನ ಮಕ್ಕಳ ಓದುವ ಸಾಮರ್ಥ್ಯವನ್ನು ಸುಧಾರಿಸುವುದಾಗಿದೆ. ಈ ಕಾರ್ಡ್‌ಗಳು ಪರ್ಯಾಯ ಪಠ್ಯಪುಸ್ತಕಗಳಲ್ಲ. ಇವುಗಳನ್ನು ಪ್ರಶ್ನೆ ಕೇಳಿ ಉತ್ತರ ಬರೆಸುವುದು ಅಥವಾ ಗೃಹಪಾಠ ಕೊಡುವುದು ಇದರ ಉದ್ದೇಶವಲ್ಲ. ಆದರೆ ಮನೆಯಲ್ಲಿ ಪೋಷಕರ ಜೊತೆ ಅಭ್ಯಾಸ ಮಾಡುವುದಾದರೆ ಅದನ್ನು ಪ್ರೋತ್ಸಾಹಿಸಬಹುದು.

ಶಾಲಾ ಪಠ್ಯವಸ್ತುವಿನಲ್ಲಿ ಮಕ್ಕಳು ಓದುವ ಕೌಶಲ ವೃದ್ಧಿಸಲು ಹಲವಾರು ಚಟುವಟಿಕೆಗಳಿವೆ. ಇವುಗಳಿಗೆ ಪೂರಕರವಾಗಿ ಓದುವುದನ್ನು ಹಸನಗೊಳಿಸಲು ಹಲವಾರು ಪ್ರಯೋಗಗಳನ್ನು ಶಿಕ್ಷಕರು ಅಲ್ಲಲ್ಲಿ ಕೈಗೊಂಡಿದ್ದಾರೆ. ಆದರೆ ವ್ಯವಸ್ಥಿತವಾದ ಕಾರ್ಯಕ್ರಮಗಳನ್ನು ರೂಪಿಸಿ, ಅನುಷ್ಠಾನಗೊಳಿಸಿರುವ ಕ್ರಮಗಳಲ್ಲಿ ಅಕ್ಷರ ಪ್ರತಿಷ್ಠಾನದ "ಓದುವೆ ವೇಗವರ್ಧನಾ" ಕಾರ್ಯಕ್ರಮ ಉಲ್ಲೇಖನೀಯ. ಈ ಕಾರ್ಯಕ್ರಮವನ್ನು ೨೦೦೪-೦೫ರ ಸಾಲಿನ ಬೆಂಗಳೂರು ನಗರ ಜಿಲ್ಲೆಯ ೧೧೭ ಶಾಲೆಗಳಲಿ ಕೈಗೊಳ್ಳಲಾಯಿತು. ಇಲ್ಲಿ ದೊರೆತ ಫಲಿತಾಂಶಗಳು ಉತ್ತೇಜನಕಾರಿಯಾದ ಕಾರಣ ೨೦೦೬-೦೭ರಲ್ಲಿ ಈ ಕಾರ್ಯಕ್ರಮವನ್ನು ಸ್ವಲ್ಪ ಮಟ್ಟಿಗೆ ವ್ಯಾಪಕಗೊಳಿಸಿ ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಸರ್ವಶಿಕ್ಷಣ ಅಭಿಯಾನದ ಸಹಯೋಗದಿಂದ ಅನುಷ್ಠಾನಗೊಳಿಸಲಾಯಿತು. ಬೆಂಗಳೂರು ನಗರ ಜಿಲ್ಲೆಯ ಸುಮಾರು ೭೦,೦೦೦ ಮಕ್ಕಳಿಗೆ ಮತ್ತು ಉತ್ತರಕರ್ನಾಟಕದ ೨೬,೦೦೦ ಮಕ್ಕಳಿಗೆ ಈ ಕಾರ್ಯಕ್ರಮಗಳು ತಲುಪಿವೆ.

ಈ ಕಾರ್ಯಕ್ರಮದಿಂದ ಒಟ್ಟಾರೆ ೯೬,೦೦೦ ಮಕ್ಕಳು ಸರಾಗವಾಗಿ ಓದುತ್ತಾರೆ ಎನ್ನುವುದು ಅಕ್ಷರ ಪ್ರತಿಷ್ಠಾನ ಕೈಗೊಂಡ ಅಧ್ಯಯನ ತಿಳಿಸುತ್ತದೆ. ಇಲ್ಲಿ ಧನಾತ್ಮಕ ಪರಿಣಾಮಗಳನ್ನು ಗಮನಿಸಿ ೨೦೦೭-೦೮ರಲ್ಲಿ ಸರ್ವ ಶಿಕ್ಷಣ ಅಭಿಯಾನದ ವಾರ್ಷಿಕ ಯೋಜನೆಯಲ್ಲಿ ಸುಮಾರು ಹನ್ನೊಂದು ಜಿಲ್ಲೆಗಳು ಈ ಕಾರ್ಯಕ್ರಮವನ್ನು ವಿಸ್ತರಿಸಲು ಹಣಕಾಸನ್ನು ಒದಗಿಸಿಕೊಡುತ್ತವೆ. ಈ ಹಂತದಲ್ಲಿ ನಡೆದ ವಿಸ್ತೃತ ಚರ್ಚೆಯಂತೆ ಓದುವೆ ನಾನು ಕಾರ್ಡುಗಳ ವಿಷಯ ಭಾಷೆ ಮತ್ತು ಕಲಿಸುವ

ವಿಧಾನಗಳ ಕುರಿತು ಇನ್ನೂ ಮುಂತಾದ ವ್ಯಾಪಕ ಅನುಷ್ಠಾನ ಯೋಗ್ಯವಾದ ರೂಪುರೇಷೆಯನ್ನು ಸೂಕ್ತವಾಗಿ ತೀರ್ಮಾನಿಸಲಾಯಿತು. ಈ ಹಿನ್ನಲೆಯಲ್ಲಿ ಡಿ.ಎಸ್.ಇ.ಆರ್.ಟಿ. ಹಂತದಲ್ಲಿ ಹಾಗೂ ಸರ್ವ ಶಿಕ್ಷಣ ಅಭಿಯಾನ ಕಛೇರಿಯಲ್ಲಿ ವ್ಯಾಪಕ ಚರ್ಚೆಗಳು ನಡೆದಿವೆ. ಇವುಗಳ ಆಧಾರದ ಮೇಲೆ ಹಲವು ನುರಿತ ಶಿಕ್ಷಕರು ಮತ್ತು ತಜ್ಞರನ್ನೊಳಗೊಂಡ ಸಮಿತಿ ಓದುವ ಕಾರ್ಡುಗಳನ್ನು ಸಿದ್ಧಪಡಿಸಿವೆ. ಈ ಕಾರ್ಡುಗಳ ಮುಖ್ಯ ಉದ್ದೇಶ ಮಕ್ಕಳ ಓದುವ ಕೌಶಲವನ್ನು ವೃದ್ಧಿಸುವುದು ಹಾಗೂ ಓದುವ ಹವ್ಯಾಸ ಬೆಳೆಸುವುದು.

**ಕಾರ್ಡುಗಳ ಸ್ವರೂಪ**

ಓದುವ ಕಾರ್ಯಕ್ರಮಕ್ಕೆ ಒಂದು ಆಕರ್ಷಕ ಹೆಸರನ್ನು ನೀಡಬೇಕೆಂಬ ದೃಷ್ಟಿಯಿಂದ "ಓದುವೆ ನಾನು" ಎಂಬ ಹೆಸರಿನಿಂದ ಈ ಕಾರ್ಯಕ್ರಮವನ್ನು ಗುರುತಿಸಲಾಯಿತು. ವಿದ್ಯಾರ್ಥಿ ಓದುವ ಕುರಿತು ಭರವಸೆಯನ್ನು ತಳೆಯುತ್ತಾನೆ ಎನ್ನುವುದನ್ನು ಕಾರ್ಯಕ್ರಮದ ಶಿರೋನಾಮ ಧ್ವನಿಸುತ್ತದೆ. "ಒಟ್ಟು ೬೦ ಕಾರ್ಡುಗಳಲ್ಲಿ ೧ ರಿಂದ ೮ನೇ ಕಾರ್ಡಿನ ವರೆಗೆ ಚಿತ್ರವುಳ್ಳ ಕಾರ್ಡು. ಇವುಗಳು ಪ್ರಾಣಿ, ಪಕ್ಷಿ, ಗೃಹ ಬಳಕೆಯ ವಸ್ತುಗಳು, ಗಿಡ, ಮರಗಳು, ವಾಹನಗಳ ಚಿತ್ರಗಳನ್ನು ಒಳಗೊಂಡಿದೆ. ೧೦ ರಿಂದ ೧೫ ಪದಸಹಿತ ಚಿತ್ರಗಳುಳ್ಳ ಕಾರ್ಡುಗಳು ಪ್ರಾಣಿ, ಗಿಡ ಮರ, ಇತರ ಚಿತ್ರಗಳೊಂದಿಗೆ ಚಿತ್ರದ ಹೆಸರನ್ನು ಸಹ ಒಳಗೊಂಡಿದೆ. ೧೬ ರಿಂದ ೨೫ ಕಾರ್ಡು ಸರಳ ಪದಗಳನ್ನು ಹೊಂದಿದ್ದು, ಕಲಿಕಾ ವಾಣಿಯನ್ನು ಆಧಾರಿಸಿ ಸಾಮಾನ್ಯವಾಗಿ ಬಳಕೆಯಲ್ಲಿರುವ ಪದಗಳನ್ನು ರಚಿಸಲಾಗಿದೆ. ೨೬ನೇ ಕಾರ್ಡು ಗುಣಿತಾಕ್ಷರಗಳಿಂದ ಹಾಗೂ ಹೆಚ್ಚು ಬಳಕೆಯಲ್ಲಿರುವ ಪದಗಳಿಂದ ಕೂಡಿದೆ. ೨೭ನೇ ಕಾರ್ಡುಗಳು ಒತ್ತಕ್ಷರಗಳಿಂದ ಹಾಗೂ ಹೆಚ್ಚು ಬಳಕೆಯಲ್ಲಿರುವ ಪದಗಳಿಂದ ಕೂಡಿದೆ. ೨೮ನೇ ಕಾರ್ಡು ಸರಳವಾದ ಪದಗುಚ್ಚಗಳಿಂದ ರಚಿತವಾಗಿದೆ. ೨೯ರಿಂದ ೬೦ನೇ ಕಾರ್ಡುಗಳು ಕಥೆ ಮತ್ತು ಕವನಗಳ ಕಾರ್ಡುಗಳಾಗಿವೆ."[೩] ಕಥೆಗಳನ್ನು ಸರಳವಾದ ವಾಕ್ಯಗಳಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ. ಕಾರ್ಡುಗಳ ಸಂಖ್ಯೆ ಹೆಚ್ಚುತ್ತಾ ಹೋದಂತೆ ಭಾಷೆ ಮತ್ತು ಕಥೆಯ ಹಂದರ ವಿಸ್ತೃತವಾಗಿರುವುದನ್ನು ಗಮನಿಸಬಹುದು. ಜೊತೆಗೆ ಅಲ್ಲಲ್ಲಿ ಕವನಗಳನ್ನು ಜೋಡಿಸಿದೆ. ಕಥೆಗಳಿಗೆ ಪ್ರಚಲಿತದಲ್ಲಿರುವ ಪಂಚತಂತ್ರ ಕಥೆಗಳು, ಈಸೋಪನ ಕಥೆಗಳು, ಮಹಾನ್ ವ್ಯಕ್ತಿಗಳ ಜೀವನ ಚರಿತ್ರೆಗಳನ್ನು ಆಯ್ದುಕೊಳ್ಳಲಾಗಿದೆ.

"ಓದುವ ಕಾರ್ಡುಗಳು ೬೦ ಇದ್ದರೂ ಪ್ರತಿ ವಿದ್ಯಾರ್ಥಿಗೆ ಲಭ್ಯವಾಗುವ ಕರ್ತವ್ಯಗಳು ಕೇವಲ ೫೦ ಮಾತ್ರ, ಹೇಗೆಂದರೆ (ಓದುವುದರಲ್ಲಿ ಹಿಂದುಳಿದ) ೧ರಿಂದ ೫೦ ಕಾರ್ಡುಗಳನ್ನು ಮತ್ತು (ಅಕ್ಷರಗಳು ಗುರುತಿಸಬಲ್ಲ ಆದರೆ ಸರಿಯಾಗಿ ಓದಲು ಬಾರದ) L ಮತ್ತು U ಹಂತದ

ಮಕ್ಕಳಿಗೆ ೧೧ ರಿಂದ ೬೦ರ ವರೆಗಿನ ಕಾರ್ಡುಗಳನ್ನು ನೀಡಬೇಕು.[೪] ಈ ಕಾರ್ಡುಗಳನ್ನು ವಾಪಸ್ಸು ಪಡೆಯಬಾರದು. ಹಾಗೂ ಇವುಗಳ ಸಂರಕ್ಷಣೆಗೆ ಒಂದು ಕೈಚೀಲವನ್ನು ನೀಡಲಾಗುತ್ತದೆ. ಈ ಪದಗಳ ಬಳಕೆಗೆ ಶಿಕ್ಷಕನು ಆಯ್ಕೆ ಮಾಡಿರುವ ಅವರಿಗೆ ತರಬೇತಿ ನೀಡಿ ಮಕ್ಕಳನ್ನು ಹೇಗೆ ಆಯ್ಕೆ ಮಾಡಿಕೊಳ್ಳಬೇಕು, ಯಾವ ಮಕ್ಕಳಿಗೆ ಯಾವ ಕಾರ್ಡುಗಳನ್ನು ಕೊಡಬೇಕು, ಹೇಗೆ ಓದಿಸಬೇಕು ಎಂಬುದರ ಬಗ್ಗೆ ಮಾಹಿತಿ ನೀಡಲಾಗುತ್ತದೆ. ಅಲ್ಲದೆ ಮಕ್ಕಳ ಆಯ್ಕೆಗೆ ವರ್ಷದ ಆರಂಭದಲ್ಲೇ ಆರಂಭಿಕ ಮೌಲ್ಯಮಾಪನ ಮಾಡಿ ಮಕ್ಕಳ ಸಾಧನೆ ತಿಳಿಯಲಾಗುತ್ತದೆ. ವರ್ಷದ ಕೊನೆಗೆ ಅಂತಿಮ ಮೌಲ್ಯಮಾಪನವನ್ನು ಮಾಡಿ ಮಕ್ಕಳ ಸಾಧನೆ ತಿಳಿಯಲಾಗುತ್ತದೆ. "ಮಕ್ಕಳ ಮೌಲ್ಯಮಾಪನ ಮಾಡಲು ಮಕ್ಕಳು ಅಕ್ಷರ ಹಂತದಲ್ಲಿದ್ದರೆ 'L' ಎಂದು, ಸಾಮಾನ್ಯ/ಕನಿಷ್ಠ ಹಂತದಲ್ಲಿದ್ದರೆ 'W' ಎಂದು, ವಾಕ್ಯದ ಹಂತದಲ್ಲಿದ್ದರೆ 'P' ಎಂದು ವಿಂಗಡಿಸಲಾಗಿದೆ."[೫]

ಈ ಕಾರ್ಯಕ್ರಮಕ್ಕಾಗಿ ಶಾಲೆಯಲ್ಲಿ ವೇಳಾಪಟ್ಟಿಯನ್ನು ನೀಡಲಾಗಿದ್ದು, ಪ್ರತಿ ದಿನ ೧ ರಿಂದ ೨ ಅವಧಿಗಳ ಕಾಲ ಕಾರ್ಯವನ್ನು ನಿರ್ವಹಿಸಲಾಗುತ್ತದೆ. ೨ ಶಾಲಾ ಅವಧಿಗಳ ಕೊನೆಗೆ ಸಾಫಲ್ಯ ಪರೀಕ್ಷೆ ಮಾಡಲಾಗುತ್ತದೆ. ಈ ಉತ್ತಮ ಕಾರ್ಯಕ್ರಮದ ಯಶಸ್ವಿಗೆ ಶಾಲಾ ಶಿಕ್ಷಕರು ಸಮುದಾಯದ ಶಿಕ್ಷಣ ಅಧಿಕಾರಿಗಳು ತಮ್ಮ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸುವುದು ಅತ್ಯಾವಶ್ಯಕವಾಗಿದೆ.

"ಓದುವೆ ನಾನು" ಕಾರ್ಯಕ್ರಮವು ಸರ್ಕಾರದ ಮಹತ್ವಪೂರ್ಣ ಯೋಜನೆಗಳಲ್ಲಿ ಒಂದಾಗಿದ್ದು ಇದರಲ್ಲಿ ಜಾರಿಗೆ ತಂದಿರುವ ಕಾರ್ಡುಗಳು ಆಯಾ ತರಗತಿಯ ಮಕ್ಕಳಿಗೆ ಅನುಗುಣವಾಗಿದ್ದರೂ ಈ ಕಾರ್ಡುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಇವು ಸ್ಥಳೀಯ ಪರಿಸರಕ್ಕೆ ಹೊಂದಿಕೊಳ್ಳದೆ ಇರುವುದನ್ನು ಕಾಣಬಹುದು. ಉದಾಹರಣೆಗೆ ಇಲ್ಲಿ ನೀಡಲಾಗಿರುವ ಪ್ರಾಣಿ, ಪಕ್ಷಿ, ಗಿಡಮರಗಳು ಹಾಗೂ ಕೆಲವು ಪದಗಳು ಸಾರ್ವತ್ರಿಕವಾಗಿವೆ.

ಈ ವಿಧಾನವು ಮಕ್ಕಳಿಗೆ ಉಪಯುಕ್ತವಾಗಿದ್ದರೂ ಸಹ ಶಿಕ್ಷಕರು ಈ ಜವಾಬ್ದಾರಿಯಿಂದ ನುಸುಳಿಕೊಳ್ಳುವಂತಾಗಿದೆ. ಏಕಕಾಲಕ್ಕೆ ಎಲ್ಲ ಕಾರ್ಡುಗಳನ್ನು ಕೊಡುವುದರಿಂದ ಎಲ್ಲಾ ಕಾರ್ಡುಗಳ ಕಲಿಕೆ ಸಮರ್ಪಕವಾಗಿಲ್ಲದಿರುವುದು. ಎಲ್ಲಾ ಪೋಷಕರು ಮಕ್ಕಳ ಕಲಿಕೆಗೆ ಪ್ರೋತ್ಸಾಹ ನೀಡದಿರುವುದು. ಇದರಿಂದ ಕಲಿಕೆಯಲ್ಲಿ ಹಿಂದುಳಿದ ಮಕ್ಕಳಿಗೆ ಶಿಕ್ಷಕರು ಜವಾಬ್ದಾರಿಯುತ ಬೋಧನೆ ಮಾಡದಿದ್ದರೆ ಈ ಕಾರ್ಡುಗಳು ಉಪಯೋಗವಾಗದು. ಸರ್ಕಾರವು ಈ ಕಾರ್ಡುಗಳನ್ನು ಜಾರಿಗೆ ತಂದಿರುವುದರಿಂದ ಅತ್ತ ಪಠ್ಯಪುಸ್ತಕದ ಕಲಿಕೆಯು ಇತ್ತ ಕಾರ್ಡುಗಳ ಕಲಿಕೆಯೂ ಯಶಸ್ವಿಯಾಗದೆ ಕಲಿಕೆಯು ಕುಂಠಿತವಾಗಿದೆ.

ಸರ್ಕಾರವು ಯಾವುದೇ ಯೋಜನೆಗಳನ್ನು ಜಾರಿಗೆ ತಂದರು ಸಹ ಅಧಿಕಾರಿಗಳ ಮಟ್ಟದಲ್ಲಿ ಯೋಚಿಸದೆ ಸದಾ ಮಕ್ಕಳ ಮನಸ್ಸನ್ನು ಅರಿತು ಅವರ ಜೊತೆಗಿರುವ ಶಿಕ್ಷಕರ ಸಲಹೆಯನ್ನು ಪಡೆದು ಸಮಸ್ಯೆಗಳಿಗೆ ಪರಿಹಾರ ಹುಡಿಕಿದರೆ ಯಾವುದೇ ಯೋಜನೆಗಳು ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ.

**ಪರಿಹಾರ ಬೋಧನೆ**

ಮಕ್ಕಳಲ್ಲಿ ಕಂಡುಬರುವ ಕಲಿಕಾ ತೊಂದರೆಗಳನ್ನು ಗುರುತಿಸಲು ಮತ್ತು ತೊಂದರೆಗಳನ್ನು ನಿವಾರಿಸಲು ಪ್ರಾಥಮಿಕ ಶಾಲೆಗಳಲ್ಲಿ ಜಾರಿಗೆ ತಂದಿರುವ ವಿಶೇಷವಾದ ಹಾಗೂ ಪರಿಣಾಮಕಾರಿ ವಿಧಾನಗಳಲ್ಲಿ ಪರಿಹಾರ ಬೋಧನೆ ಒಂದಾಗಿದೆ. ಇದನ್ನು ದೋಷ ಪರಿಶೋಧನ ಪರೀಕ್ಷೆ, ನ್ಯೂನತಾ ಪರೀಕ್ಷೆ ಹಾಗೂ ನೈಧಾನಿಕ ಪರೀಕ್ಷೆ ಎಂದು ಸಹ ಕರೆಯಲಾಗುತ್ತದೆ. ಕಲಿಕೆಯಲ್ಲಿ ವಿದ್ಯಾರ್ಥಿಗಳು ಏಕರೂಪದ ಸಾಧನೆಯನ್ನು ತೋರಲು ಸಾಧ್ಯವಿಲ್ಲ. ಇದಕ್ಕೆ ಕಾರಣ ವ್ಯಕ್ತಿ ಭಿನ್ನತೆ. ತಾವು ಕಲಿಯುವ ಹಲವಾರು ವಿಷಯಗಳಲ್ಲಿ ವಿದ್ಯಾರ್ಥಿಗಳು ಕೆಲವು ದೌರ್ಬಲ್ಯಗಳನ್ನು ಎದುರುಸುತ್ತಿರುತ್ತಾರೆ. ಈ ದೌರ್ಬಲ್ಯಗಳನ್ನು ಒಂದು ನಿರ್ದಿಷ್ಟ ವಿಷಯದಲ್ಲಿರಬಹುದು ಅಥವಾ ಎಲ್ಲಾ ವಿಷಯಗಳಲ್ಲಿರಬಹುದು. ಇಂತಹ ಹಿಂದುಳಿಕೆಯಲ್ಲಿ ವೈಯಕ್ತಿಕ ನ್ಯೂನತೆ, ಗುಂಪಿನ ನ್ಯೂನತೆ ಮತ್ತು ತರಗತಿಯ ನ್ಯೂನತೆಗಳು ಪ್ರಧಾನವಾಗಿರುತ್ತವೆ. ಇವು ಶಿಕ್ಷಕರ ಸಮಸ್ಯೆಯಾಗಿರುತ್ತದೆ. ಇವರು ತರಗತಿಯ ಇತರ ಮಕ್ಕಳ ಮಟ್ಟಕ್ಕೆ ಭಾರದಿದ್ದಾಗ ಶಿಕ್ಷಕ ತನ್ನ ಬೋಧನಾ ಕಾರ್ಯದಲ್ಲಿ ಮುಂದುವರೆಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಶಿಕ್ಷಕನು ನಿರಂತರವಾಗಿ ಈ ನ್ಯೂನತೆಯನ್ನು ಕಂಡುಕೊಳ್ಳುವುದು ಬೋಧನೆಯಷ್ಟೆ ಮುಖ್ಯವಾದ ವಿಷಯವಾಗಿದೆ.

ಸರಕಾರವು ಜಾರಿಗೆ ತಂದಿರುವ ಈ ಯೋಜನೆ ಉತ್ತಮವಾಗಿದ್ದರೂ ಯೋಜನೆಯು ಪರಿಹಾರವಾಗದ ಬೋಧನೆಯಾಗಿದೆ. ಇದು ಕೇವಲ ದಾಖಲೆಗಳಿಗೆ ಮಾತ್ರ ಸೀಮಿತವಾಗಿದೆಯೇ ವಿನಃ ಕಾರ್ಯರೂಪಕ್ಕೆ ಬರುತ್ತಿಲ್ಲ. ಹಿಂದುಳಿದ ವಿದ್ಯಾರ್ಥಿಗಳಿಗೆ ಹೆಚ್ಚು ಒತ್ತು ನೀಡಿದರೆ ಪ್ರತಿಭಾವಂತ ವಿದ್ಯಾರ್ಥಿಗಳ ಶೈಕ್ಷಣಿಕ ಗುಣಮಟ್ಟದಲ್ಲಿ ತೊಂದರೆಯಾಗುತ್ತದೆ. ಶಾಲಾ ಅವಧಿಯಲ್ಲಿ ಕಲಿಯದ ಮಕ್ಕಳು ಶಾಲಾ ಅವಧಿಯ ನಂತರ ಕಲಿಯುತ್ತಾರೆ ಎಂಬುದು ಸಮರ್ಪಕವಾಗಿ ಹೇಳಲಾಗದು. ಶಿಕ್ಷಕರು ಶಾಲಾ ಅವಧಿಗಿಂತ ಹೆಚ್ಚಿನ ಅವಧಿಯಲ್ಲಿ ಕಲಿಸಲು ನಿರಾಸಕ್ತಿ ತೋರುವುದು. ಈ ಯೋಜನೆಯು ಸಮರ್ಪಕವಾಗಿ ಕಾರ್ಯರೂಪಕ್ಕೆ ಬರಲು ಯಾವುದೇ ತರಬೇತಿಯನ್ನು ನೀಡದಿರುವುದು ಇದರ ವಿಫಲತೆಗೆ ಕಾರಣವಾಗಿದೆ.

ಬೋಧನೆಯ ಮಧ್ಯದಲ್ಲಿ ಮಕ್ಕಳನ್ನು ಪರೀಕ್ಷಿಸುತ್ತಾ ಅವರ ತೊಂದರೆಗಳನ್ನು ನಿವಾರಿಸಲು ಪರಿಹಾರ ಬೋಧನೆ ಉತ್ತಮ ವಿಧಾನವಾಗಿದೆ. ಇದರಿಂದ ವಿಷಯದ ಬಗ್ಗೆ ಆಸಕ್ತಿ, ಜ್ಞಾನ ಮತ್ತು ಮಕ್ಕಳಲ್ಲಿ ಆತ್ಮವಿಶ್ವಾಸ ಬೆಳೆಸಲು ಸಹಕಾರಿಯಾಗಿದೆ.

## ಭಾಷಾ ಬೋಧನೆ/ಕಲಿಕೆಯಲ್ಲಿ ಪರಿಹಾರ ಬೋಧನೆಯ ಮಹತ್ವ

ಪ್ರಾಥಮಿಕ ಶಾಲಾ ಮಕ್ಕಳಿಗೆ ಭಾಷೆಯನ್ನು ಬೋಧಿಸುವಾಗ, ಕಲಿಸುವಾಗ ಭಾಷಾ ಶಿಕ್ಷಕನು ಈ ನೈದಾನಿಕ ಪರೀಕ್ಷೆಯನ್ನು ನಡೆಸಬೇಕಾಗುತ್ತದೆ. ಏಕೆಂದರೆ ಮಕ್ಕಳ ಭಾಷಾ ಸಾಮರ್ಥ್ಯ ಹಾಗೂ ಭಾಷಾ ಕೌಶಲಗಳಲ್ಲಿನ ನ್ಯೂನತೆಯನ್ನು ಕಂಡುಹಿಡಿದು ಪರಿಹಾರ ಬೋಧನೆಯನ್ನು ಮಾಡಿ ಮಕ್ಕಳಲ್ಲಿನ ತಪ್ಪುಗಳನ್ನು ನಿವಾರಿಸಲು ಸಹಾಯಕವಾಗಿದೆ. ಮಗು ಧ್ವನಿ, ಪದ, ವಾಕ್ಯಗಳನ್ನು ಓದುವಾಗ ಮಾಡುವ ದೋಷಗಳನ್ನು ಶಿಕ್ಷಕ ಗುರುತಿಸಿ ಕ್ಷಣದಲ್ಲಿಯೇ ಅವುಗಳನ್ನು ತಿದ್ದಿಕೊಳ್ಳುವಂತೆ ಪರಿಹಾರ ಬೋಧನೆಯನ್ನು ಪ್ರಾಥಮಿಕ ಶಾಲಾ ಹಂತದಲ್ಲಿ ಹಮ್ಮಿಕೊಳ್ಳಲಾಗುತ್ತದೆ. ಪ್ರಾಥಮಿಕ ಶಾಲೆಯಲ್ಲಿ, ಪ್ರೌಢಶಾಲೆಯಲ್ಲಿ ಕಲಿಕೆಯ ದೋಷಗಳನ್ನು ಗುರುತಿಸಿ ಪರಿಹಾರ ಬೋಧನೆ ನೀಡಿದಾಗ ಎಲ್ಲಾ ಮಕ್ಕಳಲ್ಲಿ ಕಲಿಕೆ ಕನಿಷ್ಠ ಹಂತಗಳನ್ನು ಮುಟ್ಟಬಹುದಾಗಿದೆ.

## ನೈಧಾನಿಕತೆಯ ಅರ್ಥ

ಯಾವುದೇ ಒಂದು ನಿರ್ದಿಷ್ಟ ಕ್ಷೇತ್ರದಲ್ಲಿ ವಿದ್ಯಾರ್ಥಿಯ ಕಲಿಕೆಯ ದೌರ್ಬಲ್ಯಗಳನ್ನು ನಿರ್ದಿಷ್ಟವಾಗಿ, ನಿಖರವಾಗಿ ಮತ್ತು ವೈಜ್ಞಾನಿಕವಾಗಿ ಪತ್ತೆ ಹಚ್ಚುವುದರ ಮೂಲಕ ಅವರ ಲೋಪದೋಷಗಳನ್ನು ಕಂಡು ಹಿಡಿಯಲು ನಡೆಸುವ ಪರೀಕ್ಷೆಗಳೆ ನೈಧಾನಿಕ ಪರೀಕ್ಷೆಗಳು ಅಥವಾ ಲೋಪದೋಷ ನಿರ್ಣಾಯಕ ಪರೀಕ್ಷೆಗಳು. ಹೆನ್ರಿ ಮನ್‌ರವರ ಪ್ರಕಾರ "ಮಕ್ಕಳ ಕಲಿಕೆಯ ವಿಶೇಷ ದೌರ್ಬಲ್ಯಗಳನ್ನು ಅಥವಾ ತಪ್ಪುಗಳು ವೈಜ್ಞಾನಿಕವಾಗಿ ಗುರ್ತಿಸಲು ನೆರವಾಗುವ ಪರೀಕ್ಷಗಳೇ ನೈಧಾನಿಕ ಪರೀಕ್ಷೆಗಳು."[೬]

ಒಟ್ಟಿನಲ್ಲಿ ಕಲಿಕೆಯಲ್ಲಿ ವಿದ್ಯಾರ್ಥಿಗಳ ನಿರ್ದಿಷ್ಟ ನ್ಯೂನತೆಗಳನ್ನು ಕಂಡುಹಿಡಿಯುವುದು ಈ ಪರೀಕ್ಷೆಗಳ ಉದ್ದೇಶವಾಗಿದೆ. ವಿದ್ಯಾರ್ಥಿ ಯಾವ ಪರೀಕ್ಷೆಯಲ್ಲಿ, ಯಾವ ಘಟಕದಲ್ಲಿ ಎಷ್ಟರ ಮಟ್ಟಿಗೆ ತಿಳಿದಿದ್ದಾನೆ ಎಂಬುದು ಈ ಪರೀಕ್ಷೆಗಳು ತಿಳಿಸುತ್ತವೆ. ರೂಪಣಾ ಅವಧಿಯ ಮೌಲ್ಯಮಾನವು, ನೈಧಾನಿಕ ಪರೀಕ್ಷೆಗಳು ಪ್ರಮುಖ ಪಾತ್ರವಹಿಸುತ್ತವೆ. ಏನನ್ನು ಏಕೆ ಸಾಧಿಸಲಿಲ್ಲ ಎಂಬುದನ್ನು ನಿಖರವಾಗಿ ತಿಳಿಸುತ್ತವೆ.

## ನೈಧಾನಿಕತೆಯನ್ನು ಗುರುತಿಸುವ ವಿಧಾನ

ನೈಧಾನಿಕ ಪರೀಕ್ಷೆಗಳು ಕೇವಲ ಬೋಧಿಸಿದ ಪಾಠಕ್ಕೆ ಮಾತ್ರ ಸಂಬಂಧಿಸಿರುತ್ತದೆ. ಶಿಕ್ಷಕನು ಒಂದು ಪಾಠವನ್ನು ಪೂರ್ಣವಾಗಿ ಬೋಧಿಸಿದ ನಂತರ ಈ ಪರೀಕ್ಷೆಯನ್ನು ನಡೆಸಬೇಕು. ಆ ಪಾಠದ ಬೋಧನಾಂಶಗಳ ಆಧಾರದ ಮೇಲೆ ವಸ್ತುನಿಷ್ಠ ಪ್ರಶ್ನೆಗಳನ್ನೊಳಗೊಂಡ ಸಾಧನಾ ಪರೀಕ್ಷೆಗಳನ್ನು ನಡೆಸಿ, ವಿದ್ಯಾರ್ಥಿಗಳ ಲೋಪಕ್ಕೆ ದೋಷಗಳನ್ನು ಕಂಡುಹಿಡಿಯಬೇಕು. ಇದಕ್ಕಾಗಿ

ತಪ್ಪು ವಿಶ್ಲೇಷಣೆ ಪಟ್ಟಿಯನ್ನು ಉಪಯೋಗಿಸಬೇಕು. ಇಂತಹ ಒಂದು ದುರ್ಬಲ ಕ್ಷೇತ್ರವನ್ನಧಾರಿಸಿ ಪರಿಹಾರ ಬೋಧನೆ ಕೈಗೊಳ್ಳಬೇಕು. ಮಕ್ಕಳಿಗೆ ಸಾಕಷ್ಟು ಗದ್ಯಪಾಠವನ್ನು ಕೊಟ್ಟು ಅಭ್ಯಾಸ ಮಾಡಿಸುವದರಿಂದ ದೋಷಗಳನ್ನು ನಿವಾರಿಸಬಹುದು.

**ವಿದ್ಯಾರ್ಥಿಗಳ ನ್ಯೂನತೆಯನ್ನು ಗಮನಿಸಲು ಶಿಕ್ಷಕನು ಕೆಳಕಂಡ ಕ್ರಮಗಳನ್ನು ಅನುಸರಿಸಬೇಕು**

೧. ತರಗತಿಯಲ್ಲಿ ಮೊದಲು ಇರುವ ಮಕ್ಕಳಿಗೆ ಸಾರ್ವತ್ರಿಕವಾಗಿ ಪರೀಕ್ಷೆಗಳನ್ನು ಕೈಗೊಳ್ಳಬೇಕು.

೨. ಕಲಿಕೆಯ ತೊಂದರೆ ಇರುವ ವಿದ್ಯಾರ್ಥಿಗಳು ಯಾರು ಎಂಬುದನ್ನು ಗುರುತಿಸಬೇಕು.

೩. ಭಾಷೆ, ಗಣಿತ, ವಿಜ್ಞಾನ, ಓದು, ಬರಹ, ವ್ಯಾಕರಣ, ಲೆಕ್ಕ ಮುಂತಾದ ಯಾವ ನಿರ್ದಿಷ್ಟ ಕ್ಷೇತ್ರದಲ್ಲಿ ಯಾವ ದೌರ್ಬಲ್ಯವಿದೆ ಎಂಬುದನ್ನು ಖಚಿತ ಪಡಿಸಿಕೊಳ್ಳಬೇಕು.

೪. ತೊಂದರೆಗೆ ಸೂಕ್ತ ಕಾರಣಗಳನ್ನು ವೈಜ್ಞಾನಿಕವಾಗಿ ಹುಡುಕಬೇಕು.

೫. ತಿದ್ದಿದ ತಪ್ಪುಗಳು ಪದೇ ಪದೇ ಸಂಭವಿಸಿದಂತೆ ಎಚ್ಚರ ವಹಿಸಿ ನಿರ್ದಿಷ್ಟ ಚಟುವಟಿಕೆಗಳನ್ನು ಹಾಕಿಕೊಳ್ಳಬೇಕು.

೬. ವಿದ್ಯಾರ್ಥಿ ದೋಷ ಸರಿಪಡಿಸುವಲ್ಲಿ ಸೂಕ್ತ ಸುಧಾರಣ ಕ್ರಮಗಳನ್ನು ಕೈಗೊಳ್ಳಬೇಕು.

೭. ಅಗತ್ಯವಿದ್ದಲ್ಲಿ ಶಿಕ್ಷಣ ತಜ್ಞರ, ವೈದ್ಯರ, ಪೋಷಕರ ಸಲಹೆ ಮತ್ತು ಮಾರ್ಗದರ್ಶನ ಪಡೆಯಬೇಕು".[೭]

ವಿಶೇಷವಾಗಿ ಪ್ರಾಥಮಿಕ ಶಾಲಾ ಹಂತದಲ್ಲಿ ಓದು, ಬರಹ, ಕಾಗುಣಿತ, ಮಗ್ಗಿ, ಲೆಕ್ಕ, ಉಚ್ಚಾರಣೆ ದೋಷ, ಪದ ಪ್ರಯೋಗ, ವಾಕ್ಯಪ್ರಯೋಗ, ಶಬ್ದಗಳ ಜೋಡಣೆ, ಅಲ್ಪಪ್ರಾಣ ಮಹಾಪ್ರಾಣ, ವ್ಯಾಕರಣ ದೋಷಗಳು ಮುಂತಾಗಿ ಹಲವಾರು ನ್ಯೂನತೆಗಳು ಸಂಭವಿಸುತ್ತವೆ. ಆದ್ದರಿಂದ ಕಲಿಕೆಯನ್ನು ಪರಿಣಾಮಕಾರಿಯಾಗಿ ಕಲಿಸಬೇಕಾದರೆ ನಿಯಮಿತವಾಗಿ ಪರೀಕ್ಷೆ ನಡೆಸಬೇಕು.

**ನೈಧಾನಿಕ ಪರೀಕ್ಷೆಯ ಹಂತಗಳು**

ಶಿಕ್ಷಣ ಪ್ರಕ್ರಿಯೆಯಲ್ಲಿ ನೈಧಾನಿಕ ಪರೀಕ್ಷೆ ಹಾಗೂ ಪರಿಹಾರ ಬೋಧನೆಗಳು ಸಮಗ್ರವಾದ ಕಾರ್ಯಗಳಾಗಿವೆ. ಈ ಕಾರ್ಯವು ಐದು ಹಂತಗಳಲ್ಲಿ ನೆರವೇರುತ್ತದೆ.

೧. ತಪ್ಪುಗಳನ್ನು ಮಾಡಿರುವವರನ್ನು ಗುರುತಿಸುವುದು.

೨. ತಪ್ಪುಗಳು ಎಲ್ಲಿ ನಡೆದಿವೆ ಎಂದು ಗುರುತಿಸುವುದು.

೩. ತುಪ್ಪುಗಳಿಗೆ ಕಾರಣಗಳನ್ನು ಕಂಡುಹಿಡಿಯುವುದು.

೪. ಪರಿಹಾರ ಕ್ರಮಗಳನ್ನು ಕೈಗೊಳ್ಳುವುದು.

೫. ತಡೆಗಟ್ಟುವ ವಿಧಾನ

ಇದನ್ನು ಚಿಕಿತ್ಸಾ ಬೋಧನೆಯಂದು ಕರೆಯುತ್ತಾರೆ. ನೈಧಾನಿಕ ಪರೀಕ್ಷೆಗಾಗಿ ಬೋಧಿಸಿದ ವಿಷಯವನ್ನು ಶಿಕ್ಷಕ ಮತ್ತೊಮ್ಮೆ ವಿಶಾಲ ತಳಹದಿಯ ಮೇಲೆ ಬೋಧಿಸಲಾಗುವುದು. ಈ ನಿಟ್ಟಿನಲ್ಲಿ ಪಾಠವನ್ನು ಓದಿಸಬಹುದು ಬರೆಸಬಹುದು. ಲೋಪದೋಷ ನಿವಾರಣೆಗಾಗಿ ಪರಿಹಾರ ಬೋಧನೆಯನ್ನು ಕೈಗೊಂಡ ನಂತರ ನೈಧಾನಿಕ ವಿಷಯ ಪ್ರಶ್ನೆಗಳನ್ನು ಹೊಂದಿರುವ ಮತ್ತೊಂದು ಪರೀಕ್ಷೆಯನ್ನು ರಚಿಸಿ ಹಿಂದುಳಿದ ವಿದ್ಯಾರ್ಥಿಗಳಿಗೆ ನೀಡಲಾಗುವುದು. ಈ ಪರೀಕ್ಷೆಯನ್ನು ಪರಿಹಾರಾತ್ಮಕ ಪರೀಕ್ಷೆ ಎನ್ನುವರು.

### ಚೈತನ್ಯ

ಶಿಕ್ಷಣದ ಗುಣಮಟ್ಟ ಹೆಚ್ಚಿಸುವಲ್ಲಿ ಚೈತನ್ಯ ಬೋಧನಾ ಪದ್ಧತಿಯನ್ನು ಸರ್ಕಾರ ಜಾರಿಗೆ ತಂದಿದೆ. ಚೈತನ್ಯದ ಚಳುವಳಿ ಯಶ್‌ಪಾಲ್ ಶರ್ಮಾರವರ "ಹೊರರಹಿತ ಕಲಿಕೆಯ"[೮] ಮುಂದೆ ಸಾಗಿದ ಭಾಗ. ಚೈತನ್ಯ ಭಾವನಾತ್ಮಕ ಇರುವಿಕೆಯನ್ನು ಅಳವಡಿಸಿ ಚಟುವಟಿಕೆಗಳ ಮುಖಾಂತರ ಕಲಿಕೆಯನ್ನು ಸ್ಥಿರಗೊಳಿಸುತ್ತದೆ. ಚೈತನ್ಯ ಎಂದರೆ ಕೇವಲ ಹಾಡು, ಕುಣಿತಕ್ಕೆ ಸೀಮಿತವಾಗಿರದ ಕಾರ್ಯಕ್ರಮವಾಗಿದೆ. ಮಗುವಿನ ವ್ಯಕ್ತಿತ್ವ ರೂಪುಗೊಳ್ಳುವ ಕ್ರಿಯೆಯಾಗಿದೆ. ಮಗುವಿನಿಂದ ತಯಾರಾಗುವ ಕ್ರಿಯೆಯಾಗಿದೆ. ಶೈಕ್ಷಣಿಕ ಸಿದ್ಧಾಂತಗಳಿಗೆ ಅಂಟಿಕೊಳ್ಳದೆ ನಮ್ಮ ಸಮಸ್ಯೆಗೆ ನಮ್ಮದೇ ಅನುಭವಗಳಿಂದ ಪರಿಹಾರ ನೀಡುವ ಕ್ರಿಯೆಯಾಗಿದೆ. ವೈಜ್ಞಾನಿಕ ರೂಢಿಗಳನ್ನು ಬಳಸಿ ಕಂಡು ಹಿಡಿಯುವುದು ಇದರ ಆಶಯ. ಮಗುವಿಗೆ ಕಲಿಕೆಯ ಸನ್ನಿವೇಶದ ವಾಹಿನಿಯನ್ನಾಗಿಸುವುದೇ ಇದರ ಸದಾಶಯ. ಸಾಂಪ್ರದಾಯಿಕ ಪದ್ಧತಿಗಳು "ಸ್ಮರಣೆ" ವಲಯಕ್ಕೆ ಸೀಮಿತಗೊಳಿಸಲ್ಪಟ್ಟರೆ ಚೈತನ್ಯ ವಿಧಾನವು ಅರ್ಥೈಸುವಿಕೆ ಕೌಶಲ್ಯ ಹಾಗೂ ಮೌಲ್ಯಗಳ ತಯಾರಿಕೆಗೆ ಹೆಚ್ಚಿನ ಕಾಳಜಿ ವಹಿಸುತ್ತದೆ. ಇಲ್ಲಿ ಪ್ರತಿಯೊಬ್ಬರೂ ಪಾಲ್ಗೊಳ್ಳಬೇಕಾಗಿದೆ ಹಾಗೂ ಕಲಿಯಬೇಕು. "ಚೈತನ್ಯ" ಚಟುವಟಿಕೆಗಳನ್ನು ಸಂತಸದಿಂದ ಸಾಗಿಸುತ್ತದೆ. ಕಲಿಕೆಯನ್ನು ಭಾವನಾತ್ಮಕ ವಿಕಾಸಕ್ಕೆ ಹೊಂದಿಸುವುದು. ಸಾಮಾಜಿಕ ಕೌಶಲಗಳ ಕಲಿಕೆಗೆ ಹೆಚ್ಚಿನ ಮಹತ್ವ ಕೊಡುತ್ತದೆ. ಅಂತಿಮವಾಗಿ ಲವಲವಿಕೆಯಿಂದ ಹಾಗೂ ಜೀವನೋತ್ಸಾಹಗಳನ್ನು ಈ ಕಲಿಕೆ ನೀಡುತ್ತದೆ. "ಚೈತನ್ಯ" ಸಾಮಾನ್ಯ ಪರೀಕ್ಷೆಗೆ ಅಸಾಮಾನ್ಯ ಅಭಿಪ್ರಾಯ ಬಲ್ಲ ದೈತ್ಯ ಮಗುವಿನ ಸ್ವಾಭಾವಿಕ ಲಕ್ಷಣಗಳಾದ ಕುತೂಹಲ, ರಚನೆ, ಸಾಂಘಿಕತೆ ಮುಖಾಂತರ ಕಲಿಕೆಯನ್ನು ಹೊರಹಾಕುವುದರ ಮುಖಾಂತರ ಆಸಕ್ತಿಯನ್ನು ಪ್ರಬಲವಾಗಿ ಉಂಟು ಮಾಡುವಿಕೆ ಮತ್ತು ಬಳಸುವಿಕೆ. ತನ್ಮೂಲಕ ಗರಿಷ್ಠ ಕಲಿಕೆಯನ್ನು ಖಚಿತ ಪಡಿಸುವಿಕೆ ಇದರ ಸವಾಲುಗಳು.[೯]



"ಚೈತನ್ಯ" ಈಗಾಗಲೇ ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತದಲ್ಲಿ ಪ್ರಬಲ ಸಾಧನವಾಗಿ ತಯಾರಿಕೊಂಡು ನವ ವಾತಾವರಣವನ್ನು ತರಗತಿಯ ಕೋಣೆಯಲ್ಲಿ ಗೊತ್ತುಪಡಿಸಿಕೊಂಡಿರುವುದು

ಅನುಭವವೇದ್ಯ. ಅಂತೆಯೇ "ಚೈತನ್ಯ" ತಾರಣಿ ಬೋಧನೋಪಕರಣಗಳ ತಯಾರಿಕೆಗೆ ಇರುವ ಯೋಜನೆಯಾಗಿದೆ. "ಚೈತನ್ಯ ಚಿಗುರು" ಎಂಬ ಹೆಸರಿನಿಂದ ಪ್ರೌಢಶಾಲಾ ವಿಭಾಗಕ್ಕೆ ಅಂಬೆಗಾಲಿಡಲೂ ಪ್ರಾರಂಭಿಸಿದೆ. ಪ್ರಾಥಮಿಕ ಶಾಲಾ ಶಿಕ್ಷಕರಿಂದ "ಸೈ" ಎನಿಸಿಕೊಂಡ ಈ ವಿಧಾನ ಸಹಕಾರಿ ಕಲಿಕೆ, ಅನ್ವೇಷಣೆ ಕಲಿಕೆ, ಆಟದ ಮುಖಾಂತರ ಪಾಠದ ಸಿದ್ಧಾಂತ, ಯೋಜನಾ ಪದ್ಧತಿಯ ಅಳವಡಿಕೆ, ಕ್ಷೇತ್ರ ಪರ್ಯಟನೆ, ವಸ್ತು ಪ್ರದರ್ಶನ ಏರ್ಪಡಿಸುವಿಕೆ ಚೈತನ್ಯದ ಜೀವಾಳ. ಅಲ್ಲದೆ ಮೌಲ್ಯ ಶಿಕ್ಷಣ ಲಿಂಗ ಸಮಾನತೆ ಮತ್ತು ಸಮನ್ವಯ ಶಿಕ್ಷಣವನ್ನು ಹೀಗೆ ಬೋಧನೆಯ ಹಲವು ಮೆಟ್ಟಿಲುಗಳ ವಿಕಾಸಕ್ಕೆ ಒತ್ತು ನೀಡುತ್ತದೆ.

**ಚೈತನ್ಯ ತರಬೇತಿಯ ಉದ್ದೇಶಗಳು**

೧. ಚೈತನ್ಯಾಧಾರಿತ ಶಿಕ್ಷಕರ ಕೈಪಿಡಿಯು ಬಳಸುವಿಕೆಯ ಆಯಾಮಗಳನ್ನು ಗುರುತಿಸುವುದು ಹಾಗೂ ತನ್ನದಾಗಿಸಿಕೊಳ್ಳುವುದು.

೨. ಚೈತನ್ಯದ ಕಲಿಕಾ ಹಂತಗಳ ಮುಖಾಂತರ ಒಳ್ಳೆಯ ಹಾಗೂ ಪ್ರಭಾವಕಾರಿ ಸಂವಹನ ತಂತ್ರಗಳನ್ನು ಬೆಳಸಿಕೊಳ್ಳುವುದು.

೩. ಪರಿಣಾಮಕಾರಿಯಾದ ಸಂವಹನ ಕಾಪಾಡಿಕೊಳ್ಳಲು ಅಗತ್ಯ T.L.M.ಗಳನ್ನು ಗುರುತಿಸುವುದು.

೪. ವೈಜ್ಞಾನಿಕ ಮನೋಭಾವ, ಚಲನಶೀಲತೆ, ಕುತೂಹಲ, ಗಮನಿಸುವಿಕೆ ಅನೇಕ ಅವಶ್ಯಕ ರಂಗಕ್ಕೆ ಕಾಳಜಿವಹಿಸಲು ವಿಶೇಷ ಕಾರ್ಯಕ್ರಮಗಳನ್ನು ತಯಾರಿಸಿ ಬಳಸುವುದು.

೫. Gitereim Reference Test ಗೆ ಅನುಗುಣವಾಗಿ ಕೆಂಪು ಪಾಠಗಳ ಭಾಗಗಳಂತೆ ಶೋತ್ರಿಸುವಿಕೆ. ಕೌಶಲ ಅನ್ವಯ ಕ್ಷೇತ್ರಗಳಲ್ಲಿ Battery of Test ಗಳನ್ನು ಸಿದ್ಧಪಡಿಸಲು ಯತ್ನಿಸುವುದು.

೬. ಶಿಕ್ಷಕರು ತಮ್ಮ ವೈಯಕ್ತಿಕ ಭಾಷೆ, ಭಾವನೆ ಹಾಗೂ ಶಾಲಾ ಪರಿಸರಕ್ಕೆ ಹೊಂದಿಕೊಳ್ಳಲು, ಆಂತರಿಕ ಆಸೆಗೆ ಪೂರಕವಾಗಿ ಮನೋಭಾವದಲ್ಲಿನ ಪರಿವರ್ತನೆಗಳನ್ನು ವಸ್ತುನಿಷ್ಠವಾಗಿ ಕಾಪಾಡುವುದು.

೭. ಈ ತರಬೇತಿಯು ವಿರುದ್ಧ ಬಾಹ್ಯ ಪ್ರಭಾವಿ ಹೊಣೆಗಳನ್ನು ಹೇಗೆ ಜಯಿಸಬೇಕೆಂಬ ಕ್ರಮಗಳ ಬಗ್ಗೆ ತಿಳಿಸುತ್ತದೆ.[೧೦]

ಹೀಗೆ ಚೈತನ್ಯ – ೧ ರ ಉದ್ದೇಶವನ್ನು ಆಧಾರವಾಗಿಟ್ಟುಕೊಂಡು ಹಿರಿಯ ಪ್ರಾಥಮಿಕ ತರಗತಿಗಳಲ್ಲಿನ ಕಲಿಕೆಯಲ್ಲಿ ಗುಣಮಟ್ಟವನ್ನು ಸುಧಾರಿಸಲು ಮತ್ತು ಶಿಕ್ಷಕರ ಬೋಧನೆ ಸುಧಾರಿಸಲು, ಬೋಧನೆಯ ವಿಧಾನಗಳನ್ನು ಗುರುತಿಸಲು ಚೈತನ್ಯ – ೨ ರೂಪಿಸಲಾಗಿದೆ.

## ನಲಿ–ಕಲಿ

ಪುಸ್ತಕ ರಹಿತ ಬೋಧನೆಯು ಶಿಕ್ಷಣ ರಂಗದಲ್ಲಿ ವಿನೂತನ ಕಾರ್ಯಕ್ರಮ. ಈ ಕಾರ್ಯಕ್ರಮ ಪ್ರಪ್ರಥಮವಾಗಿ ಆಂಧ್ರಪ್ರದೇಶದ ಮದನಪಲ್ಲಿಯ "ಋಷಿವ್ಯಾಲಿ"ಯಲ್ಲಿ[೧೧] ಗ್ರಾಮದಲ್ಲಿ ಜನ್ಮ ಪಡೆಯಿತು. ಖಾಸಗಿ ಶಿಕ್ಷಣ ಸಂಸ್ಥೆಯೊಂದು ತನ್ನ ಶಾಲೆಗಳಲ್ಲಿ ಕಲಿಕೆ ಬಿಗಿಗೊಳಿಸುವಲ್ಲಿ ಯಶಸ್ವಿಯಾಯಿತು. ಈ ಯೋಜನೆ ಬೋಧನೆ ಪರಿಣಾಮಕಾರಿಯಾಗುವಲ್ಲಿ ಮತ್ತು ಕಲಿಕೆ ಬಿಗಿಗೊಳಿಸುವಲ್ಲಿ ಯಶಸ್ವಿಯಾಯಿತು. ಈ ವಿಷಯ ಅರಿತ ಕರ್ನಾಟಕದ ಡಿ.ಎಸ್.ಇ.ಆರ್.ಟಿ.ಯು ಶಿಕ್ಷಣತಜ್ಞರು ಮೈಸೂರಿನ ಡಯಟ್ ಉಪನ್ಯಾಸಕರೊಂದಿಗೆ ಮತ್ತು ಅಲ್ಲಿಯ ಡಿ.ಪಿ.ಇ.ಪಿ. ಶಿಕ್ಷಣಾಧಿಕಾರಿಗಳೊಂದಿಗೆ ಆಂಧ್ರಪ್ರದೇಶದ ಋಷಿವ್ಯಾಲಿಗೆ ಸಂದರ್ಶನ ನೀಡಿ ತಂಡವು ಪುಸ್ತಕ ರಹಿತ ಬೋಧನೆಯ ಕುರಿತು ಆಳವಾದ ಅಧ್ಯಯನ ನಡೆಸಿತು.

೧೯೯೫ರಲ್ಲಿ ಪುಸ್ತಕ ರಹಿತ ಬೋಧನೆ ಕುರಿತು ರೂಪುರೇಷೆಗಳನ್ನು ಸಿದ್ಧಗೊಳಿಸಿತು. ಈ ರೂಪುರೇಷೆಗಳನ್ನು ಮೈಸೂರು ಜಿಲ್ಲೆಯ ಅತ್ಯಂತ ಹಿಂದುಳಿದ ತಾಲೂಕಾದ ಹೆಗ್ಗಡದೇವನಕೋಟೆಯಲ್ಲಿ ಜಾರಿಗೆ ತರಲು ನಿರ್ಧರಿಸಿತು. ಈ ಯೋಜನೆ ಕಾರ್ಯರೂಪಕ್ಕೆ ತರುವ ಮೊದಲು ಅನುಭವಿ ಮತ್ತು ಆಸಕ್ತಿಯಿಂದ ಕೂಡಿದ ಶಿಕ್ಷಕರ ತಂಡದಲ್ಲಿ ಪರಿಷ್ಕರಣೆಗೆ ಒಳಗಾಯಿತು. ಅಲ್ಲಿ ಈ ಯೋಜನೆ ಶಿಕ್ಷಕರ ಕೈಯಲ್ಲಿ ವೈಜ್ಞಾನಿಕ ಮತ್ತು ಮಾನಸಿಕ ತಳಹದಿಯ ಮೇಲೆ ನಿರ್ದಿಷ್ಟ ರೂಪ ಹೊಂದಿತು.

ಈ ಮೇಲಿನ ಪದ್ಧತಿಯಲ್ಲಿ ಶಿಕ್ಷಕರಿಗೆ ಬೋಧಿಸಲು ಮಕ್ಕಳಿಗೆ ಕಲಿಯಲು ಪುಸ್ತಕ ಇರದಿದ್ದರೂ ಪಠ್ಯಕ್ರಮ ಹೊಂದಿರುತ್ತದೆ. ಈ ಪಠ್ಯಕ್ರಮವನ್ನು ತರಗತಿಯ ಕೋಣೆಯಲ್ಲಿ ಹಲವಾರು ತಂತ್ರಗಳನ್ನು ಬಳಸಿ ಬಳಕೆಯಲ್ಲಿ ಅಭಿನಯ ಸಂಭಾಷಣೆ ಇತ್ಯಾದಿಗಳು ಮಹತ್ವದ ಪಾತ್ರ ವಹಿಸುತ್ತವೆ. ಈ ಪಠ್ಯಪುಸ್ತಕ ರಹಿತ ಬೋಧನೆಯು ನಲಿ–ಕಲಿ ಎಂಬ ಹೆಸರಿನಡಿಯಲ್ಲಿ ರೂಪಿತವಾಗಿದ್ದರೂ. ಈ ಹಿಂದೆ ಜಾರಿಯಲ್ಲಿದ್ದರು. ಕಲಿ–ನಲಿ ಯೋಜನೆಗೆ ಹತ್ತಿರವಾದ ಸಂಬಂಧಹೊಂದಿದೆ. ಈ ನಲಿ–ಕಲಿ ಯೋಜನೆಯ ಮುಖ್ಯ ಉದ್ದೇಶಗಳು ಶಿಶು ಕೇಂದ್ರಿತ ಬೋಧನೆ / ಸ್ವಕಲಿಕಾ ಸಂತಸದ ಕಲಿಕೆ ಪಠ್ಯಪುಸ್ತಕ ರಹಿತ ಬೋಧನೆಯಾಗಿದೆ. ಇವು ಮಕ್ಕಳ ದಾಖಲಾತಿ ಮತ್ತು ಹಾಜರಾತಿ ಉತ್ತಮ ಪಡಿಸುವ ನಿಟ್ಟಿನಲ್ಲಿ ಸಹಾಯಕಾರಿಯಾಗಿದೆ. ಅಲ್ಲದೆ ಮಕ್ಕಳ ಕಲಿಕೆ ಚಟುವಟಿಕೆಯ ಮೂಲಕ ನಡೆಯುವುದರಿಂದಲೆ ಮಗುವಿನ ಕಲಿಕೆ ಬಲಗೊಳ್ಳುತ್ತಾ ಸಾಗುತ್ತದೆ. ಈ ಹೊಸ ಪದ್ಧತಿಯ ಬೋಧನೆಯಲ್ಲಿ ಭಾಷೆ, ಗಣಿತ ಮತ್ತು ಪರಿಸರ ಅಧ್ಯಯನ ವಿಷಯಗಳು ಮಾತ್ರ ಬೋಧಿಸಲ್ಪಡುವವು. ಶಾಲಾ ಸಮಯದ ಮಧ್ಯಾಹ್ನದ ಅವಧಿಯಲ್ಲಿ ಪರಿಸರ ಅಧ್ಯಯನ ಮಾತ್ರ ಬೋಧಿಸಲ್ಪಡುವುದು.

ಇಲ್ಲಿ ಪ್ರತಿಯೊಂದು ಅವಧಿಯ ವಿಷಯ ಪ್ರತಿ ಹಂತಗಳನ್ನು ಸಾಮರ್ಥ್ಯ ರೂಪದಲ್ಲಿರುವ ಹಲವು ನಿರ್ದಿಷ್ಟ ಮೆಟ್ಟಿಲುಗಳನ್ನು ಹೊಂದಿದೆ. ಅವುಗಳನ್ನು ಕಲಿಯಬೇಕಾಗುತ್ತದೆ. ಇದರಂತೆ ಗಣಿತದಲ್ಲಿ ೬ ಹಂತಗಳ ೧೦೦ ಮೆಟ್ಟಿಲುಗಳಾಗಿ ಇದೆ. ಪರಿಸರ ಅಧ್ಯಯನದಲ್ಲಿ ೧೫ ಹಂತಗಳಿದ್ದು, ೯೯ ಮೆಟ್ಟಿಲುಗಳಿವೆ.

"ಪ್ರತಿಯೊಂದು ವಿಷಯಕ್ಕೆ ತರಗತಿಗೆ ಒಂದು ಏಣಿ ಇರುತ್ತದೆ. ಈ ಏಣಿಯನ್ನು ಹತ್ತಲು ಮಗುವು ನಿರ್ದಿಷ್ಟವಾದ ಮೆಟ್ಟಿಲುಗಳನ್ನು ಹತ್ತುತ್ತಾ ಒಂದೊಂದು ಹಂತವನ್ನು ಪೂರೈಸುತ್ತದೆ. ಒಂದು ಶೈಕ್ಷಣಿಕ ವರ್ಷ ಬೇಕಾಗುವುದು ಒಂದು ಶೈಕ್ಷಣಿಕ ವರ್ಷ ಮುಗಿಯುವವರೆಗೂ ಪ್ರತಿಭಾವಂತ ಮಗು ಒಂದು ಏಣಿಯನ್ನು ಪೂರ್ಣಗೊಳಿಸಿದರೆ ೨ನೇ ತರಗತಿಯ ಸಾಮರ್ಥ್ಯಗಳನ್ನು ಹೊಂದಿದ ೨ನೇ ಏಣಿಯನ್ನು ಮಗುವಿಗೆ ನೀಡಲಾಗುತ್ತದೆ. ಭಾಷೆಯ ಪ್ರತಿ ಹಂತದಲ್ಲಿ ಈ ವಿನೂತನ ಪದ್ಧತಿಯಲ್ಲಿ ಕನ್ನಡ ವರ್ಣಮಾಲೆ, ಅರ್ಥಪೂರ್ಣವಾದ ೧೦ ಹಂತಗಳಲ್ಲಿ ವಿಭಜಿಸಲ್ಪಡುತ್ತದೆ. ಉದಾಹರಣೆಗೆ : ರ, ಗ, ಸ, ದ, ಅ, ಇದು ಕನ್ನಡ ವರ್ಣಮಾಲೆಯಲ್ಲಿ ಬರುವ ೫ ಅಕ್ಷರಗಳು. ಈ ೫ ಅಕ್ಷರಗಳನ್ನು ಆಯ್ಕೆ ಮಾಡಿಕೊಳ್ಳಲು ಕಾರಣವೇನೆಂದರೆ ಈ ೫ ಅಕ್ಷರಗಳಿಂದಲೇ ಹೆಚ್ಚು ಅಂದರೆ ೩೦ ರಿಂದ ೩೫ ಶಬ್ದಗಳು ರೂಪುಗೊಳ್ಳುತ್ತವೆ. ಮಗು ಮೊದಲ ಹಂತದಲಿಯೇ ಈ ಅಕ್ಷರಗಳ ಬಲದಿಂದ ೩೦ ರಿಂದ ೩೫ ಶಬ್ದಗಳು ರಚಿಸಲು ಕಲಿಯುತ್ತದೆ."[೧೨] ಹಾಗೂ ಈ ವಿಧಗಳಿಂದ ರಚಿತವಾದ ಪದ್ಯಗಳನ್ನು ಕಲಿಯುತ್ತದೆ. ಸ್ವಲ್ಪ ಸಮಯದಲ್ಲಿ ಮಗುವಿನಲ್ಲಿ ಕಲಿಕೆಯ ಸಾಮರ್ಥ್ಯ ಬೆಳೆಯುತ್ತದೆ.

"ಸಾಮರ್ಥ್ಯಗಳನ್ನು ಮಗು ಕಲಿಯಲು ಮಗುವಿನ ಕಲಿಕೆಗೆ ಪ್ರೇರಣೆ ನೀಡಲು ಹಲವಾರು ಚಟುವಟಿಕೆಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳಬೇಕಾಗುತ್ತದೆ. ಪ್ರಮುಖವಾದ ಕಥೆಗಳು, ಸನ್ನಿವೇಶ ರಚನೆ, ಚಿತ್ರ ಸಹಿತ ಪದ, ಸರಳ ಸಂಭಾಷಣೆ, ಸೀತಾಫಲ, ರಬ್ಬರ, ಅಕ್ಷರ, ಎಲ್ಲಾ ಸಾಧನಗಳ ಕಥೆ, ಕ್ರಾಪ್ಯೆ, ತಾರನಾಥ ಚಿತ್ರರೈಲು, ಅಕ್ಷರ ರೈಲು, ಅಕ್ಷರ ಪಟ್ಟಿ, ಚಿತ್ರಪದ ಬರವಣಿಗೆ, ಚಿತ್ರ ಸಹಿತ ವಾಕ್ಯ, ಬಿಟ್ಟ ಅಕ್ಷರ ಬರೆ, ಚಿತ್ರ ನೋಡಿ ಬರೆ, ಅಕ್ಷರಬಂಧ, ಪದಬಂಧ, ಆಶ–ಆಟ ಚಿತ್ರಗಳಿಗೆ ಪದ ಹೊಂದಿಸು ಪದಗಳ ಆಟ ಗೆಲುವಿನ ಆಟ ನೆನಪಿನ ಆಟ ವರ್ಣಮಾಲೆ ಇತ್ಯಾದಿ.[೧೩]

ಮಗು ಈ ಮೇಲಿನ ಚಟುವಟಿಕೆಗಳಲ್ಲಿ ತೊಡಗಿದಾಗ ಅದಕ್ಕೆ ಈ ಶಿಕ್ಷಣ ಪದ್ಧತಿಯು ಶಿಕ್ಷೆಯಾಗದೇ ಸಂತೋಷದ ಆಟವಾಗುತ್ತದೆ. ಅದು ತನಗೆ ಅರಿವಿಲ್ಲದೆ ಪ್ರತಿ ಹಂತದ ಕೊನೆಗೆ ತನ್ನನ್ನು ತಾನು ಪರೀಕ್ಷೆಗೆ ಒಡ್ಡಿಕೊಳ್ಳುತ್ತದೆ. ಆ ಹಂತದ ಪರೀಕ್ಷೆಯಲ್ಲಿ ಉತ್ತೀರ್ಣಗೊಂಡಿರುವಾಗ

ಮಗು ೩ನೇ ಹಂತದ ಚಟುವಟಿಕೆಯಲ್ಲಿ ಕಲಿಯಲು ಸಾಧ್ಯವಾಗುತ್ತದೆ. ಇಲ್ಲಿ ಮಗುವಿಗೆ ಪರೀಕ್ಷೆಯ ಅರಿವಿರದೆ ಇರುವುದರಿಂದ ಪರೀಕ್ಷೆಯ ಭಯವಿರುವುದಿಲ್ಲ. ಹೀಗೆ ನಿರಂತರ ಮೌಲ್ಯಮಾಪನ ನಡೆಯುತ್ತಾ ಕ್ರಮವಾಗಿ ಎಲ್ಲಾ ಹಂತಗಳ ಕಲಿಕೆ ಪೂರ್ಣಗೊಂಡು ಯಶಸ್ವಿಗೊಳ್ಳುತ್ತದೆ. ಭಾಷೆಯಲ್ಲಿ ಪ್ರತಿ ೩ ಹಂತಗಳಲ್ಲಿ ಅಂದರೆ ೫೧, ೯೫, ೧೫೦ನೇ ಮೆಟ್ಟಿಲುಗಳಲ್ಲಿ ಪರೀಕ್ಷೆಯ ರೂಪದಲ್ಲಿ ಮೌಲ್ಯಮಾಪನ ನಡೆಯುತ್ತದೆ.

ನಮ್ಮ ರಾಜ್ಯದಲ್ಲಿ ನಾಲ್ಕು ಜಿಲ್ಲೆಯಲ್ಲಿ ೪ ತಾಲೂಕುಗಳಲ್ಲಿ ರಾಯಚೂರು, ಲಿಂಗಸೂರು, ಕೋಲಾರದ ಚಿಕ್ಕಬಳ್ಳಾಪುರ, ಬೆಳಗಾಮ್, ಸವದತ್ತಿ ಮತ್ತು ಮಂಡ್ಯದ ಮಳವಳ್ಳಿಗಳಲ್ಲಿ ಈ ಹೊಸ ವಿಧಾನದಿಂದ ಬೋಧನಾ ಪದ್ಧತಿ ೧೯೯೯ರ ಜೂನ್ ತಿಂಗಳಿನಿಂದ ಕಾರ್ಯರೂಪಕ್ಕೆ ಬಂದಿದೆ.

ಮೇಲ್ಕಂಡ ಎಲ್ಲಾ ಅಂಶಗಳ ಅಧ್ಯಯನದ ಅಭಿಪ್ರಾಯಗಳನ್ನು ಪರಾಮರ್ಶಿಸಿ ಇಂದಿನ ಸಾಮಾಜಿಕ ಹಾಗೂ ಶೈಕ್ಷಣಿಕ ಸನ್ನಿವೇಶಗಳನ್ನು ಸೂಕ್ತವಾಗಿ ಅವಲೋಕಿಸಿ ಪಠ್ಯಪುಸ್ತಕ ರಹಿತವಾದ ಪದ್ಧತಿಯನ್ನು ಅದೆಷ್ಟೋ ಸಮಂಜಸ ಎಂಬುದನ್ನು ಇಂದಿನ ಶಿಕ್ಷಕರ ಮನೋಭಾವ. ಸಾಮರ್ಥ್ಯ ಹಾಗೂ ಕ್ಷಮತೆಯನ್ನು ಲಕ್ಷದಲ್ಲಿ ಇಟ್ಟುಕೊಂಡು ಸಾರ್ವಜನಿಕರ ಅಭಿಪ್ರಾಯದ ಹಿನ್ನಲೆಯಲ್ಲಿ ಈ ಪದ್ಧತಿಯು ಗಮನಾರ್ಹ ಪಾತ್ರವಹಿಸುತ್ತದೆ. ನಲಿ-ಕಲಿ ಬೋಧನಾ ಪದ್ಧತಿಯು ಸಮರ್ಪಕತೆಯನ್ನು ಕಂಡ ನಂತರ ಸಾರ್ವತ್ರಿಕರಣದ ಬಗ್ಗೆ ಪರಾಮರ್ಶಿಸಿ ಕ್ರಮ ಕೈಗೊಳ್ಳಬೇಕಾದ ಅವಶ್ಯಕತೆ ಇದೆ.

ಸರ್ಕಾರವು ಜಾರಿಗೆ ತಂದಿರುವ ಈ ನಲಿ-ಕಲಿ ಯೋಜನೆ ಶೈಕ್ಷಣಿಕ ಕ್ಷೇತ್ರದಲ್ಲಿ ಒಂದು ಹೊಸ ಕ್ರಾಂತಿಯನ್ನು ಉಂಟು ಮಾಡಿದ್ದರೂ ಈ ಯೋಜನೆಯಲ್ಲಿ ಕೆಲವು ನ್ಯೂನತೆಗಳು ಇರುವುದನ್ನು ಗುರುತಿಸಬಹುದು. ಅವುಗಳಲ್ಲಿ ಮುಖ್ಯವಾಗಿ ಬೇರೆ ರಾಜ್ಯದಲ್ಲಿ ಅಳವಡಿಸಲಾದ ಈ ಯೋಜನೆಯನ್ನು ನಮ್ಮ ರಾಜ್ಯದಲ್ಲಿ ಯತಾವತ್ತಾಗಿ ಜಾರಿಗೆ ತಂದಿರುವುದು ವಿಷಾದನೀಯ. ಏಕೆಂದರೆ ಆ ರಾಜ್ಯದ ಮಕ್ಕಳ ಬೌದ್ಧಿಕಮಟ್ಟ ಹಾಗೂ ಶೈಕ್ಷಣಿಕ ಪರಿಸರಕ್ಕೂ ನಮ್ಮ ರಾಜ್ಯದ ಮಕ್ಕಳ ಬೌದ್ಧಿಕಮಟ್ಟಕ್ಕೂ ಹಾಗೂ ಶೈಕ್ಷಣಿಕ ಪರಿಸರಕ್ಕೂ ಬಹಳ ವ್ಯತ್ಯಾಸವಿದೆ. ಆದ್ದರಿಂದ ನಮ್ಮ ರಾಜ್ಯಕ್ಕೆ ತಕ್ಕಂತೆ ಈ ಯೋಜನೆಯನ್ನು ಮಾರ್ಪಡಿಸಿ ಜಾರಿಗೆ ತಂದರೆ ಹೆಚ್ಚು ಸೂಕ್ತವಾಗುತ್ತದೆ.

ಈ ಯೋಜನೆಯಲ್ಲಿನ ಇನ್ನೊಂದು ದೋಷವೆಂದರೆ ಏಣಿತತ್ವ, ಈ ಏಣಿತತ್ವವು ಶಿಕ್ಷಣದಲ್ಲಿ ಗೊಂದಲವನ್ನುಂಟು ಮಾಡಿದೆ. ಏಕೆಂದರೆ ಒಬ್ಬ ವಿದ್ಯಾರ್ಥಿ ಒಂದು ಏಣಿಯಲ್ಲಿದ್ದರೆ ಮತ್ತೊಬ್ಬ ವಿದ್ಯಾರ್ಥಿ ೧೦ನೇ ಏಣಿಯಲ್ಲಿರುತ್ತಾನೆ. ಇದರಿಂದ ಶಿಕ್ಷಕನು ಎಲ್ಲಾ ಮೆಟ್ಟಿಲುಗಳಲ್ಲಿರುವ ವಿದ್ಯಾರ್ಥಿಗಳಿಗೆ ಬೋಧನೆ ಮಾಡುವುದು ಕಷ್ಟಸಾಧ್ಯವಾಗುತ್ತದೆ. ಈ ವಿಧಾನದಲ್ಲಿ ಶಿಕ್ಷಕರು ಸದಾ ಚಟುವಟಿಕೆಯಿಂದ ಇದ್ದಾಗ ಮಾತ್ರ ಯಶಸ್ವಿಯಾಗಲು ಸಾಧ್ಯ.

ಬೋಧನೆಯು ವಿಶಿಷ್ಟವಾದ, ವೈವಿಧ್ಯಯಮಯವಾದ, ವೈಜ್ಞಾನಿಕವಾದ ಒಂದು ಕೌಶಲ್ಯ. ಸಮರ್ಥ ಬೋಧಕನು ವಿದ್ಯಾರ್ಥಿಗಳನ್ನು ವ್ಯವಸ್ಥಿತವಾಗಿ ಕಲಿಯುವಂತೆ ಪ್ರೇರಣೆ ಮಾಡಬೇಕು. ಯಾವುದೇ ವಿಷಯವನ್ನು ಬೋಧಿಸಬೇಕಾದರೆ ಶಿಕ್ಷಕನಿಗೆ ಬೋಧನಾ ವಿಧಾನಗಳ ಅರಿವು ಇರಬೇಕು. ಬೋಧನಾ ವಿಧಾನಗಳನ್ನು ಅನುಸರಿಸಿ ಬೋಧನೆ ಮಾಡಿದಾಗ ಮಾತ್ರ ಕಲಿಕೆ ಪರಿಣಾಮಕಾರಿಯಾಗುತ್ತದೆ. ಬೇರೆ ಬೇರೆ ವಿಷಯಗಳನ್ನು ಕಲಿಸುವಾಗ ಬೇರೆ ಬೇರೆ ಪದ್ಧತಿಗಳನ್ನು ಅನುಸರಿಸಬೇಕು. ಶಾಲೆಯಲ್ಲಿ ಶಿಕ್ಷಕನು ವಿಷಯಗಳನ್ನು ಬೋಧಿಸುವಾಗ ಶ್ರದ್ದೆ, ಆಸಕ್ತಿ ಹಾಗೂ ಕ್ರಮಬದ್ಧತೆ ಇರಬೇಕು. ಆಗ ಶಿಕ್ಷಣ ಪರಿಣಾಮಕಾರಿಯಾಗುವುದರಲ್ಲಿ ಸಂದೇಹವಿಲ್ಲ.

ಬೋಧನೆ ಒಂದು ಕಲೆಯಾಗಿದ್ದು, ಅದನ್ನು ಕರಗತ ಮಾಡಿಕೊಳ್ಳಬೇಕು. ಒಬ್ಬ ಶಿಕ್ಷಕ ಎಲ್ಲಾ ಬೋಧನಾ ವಿಧಾನಗಳನ್ನು ಅರಿತು ಕೊಳ್ಳಲು ಅಥವಾ ಬಳಸಲು ಶಕ್ತನಲ್ಲ. ಆದರೆ ಹೆಚ್ಚು ವಿಧಾನಗಳನ್ನು ಅರಿತುಕೊಳ್ಳಲು ಪ್ರಯತ್ನಮಾಡಬೇಕು. ಏಕೆಂದರೆ ಎಲ್ಲಾ ವಿಷಯಗಳನ್ನು ಏಕರೀತಿಯಾಗಿ ಬೋಧಿಸಲು ಸಾಧ್ಯವಿಲ್ಲ. ಅದು ಅಪಾಯಕಾರಿ, ಹಾಗಾಗಿ ಮಕ್ಕಳ ವಯಸ್ಸು, ಬುದ್ದಿಶಕ್ತಿ, ಸಾಮರ್ಥ್ಯ, ಬೋಧಿಸಬೇಕಾಗಿರುವ ವಿಷಯದ ವ್ಯಾಪ್ತಿ ಮುಂತಾದವುಗಳನ್ನು ಗಣನೆಗೆ ತೆಗೆದುಕೊಂಡು ಬೋಧಕರು ಬೋಧನಾ ವಿಧಾನವನ್ನು ಆಯ್ಕೆ ಮಾಡಬೇಕು. ಕಾಲದಿಂದ ಕಾಲಕ್ಕೆ ಹಂತದಿಂದ ಹಂತಕ್ಕೆ ಹಾಗೂ ಶಾಲೆಯಿಂದ ಶಾಲೆಗೆ ಬೋಧನೆಯು ಬದಲಾವಣೆ ಹೊಂದುತ್ತದೆ. ಆದರೆ ಅದನ್ನು ಹೇಗೆ ಬದಲಾಯಿಸಿಕೊಳ್ಳಬೇಕೆಂಬ ಪರಿಜ್ಞಾನ ಬೋಧಕನಿಗೆ ಇರಬೇಕು. ಬೋಧನಾ ವಿಧಾನಗಳು ಯಶಸ್ವಿ ಶಿಕ್ಷನ ಮೇಲೆ ಅವಲಂಭಿತವಾಗಿರುತ್ತದೆ. ಒಂದು ವಿಧಾನವನ್ನು ಒಂದು ತರಗತಿಯಲ್ಲಿ ಉಪಯೋಗಿಸಿದಾಗ ಉಂಟಾಗುವ ಪರಿಣಾಮ ಅದೇ ವಿಧಾನವನ್ನು ಮತ್ತೊಂದು ತರಗತಿಯಲ್ಲಿ ಉಪಯೋಗಿಸಿದಾಗ ಅಷ್ಟು ಪರಿಣಾಮವಾಗದೆ ಇರಬಹುದು.

ಬೋಧನೆ ಎಂದರೆ ಕಲಿಸುವುದು, ಹೇಳಿಕೊಡುವುದು ಎಂಬರ್ಥವನ್ನು ಹೊಂದಿದೆ. ಕಲಿಸುವ ಯತ್ನದಲ್ಲಿ ಉಪಯೋಗಿಸಲ್ಪಡುವ ವಿವಿಧ ಮಾರ್ಗಗಳಿಗೆ ಬೋಧನಾ ವಿಧಾನವೆಂದು ಕರೆಯುವರು. ಪ್ರಾಥಮಿಕ ಪ್ರೌಢ ಹಂತದಲ್ಲಿ ಕನ್ನಡ ಭಾಷೆಯನ್ನು ಬೋಧಿಸಬೇಕಾದರೆ ಹಲವಾರು ಭಾಗಗಳನ್ನಾಗಿ ಮಾಡಿಕೊಂಡು ಬೋಧಿಸಲಾಗುತ್ತದೆ. ಅವುಗಳೆಂದರೆ ಗದ್ಯ, ಪದ್ಯ, ಪ್ರಬಂಧ, ವ್ಯಾಕರಣ, ಪತ್ರಲೇಖನ ಇತ್ಯಾದಿ ಪ್ರತಿಯೊಂದಕ್ಕೂ ಬೋಧಿಸಲು ತನ್ನದೇ ಆದ ವಿಶಿಷ್ಟವಾದ ಬೋಧನಾ ಪದ್ಧತಿಗಳಿವೆ. ಹಲವಾರು ಉದ್ದೇಶಗಳನ್ನು ಇಟ್ಟುಕೊಂಡು ಬೋಧಿಸಿ ಆ ಉದ್ದೇಶಗಳನ್ನು ಅಥವಾ ಗುರಿಗಳನ್ನು ಸಾಧಿಸ ಬೇಕಾಗುತ್ತದೆ. ಈ ಸಾಧನೆಗೆ ಉತ್ತಮ ಬೋಧನಾ ವಿಧಾನಗಳು ಅವಶ್ಯವಾಗಿವೆ. ಉದಾ : ಉಪನ್ಯಾಸ ಪದ್ಧತಿಯು ಕಾಲೇಜು ವಿದ್ಯಾರ್ಥಿಗಳಿಗೆ ಅನುಕೂಲವಾಗಿದೆ. ಆದರೆ ಈ ಪದ್ಧತಿಯನ್ನು

ಅನುಸರಿಸಿ ಪ್ರಾಥಮಿಕ ಶಾಲಾ ಮಕ್ಕಳಿಗೆ ಬೋಧನೆ ಮಾಡುವುದು ಸೂಕ್ತವಲ್ಲ. ಗ್ರಾಮಾಂತರ ಶಾಲೆಗಳು, ಪಟ್ಟಣದ ಶಾಲೆಗಳು, ನಗರ ಶಾಲೆಗಳು, ಬಾಲಕ ಬಾಲಕೀಯರ ಶಾಲೆಗಳು ಹೀಗೆ ಆಯಾ ಶಾಲೆಗಳಿಗೆ ತಕ್ಕಂತೆ ಬೋಧನಾ ವಿಧಾನಗಳನ್ನು ರೂಪಿಸಿಕೊಳ್ಳಬೇಕು. ಇದರ ಅರಿವು ಪ್ರತಿಯೊಂದು ಶಿಕ್ಷಕರಿಗೂ ಇರಬೇಕು. ಕ್ರಮಾಧಾರಿತ ಬೋಧನೆಯಿಂದ ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸಬೇಕು. ಯಾವ ಶಿಕ್ಷಕನಿಗೆ ಆಗಲಿ ಇಂತದ್ದೇ ಬೋಧನಾ ವಿಧಾನವನ್ನು ಅನುಸರಿಸಿ ಪಾಠ ಮಾಡಬೇಕೆಂದು ನಿರ್ಬಂಧಿಸಬಾರದು. ಶಿಕ್ಷಕನು ಆಯಾ ಶಾಲಾ ಮಕ್ಕಳಿಗೆ ಆಯಾ ಶಾಲಾ ವಿಷಯಕ್ಕೆ ತಕ್ಕಂತೆ ಆಯಾ ಸನ್ನಿವೇಶಕ್ಕೆ ತಕ್ಕಂತೆ ಬೋಧನಾ ವಿಧಾನವನ್ನು ಅನುಸರಿಸಲು ಸ್ವತಂತ್ರನಾಗಿರಬೇಕು.

ಬೋಧನೆ ಮಾಡುವಾಗ ಯಾವ ಶಿಕ್ಷಕನೇ ಆಗಲಿ ಪಠ್ಯ ವಿಷಯದ ಬಗ್ಗೆ ಎಷ್ಟು ಜ್ಞಾನವನ್ನು ಪಡೆದಿರುವನೋ ಅಷ್ಟೇ ಪರಿಜ್ಞಾನವನ್ನು ಬೋಧನಾ ವಿಧಾನಗಳಲ್ಲಿ ಪಡೆದಿರಬೇಕು. ಇಲ್ಲದಿದ್ದಲ್ಲಿ ಬೋಧನೆ ಬೋಧನಾ ಉದ್ದೇಶಗಳು ಯಶಸ್ವಿಯಾಗಿರಲಾರವು. ಮತ್ತು ಪೂರ್ಣವಾಗಿ ಸಾಧಿಸಲು ಸಾಧ್ಯವಿಲ್ಲ. ಪಠ್ಯಕ್ರಮ ಉತ್ತಮವಾಗಿರಬಹುದು. ಅದಕ್ಕೆ ತಕ್ಕಂತೆ ಬೋಧನಾ ವಿಧಾನಗಳನ್ನು ಅಳವಡಿಸಿಕೊಳ್ಳಬೇಕು. ಬೋಧನಾ ವಿಧಾನವು ಜ್ಞಾನ ಮತ್ತು ಕಲಿಕೆಗೆ ಸೇತುವೆ ಇದ್ದಂತೆ. ಹಲವು ಬಗೆಯ ಬೋಧನಾ ವಿಧಾನಗಳಿದ್ದಾಗಲೂ ಒಬ್ಬ ಶಿಕ್ಷಕನು ಒಂದು ವಿಷಯವನ್ನು ಬೋಧಿಸುವ ವಿಧಾನವು ಅದೇ ವಿಷಯವನ್ನು ಮತ್ತೊಬ್ಬ ಶಿಕ್ಷಕನು ಬೋಧಿಸುವ ವಿಧಾನಕ್ಕಿಂತ ಭಿನ್ನವಾಗಿರುತ್ತದೆ. ಬೇರೆ ಬೇರೆ ಶಿಕ್ಷಕ ಬೇರೆ ಬೇರೆ ವಿಧಾನಗಳನ್ನು ಅಳವಡಿಸಿಕೊಂಡಿರುತ್ತಾರೆ.

ಈ ಹಿನ್ನಲೆಯಲ್ಲಿ ನೋಡಿದಾಗ ಮಕ್ಕಳು ಭಾಷಾ ಕಲಿಕೆಯಲ್ಲಿ ಹಿಂದುಳಿಯಲು ಕಾರಣಗಳನ್ನು ಅವಲೋಕಿಸಿದಾಗ ಪರಿಣಾಮಕಾರಿ ಬೋಧನೆ ಆಗದಿರುವುದು ಒಂದು ಪ್ರಬಲ ಕಾರಣವಾಗಿದೆ. ಆದ್ದರಿಂದ ಬೋಧಕ ಸ್ವಯಂ ಆಸಕ್ತಿ, ಅಭ್ಯಾಸ ಹಾಗೂ ಬೋಧನಾ ಸೂಕ್ಷ್ಮಗಳನ್ನು ಕರಗತಮಾಡಿಕೊಂಡಾಗ ಮಾತ್ರ ಪರಿಣಾಮಕಾರಿ ಬೋಧಕನಾಗಲು ಸಾಧ್ಯ.

**ಬೋಧನಾ ಮಾಧ್ಯಮ ಕುರಿತಾದ ಚಿಂತನೆಗಳು**

ಶಿಕ್ಷಣದಲ್ಲಿ ಭಾಷೆಯ ಕಲಿಕೆ, ಅದು ವಹಿಸುವ ಪಾತ್ರ ಮಹತ್ವದ್ದಾಗಿದೆ. ಶಿಕ್ಷಣದ ಪರಿಧಿಗೆ ಬರುವ ಪ್ರತಿ ವಿಷಯವನ್ನು ಯಾವುದಾದರೊಂದು ಭಾಷೆಯ ಮೂಲಕವೇ ಕಲಿಯಬೇಕಾಗುತ್ತದೆ. ಹೀಗಾಗಿ ಶಿಕ್ಷಣದಲ್ಲಿ ಭಾಷೆಯ ಕಲಿಕೆ ಅನಿವಾರ್ಯ. ಇಂತಹ ಶಿಕ್ಷಣ ಮಾಧ್ಯಮ ಕುರಿತು, ಅದರಲ್ಲಿಯೂ ಪ್ರಾಥಮಿಕ ಶಾಲೆಗಳಲ್ಲಿ ಬೋಧನಾ ಮಾಧ್ಯಮ ಯಾವುದಿರಬೇಕು ಎಂಬುದನ್ನು ಕುರಿತಾಗಿ ಚಿಂತನೆ ನಡೆಯುತ್ತಲಿವೆ. ಚಿಂತನೆ ಇಂದಿನದಲ್ಲ. ಅದು ಪ್ರಾಚೀನ ಕಾಲದಿಂದಲೂ

ನಡೆಯುತ್ತಾಬಂದಿದೆ. ಬೋಧನಾ ಮಾಧ್ಯಮ ಕುರಿತು ನಮ್ಮ ಶೈಕ್ಷಣಿಕ ಪರಂಪರೆಯಲ್ಲಿ ಅಂದರೆ ವೇದಗಳ ಕಾಲದ, ಬೌದ್ಧಕಾಲದ, ಮುಸ್ಲಿಂಕಾಲದ ಶಿಕ್ಷಣದಲ್ಲಿ ಪ್ರಾಥಮಿಕ ಶಾಲೆಯ ಬೋಧನಾ ಮಾಧ್ಯಮ ಯಾವುದಿರಬೇಕು ಎಂಬ ಬಗ್ಗೆ ತನ್ನದೆ ಆದ ವಿವರಗಳನ್ನು ನೀಡಿದೆ.

ಸ್ವತಂತ್ರಪೂರ್ವ ಹಾಗೂ ಸ್ವತಂತ್ರನಂತರದಲ್ಲಿ ರಚನೆಯಾದ ಹಲವಾರು ಆಯೋಗಗಳು ಹಾಗೂ ವರದಿಗಳು ಸಹ ಭಾಷಾ ಮಾಧ್ಯಮ ಯಾವುದಿರಬೇಕು ಎಂಬ ಬಗ್ಗೆ ತಮ್ಮ ಶಿಫಾರಸ್ಸುಗಳನ್ನು ಸರ್ಕಾರಕ್ಕೆ ನೀಡಿವೆ. ಇನ್ನು ಆಯಾ ಕಾಲಕ್ಕೆ ತಕ್ಕಂತೆ ಭಾಷಾ ತಜ್ಞರು, ಶಿಕ್ಷಣ ತಜ್ಞರು, ಸಮಾಜ ಶಾಸ್ತ್ರಜ್ಞರು ಮಾಧ್ಯಮದ ಬಗ್ಗೆ ಅನಿಸಿಕೆ, ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಈ ಎಲ್ಲಾ ಚರ್ಚೆಗಳನ್ನು ಗಮನಿಸಿ, ಭಾರತದೇಶವು ತ್ರಿಭಾಷಾ ಸೂತ್ರವನ್ನು ಜಾರಿಗೆ ತಂದು ಅದನ್ನು ಎಲ್ಲಾ ರಾಜ್ಯಗಳು ಪಾಲಿಸುವಂತೆ ನಿಯಮ ರೂಪಿಸಿದೆ.

ಬೋಧನಾ ಮಾಧ್ಯಮ ಕುರಿತು ಇಷ್ಟೆಲ್ಲಾ ಚಿಂತನೆ, ನೀತಿ ನಿಯಮಗಳು ಇದ್ದರು ನಮ್ಮ ಕರ್ನಾಟಕದಲ್ಲಿ ಬೋಧನಾ ಮಾಧ್ಯಮ ಯಾವುದಿರಬೇಕು ಎಂಬ ಸಮಸ್ಯೆ ಬಗೆ ಹರಿಯುವಂತೆ ಕಾಣುತ್ತಿಲ್ಲ. ನಮ್ಮ ಕರ್ನಾಟಕ ಸರ್ಕಾರ, ಸಾಹಿತಿಗಳು, ಕರ್ನಾಟಕ ರಕ್ಷಣ ವೇದಿಕೆ, ಕನ್ನಡ ಪರ ಚಿಂತಕರು ಅಂದಿಗಿಂತ ಇಂದು ಪ್ರಾಥಮಿಕ ಶಾಲೆಗಳಲ್ಲಿ ಬೋಧನಾ ಮಾದ್ಯ ಯಾವುದಿರಬೇಕು ಎಂಬುದರ ಬಗ್ಗೆ ಹೆಚ್ಚಿನ ಚರ್ಚೆಗಳು ನಡೆಯುತ್ತಿರುವುದು ಗಮನಾರ್ಹವಾಗಿದೆ. ಇಂತಹ ಮಹತ್ವದ ಚಿಂತನೆಗಳನ್ನು ಸಂಕ್ಷಿಪ್ತವಾಗಿ ಈ ಕೆಳಗಿನಂತೆ ಚರ್ಚಿಸಲಾಗಿದೆ.

## ವೇದಕಾಲದ ಶಿಕ್ಷಣ

"ವೇದಗಳ ಕಾಲದಲ್ಲಿ ಶಿಕ್ಷಣವು ಸಂಸ್ಕೃತದಲ್ಲಿ ನಡೆಯುತ್ತಿತ್ತು. ಸಂಸ್ಕೃತವು ಜನರ ಧಾರ್ಮಿಕ ವಿಧಿಗಳಿಗಾಗಿ, ಶಿಕ್ಷಣದ ಭಾಷೆ ಹಾಗೂ ವಿಜ್ಞಾನದ ಭಾಷೆಯಾಗಿತ್ತು. ಇಲ್ಲಿ ಎರಡು ರೀತಿಯ ಭಾಷೆಗಳು ಬಳಕೆಯಲ್ಲಿದ್ದವು. ದೈವಭಾಷೆ ಹಾಗೂ ಮಾನವ ಭಾಷೆ ಧಾರ್ಮಿಕ ಕಾರ್ಯಗಳಲ್ಲಿ ದೇವ ಭಾಷೆಯನ್ನು ಸಾಮಾನ್ಯ ಸಂಭಾಷಣೆಗಳಲ್ಲಿ ಮಾನವ ಭಾಷೆಯನ್ನು ಉಪಯೋಗಿಸಲಾಗುತ್ತಿತ್ತು. ಇಲ್ಲಿಯ ಶಿಕ್ಷಣ ಮಾಧ್ಯಮ ಸಂಸ್ಕೃತವಾಗಿತ್ತು."[೧೪]

## ಬೌದ್ಧ ಕಾಲದ ಶಿಕ್ಷಣ

ಬೌದ್ಧರ ಕಾಲದ ಶಿಕ್ಷಣದಲ್ಲಿ ಸಾಮಾನ್ಯ ವಿಷಯಗಳನ್ನು ಪ್ರಾಂತೀಯ ಭಾಷೆಯಲ್ಲಿಯೇ ಪಾಲಿ ಭಾಷೆಯಲ್ಲಿಯೇ ನೀಡಲಾಗುತ್ತಿತ್ತು. ಹಾಗಾಗಿ "ಪಾಲಿ ಭಾಷೆ"ಯು ಬೌದ್ಧರ ಕಾಲದಲ್ಲಿ ಶಿಕ್ಷಣ ಮಾಧ್ಯಮವಾಗಿತ್ತು. ಹಾಗೂ ಉನ್ನತ ಶಿಕ್ಷಣದಲ್ಲಿ ಸಂಸ್ಕೃತ ಭಾಷೆಯು ಶಿಕ್ಷಣದ ಮಾಧ್ಯಮವಾಗಿತ್ತು."[೧೫]

## ಮುಸ್ಲಿಂ ಕಾಲದ ಶಿಕ್ಷಣ

ಮುಸ್ಲಿಂ ಕಾಲದ ಶಿಕ್ಷಣದಲ್ಲಿ ಶಿಕ್ಷಣ ಮಾಧ್ಯಮವಾಗಿ ಅರೆಬಿಕ್ ಮತ್ತು ಪರ್ಶಿಯನ್ ಭಾಷೆಗಳಿಗೆ ಅತಿಪ್ರಾಮುಖ್ಯತೆ ಇದ್ದುದ್ದರಿಂದ ಪ್ರಾಂತೀಯ ಭಾಷೆಗಳ ಬೆಳವಣಿಗೆ ಅಡ್ಡಿಯುಂಟಾಯಿತು. ಮಕ್ಕಳು ಪ್ರಾರಂಭದಿಂದಲೇ ಪರ್ಶಿಯನ್ ಮತ್ತು ಅರೆಬಿಕ್ ಭಾಷೆಗಳನ್ನು ಕಲಿಯಬೇಕಾಗಿತ್ತು. ಶಿಕ್ಷಣದ ಮಾಧ್ಯಮ ಪರ್ಶಿಯನ್ ಆಗಿತ್ತು.”[೧೬] ಅಕ್ಬರ್ ಮತ್ತು ಔರಂಗಜೇಬ್ ನಂತಹ ಅರಸರು ಹಿಂದಿ ಮತ್ತು ಉರ್ದು ಮುಂತಾದ ಮಾತೃಭಾಷೆಗಳಲ್ಲಿಯೇ ಶಿಕ್ಷಣ ದೊರೆಯಬೇಕೆಂದು ಹೇಳಿದರು. ಸಹ ಶಿಕ್ಷಣದ ಕ್ಷೇತ್ರದಲ್ಲಿ ಅರಬ್ಬಿ ಮತ್ತು ಪರ್ಶಿಯನ್ ಭಾಷೆಗಳದೇ ಮೇಲುಗೈ ಆಗಿತ್ತು.

ವೇದಕಾಲದ ಶಿಕ್ಷಣ ವ್ಯವಸ್ಥೆ ಕೇವಲ ಉನ್ನತ ಸಮುದಾಯದ ಪಾಲಾಗಿತ್ತು. ಸಾಮಾನ್ಯ ಜನರ ಆಡು ಭಾಷೆಗೆ ಯಾವುದೇ ಪ್ರಯೋಜನವಿರಲಿಲ್ಲ. ಸಂಸ್ಕೃತ ಭಾಷೆಯಾಡುವವರೇ ಶಿಕ್ಷಣ ಪಡೆಯುವ ಪರಿಸರ ಅಂದು ನಿರ್ಮಾಣವಾಗಿತ್ತು. ಹಲವು ರೀತಿಯ ನಿರ್ಬಂಧಗಳಿಂದ ಕೂಡಿದ ಕಲಿಕೆ ತುಂಬಾ ಕಠಿಣವಾಗಿತ್ತು. ಇಲ್ಲಿಯ ಶಿಕ್ಷಣದಲ್ಲಿ ಹಾಗೂ ಜನಸಾಮಾನ್ಯರ ಜೀವನದಲ್ಲಿ ಧಾರ್ಮಿಕ ವಿಷಯಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದರು. ಇದರಿಂದ ವಿದ್ಯಾರ್ಥಿಗಳಿಗೆ ಇತರೆ ವಿಷಯಗಳಲ್ಲಿ ಆಸಕ್ತಿ ಕಡಿಮೆಯಾಗಿ ಇವರಲ್ಲಿ ತಾರ್ಕಿಕತೆ, ಸ್ವಂತ ಆಲೋಚನಾ ಶಕ್ತಿ ಬೆಳೆಯಲು ಸಾಧ್ಯತೆಗಳಿಲ್ಲ. ಇದರಂತೆ ಮುಂದೆ ಬಂದ ಬೌದ್ದ ಶಿಕ್ಷಣಾ ಪದ್ಧತಿಯು ಬ್ರಾಹ್ಮಣ ಶಿಕ್ಷಣ ಪದ್ಧತಿಯ ಒಂದು ಸುಧಾರಿತ ಶಿಕ್ಷಣ ವ್ಯವಸ್ಥೆ ಎಂದು ಹೇಳಬಹುದು. ಇಲ್ಲಿ ಸಹ ಪಾಲಿ ಭಾಷೆಯ ಜೊತೆಗೆ ಸಂಸ್ಕೃತ ಭಾಷೆಯು ವ್ಯಾಸಾಂಗದಲ್ಲಿ ಬಳಕೆಯಲ್ಲಿತ್ತು. ಮುಂದೆ ಮದ್ಯಕಾಲೀನ ಸಂದರ್ಭದಲ್ಲಿ ಶಿಕ್ಷಣ ವ್ಯವಸ್ಥೆ ಕೇವಲ ಮುಸ್ಲಿಮರ ಪಾಲಾಗಿ, ದೇಶಿಯ ಭಾಷೆಗಳಿಗೆ ಯಾವುದೇ ರೀತಿಯ ಪ್ರಾಧಾನ್ಯತೆ ಇರಲಿಲ್ಲ. ಹಿಂದೂಗಳಿಗೆ ಶಿಕ್ಷಣ ಪಡೆಯುವ ಹಕ್ಕಿರಲಿಲ್ಲ. ಇದರಿಂದ ಅನೇಕ ಜನ ಶಿಕ್ಷಣದಿಂದ ವಂಚಿತರಾದರು.

ಒಟ್ಟಿನಲ್ಲಿ ಪ್ರಾಚೀನ ಕಾಲದ ಶಿಕ್ಷಣ ವ್ಯವಸ್ಥೆ ಒಂದು ಸೀಮಿತ ಚೌಕಟ್ಟಿಗೆ ಒಳಪಟ್ಟು ನೀಡುತ್ತಿತ್ತು. ಧಾರ್ಮಿಕ ಹಾಗೂ ಆಧ್ಯಾತ್ಮಿಕತೆಯ ಕಡೆ ಹೆಚ್ಚು ಒಲವಿದ್ದು, ಈ ಸಂಸ್ಥೆಗಳು ಪ್ರಾದೇಶಿಕ ಭಾಷೆಯನ್ನು ಕಡೆಗಣಿಸಿ ತಮ್ಮದೆ ಆದ ಪ್ರಮುಖ ಭಾಷೆಯಲ್ಲಿ ಶಿಕ್ಷಣ ನೀಡುತ್ತಿದ್ದರಿಂದ ಜನ ಸಾಮಾನ್ಯರು ಸಹಜವಾಗಿಯೇ ಶಿಕ್ಷಣದಿಂದ ದೂರನೇ ಉಳಿಯುತ್ತಿದ್ದರು.

## ಸ್ವಾತಂತ್ರ ಪೂರ್ವದ ಪ್ರಮುಖ ಶಿಕ್ಷಣದ ಆಯೋಗಗಳು

ಸ್ವಾತಂತ್ರ ಪೂರ್ವದಲ್ಲಿ ರಚನೆಯಾದ ಆಯೋಗಗಳು ಬೋಧನಾ ಮಾಧ್ಯಮವಾಗಿ ಯಾವ ಭಾಷೆ ಇರಬೇಕು, ಯಾವ ತರಗತಿಯಿಂದ ಮಾತೃಭಾಷೆಯನ್ನು ಬೋಧಿಸಬೇಕು ಎಂಬುದರ ಬಗ್ಗೆ

ತಮ್ಮದೇ ಆದ ವಿಚಾರಗಳನ್ನು ಮಂಡಿಸಿದ್ದಾರೆ. ಅವುಗಳಲ್ಲಿ ಕೆಲವು ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**೧೮೩೫ರ ಮೇಕಾಲೆ ವರದಿ**

ಮೇಕಾಲೆ ವರದಿ ಭಾರತದ ಶಿಕ್ಷಣ ವರದಿ, ಶಿಕ್ಷಣ ಪದ್ಧತಿಯೊಂದಕ್ಕೆ ಶಾಶ್ವತವು ನಿರ್ದಿಷ್ಟವು ಆದಂತಹ ಬುನಾದಿಯನ್ನು ಹಾಕಲು ಸರ್ಕಾರಕ್ಕೆ ಸಹಾಯವಾಯಿತು. ಆದರೆ ಭಾಷಾ ಬೋಧನೆಯ ಬಗ್ಗೆ ಅವರು ಹೇಳುವಾಗ "ದೇಸೀ ಭಾಷೆಗಳನ್ನು ಕಡೆಗಣಿಸಿ "ಇಂಗ್ಲೀಷ್" ಬೋಧನಾ ಮಾಧ್ಯಮ ವಾಗಿರಬೇಕೆಂದು"[೧೭] ಸಮರ್ಥಿಸಿಕೊಂಡಿದ್ದಾರೆ.

ಏಕೆಂದರೆ ಭಾರತೀಯ ಭಾಷೆಗಳು ಪೂರ್ಣವಾಗಿ ವಿಕಾಸನ ಹೊಂದಿಲ್ಲ. ಅರೆಬಿಕ್ ಮತ್ತು ಸಂಸ್ಕೃತ ಭಾಷೆಗಳಿಗಿಂತ ಇಂಗ್ಲೀಷ್ ಉನ್ನತವಾಗಿದೆ ಎಂದು ಹೇಳಿದ್ದಾರೆ. ಮೇಕಾಲೆಯವರ "ಇಂಗ್ಲೀಷ ವಾದಗಳು" ಈ ಕೆಳಗಿನಂತಿವೆ.

ಅ) ಇಂಗ್ಲೀಷ್ ಭಾಷೆಯು ಆಧುನಿಕ ಜ್ಞಾನದ ಬೀಗದ ಕೈ ಇದ್ದಂತೆ. ಅದುದರಿಂದ ಅದು ಅರೆಬಿಕ್ ಹಾಗೂ ಸಂಸ್ಕೃತಗಳಿಗಿಂತ ಪ್ರಯೋಜನಕಾರಿಯಾಗಿದೆ.

ಆ) ಅದು ಪಾಶ್ಚಾತ್ಯ ಭಾಷೆಗಳಲ್ಲಿಯೇ ಪ್ರಮುಖವಾದದ್ದು ಭಾರತದಲ್ಲಿ ಇಂಗ್ಲೀಷ್ ಭಾಷೆಯು ಆಡಳಿತ ವರ್ಗದವರಿಂದ ಮಾತ್ರ ಬಳಸಲ್ಪಡುವ ಅದು ಪೌರತ್ಯ ಸಮುದ್ರಗಳ ಮುಖಾಂತರ ವಾಣಿಜ್ಯ ಭಾಷೆ ಆಗಬೇಕಿತ್ತು.

ಇ) ಇಂಗ್ಲೀಷ್ ಭಾಷೆಯು ಭಾರತೀಯರನ್ನು ನಾಗರೀಕರನ್ನಾಗಿ ಮಾಡುವುದು, ಅದು ಭಾರತದಲ್ಲಿ ಜ್ಞಾನ ಪುನರ್‌ಜ್ಜೀವನಕ್ಕೆ ತರುವುದು.

ಈ) ಭಾರತೀಯರಲ್ಲಿ ಅರ್ಧದಷ್ಟು ಜನ ಇಂಗ್ಲೀಷ್ ಕಲಿಯಬೇಕೆಂದು ಹಂಬಲಿಸುತ್ತಾರೆ. ಆದ್ದರಿಂದ ರಾಜರಾಂ ಮೋಹನ್‌ರಾಯರವರಿಗೆ ಬೆಂಬಲ ನೀಡಿದರು.

ಉ) "ಮೆಕಾಲೆಯಿಂದ" ಅರ್ಧಮುಖಗೊಳಿಸುವಿಕೆ ಸೋಸುವಿಕೆ ಸಿದ್ಧಾಂತ ಪ್ರತಿಸ್ಥಾಪಿಸಲ್ಪಟ್ಟಿತು. ಅವರ ಪ್ರಕಾರ ಭಾರತೀಯರು ರಕ್ತ ಮತ್ತು ಬಣ್ಣದಲ್ಲಿ ಇರಬೇಕೆ ವಿನಃ ರುಚಿಗಳು ಅಭಿಪ್ರಾಯಗಳು ನೈತಿಕತೆಯು ಮತ್ತು ಬೌದ್ಧಿಕತೆಯು ಇಂಗ್ಲೀಷ್ ಆಗಬೇಕು. ಅಂದಾಗ ಮಾತ್ರ ಅಧೋಮುಖ ಸೋಸುವಿಕೆ ಸಿದ್ಧಾಂತ ಯಶಸ್ವಿಯಾಗಬಲ್ಲದು."[೧೮]

**ವುಡ್ಸ್‌ನ ವರದಿ**

೧೮೫೪ರಲ್ಲಿ ರಚನೆಯಾದ ವುಡ್ಸ್ ವರದಿಯು ಅನೇಕ ಮಹತ್ವದ ಶಿಫಾರಸ್ಸುಗಳನ್ನು

ಒಳಗೊಂಡಿದೆ. ಇದು ಭಾರತೀಯರ ಪ್ರಚಲಿತ ಶಿಕ್ಷಣದ ಬುನಾದಿಯಾಗಿದೆ ಎಂದು ಹೇಳಬಹುದು. ಇದು ಭಾರತೀಯ ಶಿಕ್ಷಣದ ಒಂದು ಭದ್ರ ಬುನಾದಿ ಅಥವಾ ಮೈಲುಗಲ್ಲಾಗಿದ್ದರೂ ಭಾಷಾ ಬೋಧನೆಯ ವಿಷಯದಲ್ಲಿ ಈ ವಿಚಾರ ಹೇಳಿದೆ.

ಅಂದು ಭಾರತೀಯ ಭಾಷೆ ಅಭಿವೃದ್ಧಿಯಾಗಿರಲಿಲ್ಲ. ಅದರ ಕೊರತೆಯನ್ನು ಗಮನ ದಲ್ಲಿಟ್ಟುಕೊಂಡು ಆಯೋಗ ಇಂಗ್ಲೀಷ್ ಭಾಷೆಯನ್ನು ಮಾಧ್ಯಮವಾಗಿ ಮಾಡಲು ಹೇಳಿತು. ಆದರೆ ಇಂಗ್ಲೀಷ್ ಭಾಷೆಯನ್ನು ಶಿಕ್ಷಣದ ಮಾಧ್ಯಮವನ್ನಾಗಿ ಉಪಯೋಗಿಸುವುದು. ಗಂಡಾಂತರಕಾರಿ ಯಾಗುವುದು ಈ ಕಾರಣವಾಗಿ ಇದಕ್ಕನುಸಾರವಾಗಿ ಸ್ಥಳೀಯ ದೇಶಿಯ ಭಾಷೆಗಳನ್ನು ಕೂಡಾ ಶಿಕ್ಷಣದ ಮಾಧ್ಯಮದಂತೆ ಉಪಯೋಗಿಸುವುದು ಒಳ್ಳೆಯದು ಎಂದು ಹೇಳಿತು."[೧೯] ಹೀಗಾಗಿ ಯುರೋಪಿಯನ್ನರ ಜ್ಞಾನವನ್ನು ಭಾರತೀಯರಲ್ಲಿ ಒಡ ಮೂಡಿಸಲು ಇಂಗ್ಲೀಷ್ ಭಾಷೆ ಹಾಗೂ ದೇಶಿಯ ಭಾಷೆಗಳೆರಡು ಬೋಧನಾ ಮಾಧ್ಯಮಗಳೆಂದು ಭಾವಿಸಲಾಯಿತು.

## ಭಾರತೀಯ ಶಿಕ್ಷಣ ಆಯೋಗ/ಹಂಟರ್ ಆಯೋಗ

೧೮೮೨ರಲ್ಲಿ ರಚನೆಯಾದ ಭಾರತೀಯ ಶಿಕ್ಷಣ ಆಯೋಗವು ಪ್ರಾಥಮಿಕ ಶಿಕ್ಷಣದತ್ತ ಗಮನಹರಿಸಿತು. ನಿಜವಾಗಿಯು ಪ್ರಾಥಮಿಕ ಶಿಕ್ಷಣವೇ ಅದರ ಪ್ರಮುಖವಾದ ತನಿಖಾ ಕ್ಷೇತ್ರವಾಗಿತ್ತು. ಪ್ರಸಕ್ತ ದಿನಗಳಲ್ಲಿ ಪ್ರಾಥಮಿಕ ಶಿಕ್ಷಣದ ಮಹತ್ವವನ್ನು ಅರಿತ ಆಯೋಗವು ಪ್ರಾಶಿಕ್ಷಣದ ಯೋಜನೆ, ಸಂಘಟನೆ, ಪಠ್ಯಕ್ರಮ, ಶಿಕ್ಷಕರ ತರಬೇತಿ, ಅನುಧಾನ ಸಂಹಿತಿ ಮುಂತಾದ ವಿಷಯಗಳು ಅಲ್ಲದೆ ಪ್ರಾಥಮಿಕ ಶಿಕ್ಷಣವನ್ನು ಯಾವ ಮಾಧ್ಯಮದಲ್ಲಿ ಬೋಧನೆ ಮಾಡಬೇಕು ಎಂಬುದರ ಬಗ್ಗೆಯು ಹೇಳಿದೆ. ಇದು "ಪ್ರಾಥಮಿಕ ಶಿಕ್ಷಣದ ಬೋಧನೆಯು ಮಾತೃಭಾಷೆಯಲ್ಲಿ ನಡೆಯಬೇಕು".[೨೦] ಎಂದಿದ್ದಾರೆ. ಅಲ್ಲದೇ ಇದು ಕೇವಲ ವಿಶ್ವ ವಿದ್ಯಾಲಯ ಶಿಕ್ಷಣಕ್ಕೆ ಏರಬೇಕದ ಏಣಿಯಂತಿರದೆ ಜನ ಸಾಮಾನ್ಯರ ಪ್ರಯೋಗಿಕ ಜೀವನಕ್ಕೆ ಹತ್ತಿರವಾಗಿರಬೇಕು ಮತ್ತು ಅವರ ಅವಶ್ಯಕತೆಗಳನ್ನು ಪೂರೈಸುವಂತಿರಬೇಕು ಎಂದಿದೆ.

## ೧೯೦೪ರ ಭಾರತ ಸರ್ಕಾರದ ಗೊತ್ತುವಳಿ

ಲಾರ್ಡ್ ಕರ್ಜನ್‌ರವರು ಅತ್ಯಂತ ಮೇಧಾವಿ, ಸಮರ್ಥ, ದಕ್ಷ ಆಡಳಿತಗಾರರು, ಶಿಕ್ಷಣ ಪ್ರೇಮಿಯಾಗಿದ್ದರು. ಅವರು ಭಾರತದ ಶಿಕ್ಷಣ ವ್ಯವಸ್ಥೆಯನ್ನು ಸುಧಾರಿಸಲು ಪ್ರಯತ್ನಿಸಿದರು. ಅಲ್ಲದೆ ೧೯೦೨ರಲ್ಲಿ ರ‍್ಯಾಲೆ ನೇತೃತ್ವದಲ್ಲಿ ಶಿಕ್ಷಣ ವ್ಯವಸ್ಥೆಯ ಉತ್ತಮವತೆಗಾಗಿ ಒಂದು ಆಯೋಗವನ್ನು ರಚಿಸಿದರು. ಇದು ೧೯೦೪ರಲ್ಲಿ ವರದಿಯನ್ನು ಸಲ್ಲಿಸಿತು. ಅದರಲ್ಲಿ ಪ್ರಾಥಮಿಕ ಶಿಕ್ಷಣದ ಬೋಧನಾ ಮಾಧ್ಯಮ ಕುರಿತು ಈ ರೀತಿಯಾಗಿ ಹೇಳಿದೆ. "ಪ್ರಾಥಮಿಕ ಶಿಕ್ಷಣ ಮಗುವಿನ ಮಾತೃಭಾಷೆಯಲ್ಲಿ

ನೀಡಬೇಕು"[೨೧] ಎಂದಿದ್ದಾರೆ. ಅಂದರೆ ಮಾತೃಭಾಷೆ ಬೋಧನಾ ಮಾಧ್ಯಮವಾಗಬೇಕು ಎಂದು ವರದಿಯಲ್ಲಿ ತಿಳಿಸಲಾಗಿದೆ.

ಪ್ರಾಥಮಿಕ ಹಂತದವರೆಗೂ ಮಾತೃಭಾಷೆ ಬೋಧನಾ ಮಾಧ್ಯಮವಾಗಿರಬೇಕು. ಹಿರಿಯ ಪ್ರಾಥಮಿಕ ಹಂತದವರೆಗೂ ಇಂಗ್ಲೀಷ್‌ನ್ನು ಒಂದು ಭಾಷೆಯಾಗಿ ಅಭ್ಯಸಿಸಬೇಕು, ಹಿರಿಯ ಮಾಧ್ಯಮಿಕ ಹಂತದಲ್ಲಿ ಇಂಗ್ಲೀಷ್ ಬೋಧನಾ ಮಾಧ್ಯಮವಾಗಬೇಕು ಎಂದಿದ್ದಾರೆ.

### ಕಲ್ಕತ್ತಾ ವಿಶ್ವವಿದ್ಯಾಲಯ ಆಯೋಗ

ಕಲ್ಕತ್ತಾ ವಿಶ್ವವಿದ್ಯಾಲಯ ಆಯೋಗವು ಬ್ರಿಟೀಷ್ ಕಾಲದ ಭಾರತ ಶಿಕ್ಷಣದ ಇತಿಹಾಸ ಉಚ್ಚ ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಒಂದು ಮೈಲುಗಲ್ಲಾಗಿ ನಿಂತಿದೆ. ಈ ಆಯೋಗವು ೧೯೧೭ರಲ್ಲಿ ಲೀಡ್ಸ್ ವಿಶ್ವ ವಿದ್ಯಾಲಯದ ಉಪಕುಲಪತಿಗಳಾದಂತಹ ಸರ್ ಮೈಕಲ್ ಸ್ಯಾಂಡ್ಲರ್‌ರವರ ಅಧ್ಯಕ್ಷತೆಯಲ್ಲಿ ರಚನೆಯಾಗಿತ್ತು ಇದು. "ಮಾಧ್ಯಮಿಕ ಶಾಲಾ ಹಂತದಲ್ಲಿ ಮಾತೃಭಾಷೆಯು ಶಿಕ್ಷಣದ ಮಾಧ್ಯಮವಾಗಿರಬೇಕು"[೨೨] ಎಂದು ಹೇಳಿದೆ.

### ದ್ವಿದಳ ಪದ್ಧತಿ ಅಡಿಯಲ್ಲಿ ಶಿಕ್ಷಣ

೧೯೨೧-೩೭ ರಲ್ಲಿ ವೈಸರಾಯ್ ಜೇಮ್ಸ್‌ಫರ್ಡ್‌ನು ಜಾರಿಗೆ ತಂದ ದ್ವಿದಳ ಪದ್ಧತಿಯಲ್ಲಿ ಅಡಿಯಲ್ಲಿ "ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣದಲ್ಲಿ ಮಾತೃಭಾಷೆ ಬೋಧನಾ ಮಾಧ್ಯಮವಾಯಿತು"[೨೩] ಎಂದು ಹೇಳಿದ್ದಾರೆ.

### ಸಾರ್ಜಂಟ್ ವರದಿ

ಎರಡನೇ ಮಹಾಯುದ್ಧದ ನಂತರ ಇಂಗ್ಲೆಂಡಿನಲ್ಲಾದ ಶೈಕ್ಷಣಿಕ ಸಾಧನೆಗಳ ಮಟ್ಟವನ್ನು ಭಾರತದಲ್ಲಿ ಸಾಧಿಸುವಂತೆ ಮಾಡುವ ಉದ್ದೇಶದಿಂದ ೧೯೪೪ರಲ್ಲಿ ಸಾರ್ಜೆಂಟ್ ವರದಿ ತನ್ನ ಶಿಫಾರಸ್ಸನ್ನು ಸರ್ಕಾರಕ್ಕೆ ಸಲ್ಲಿಸಿತು. ಇದು ಬೋಧನಾ ಮಾಧ್ಯಮದ ಬಗ್ಗೆ ಈ ರೀತಿ ಹೇಳಿದೆ. "ಪ್ರಾಥಮಿಕ ಶಿಕ್ಷಣದ ಜೊತೆಗೆ ಮಾಧ್ಯಮಿಕ ಶಿಕ್ಷಣವು ವಿದ್ಯಾರ್ಥಿಗಳ ಮಾತೃಭಾಷೆಯಲ್ಲಿ ನಡೆಯಬೇಕು. ಇಂಗ್ಲೀಷ್ ಭಾಷೆಯನ್ನು ಕಡ್ಡಾಯವಾಗಿ ದ್ವಿತೀಯ ಭಾಷೆಯಾಗಿ ಬೋಧಿಸಬೇಕು." ಎಂದಿದ್ದರು.

### ವುಡ್ಸ್ ವರದಿ

ಮ್ಯಾಗ್ನಕಾರ್ಟ್ ಎಂದೇ ಹೆಸರಾಗಿರುವ ೧೮೫೪ರಲ್ಲಿ ವುಡ್ಸ್ ವರದಿಯು ಜಾರಿಗೆ ಬಂದಿತು. ಇದು ಭಾಷಾ ಬೋಧನೆಯನ್ನು ಕುರಿತು ಈ ರೀತಿ ಹೇಳಿದೆ "ಮಾತೃಭಾಷೆಯಲ್ಲಿ ಶಿಕ್ಷಣ ನೀಡಬೇಕು"[೨೪] ಮಾತೃಭಾಷೆಯಲ್ಲಿ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಲಾಗದ ವ್ಯಕ್ತಿಯ ಶಿಕ್ಷಣವು ದೋಷದಿಂದ ಮುಕ್ತವಾಗಲಾರದೆಂದು ಅಭಿಪ್ರಾಯಪಟ್ಟಿದೆ. ಅಲ್ಲದೆ ಮಾತೃಭಾಷೆಯೇ ಶಿಕ್ಷಣದ ಮಾಧ್ಯಮವಾಗಿರಬೇಕು ಎಂದಿದೆ.

ಸ್ವಾತಂತ್ರ ಪೂರ್ವದ ಶಿಕ್ಷಣ ಆಯೋಗಗಳ ಪ್ರಮುಖ ಉದ್ದೇಶ ದೇಶಿಯ ಭಾಷೆಗಳನ್ನು ಕಡೆಗಣಿಸಿ ಇಂಗ್ಲೀಷ್ ಭಾಷೆಯನ್ನು ಬೋಧನ ಮಾದ್ಯವನ್ನಾಗಿಸಿ ಭಾರತೀಯರಲ್ಲಿ ಯೂರೋಪಿಯನ್ನರ ಜ್ಞಾನವನ್ನು ನೀಡಲಾರಂಭಿಸಿದರು. ಹಲವು ರೀತಿಯಿಂದ ಭಾರತೀಯರನ್ನು ಜಯಿಸಿದ ಬ್ರಿಟೀಷರು ಸಾಂಸ್ಕೃತಿಕ ಕ್ಷೇತ್ರದಲ್ಲಿ ಪಾದಾರ್ಪಣೆ ಮಾಡಿದರು. ಅದಕ್ಕಾಗಿ ಶಿಕ್ಷಣವನ್ನು ತಮ್ಮ ಇಚ್ಛೆ ಪರಿವರ್ತನೆಗೆ ಉಪಯೋಗಿಸಿದರು. ಭಾರತೀಯ ಭಾಷೆಗಳು ಶಿಕ್ಷಣ ನೀಡುವಲ್ಲಿ ಅಷ್ಟೊಂದು ಅಭಿವೃದ್ಧಿ ಸಾಧಿಸಿಲ್ಲವೆಂದು ತಮ್ಮದೇ ಆದ ಇಂಗ್ಲೀಷ್ ಭಾಷೆಯನ್ನು ಬೋಧನಾ ಮಾಧ್ಯಮವನ್ನಾಗಿ ಜಾರಿಗೆ ತಂದರು. ಹೀಗಾಗಿ ಬ್ರಿಟೀಷ್ ಶಿಕ್ಷಣವು ಸೃಜನಾತ್ಮಕ ಕ್ರಿಯಗಳನ್ನೆಲ್ಲ ಅಲ್ಲಗಳೆದು ಭಾರತೀಯರನ್ನು ನಿಷ್ಕ್ರಿಯರನ್ನಾಗಿ ಮಾಡುವ ಉದ್ದೇಶವಿಟ್ಟುಕೊಂಡಿತು. ಸದಾ ಕಾಲವು ಭಾರತವು ಬ್ರಿಟೀಷ್‌ರ ಸಾಮ್ರಾಜ್ಯದ ಅಡಿಯೊಳಗಿರಬೇಕೆಂಬ ಸಂಕಲ್ಪವು ಸುಲಭವಾಗಿ ಈಡೇರಬೇಕಾಗಿತ್ತು. ಇದರಿಂದ ಇಂಗ್ಲೀಷ್ ಸಾಹಿತ್ಯ, ಸಂಸ್ಕೃತಿಗಳನ್ನು ಭಾರತೀಯರಲ್ಲಿ ಬಿಂಬಿಸುವ ಮಹದಾಸೆ ಅವರದಾಗಿತ್ತು ಹೀಗೆ ಆಂಗ್ಲ ಶಿಕ್ಷಣ ಪಡೆದ ಭಾರತೀಯರು ಪ್ರತಿಯೊಂದರಲ್ಲಿಯೂ ಯೂರೋಪಿಯನರನ್ನು ಅನುಸರಿಸಿದರು. ಇಂಗ್ಲೀಷ್ ಭಾಷೆಯ ಪರವಾಗಿದ್ದ ಮೇಕಾಲೆ ಬೋಧನಾ ಮಾಧ್ಯಮವಾಗಿ ಸ್ಥಳೀಯ ಭಾಷೆಯನ್ನು ನಿರಾಕರಿಸಿ ಆಂಗ್ಲ ಭಾಷೆಯನ್ನು ಬೋಧನಾ ಮಾಧ್ಯಮವಾಗಿ ಪರಿಗಣಿಸಿದರು. ನಂತರ ಬಂದ ಹಂಟರ್ ಆಯೋಗವು ಪ್ರಾಥಮಿಕ ಶಿಕ್ಷಣದ ಕಡೆಗೆ ಹೆಚ್ಚು ಒಲವನ್ನು ತೋರಿತು. ಪ್ರಾಥಮಿಕ ಶಿಕ್ಷಣವು ಮಾತೃಭಾಷೆಗಳಲ್ಲಿ ನಡೆಯಬೇಕೆಂದಿತು.ಹೀಗೆ ಮುಂದೆ ಬಂದಂತಹ ಎಲ್ಲಾ ಆಯೋಗಗಳು ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದಲ್ಲಿ ಮಾತೃಭಾಷೆಯನ್ನೆ ಮಾಧ್ಯಮವಾಗಿಸಿದರೆ ಇಂಗ್ಲೀಷ್‌ನ್ನು ದ್ವಿತೀಯ ಭಾಷೆಯನ್ನಾಗಿ ಪರಿಗಣಿಸಿದರು.

**ಸ್ವಾತಂತ್ರ ನಂತರದ ಪ್ರಮುಖ ಆಯೋಗಗಳಲ್ಲಿ ಕಲಿಕೆಯ ಮಾಧ್ಯಮ ಕುರಿತ ಚಿಂತನೆಗಳು**

**ರಾಧಕೃಷ್ಣನ್ ಆಯೋಗ/ವಿಶ್ವವಿದ್ಯಾಲಯ ಆಯೋಗ**

ದೇಶದ ಈಗಿನ ಮತ್ತು ಮುಂದಿನ ಅಗತ್ಯತೆಗಳಿಗೆ ಸೂಕ್ತವಾಗಬಲ್ಲ ಸುಧಾರಣೆಗಳನ್ನು ಸ್ಥಾಪಿಸಲು ಮತ್ತು ವಿಶ್ವವಿದ್ಯಾಲಯ ಮಟ್ಟದಲ್ಲಿ ಸಲಹೆಗಳನ್ನು ನೀಡಲು ಕೇಂದ್ರ ಸರ್ಕಾರವು ನವ್ಹೆಂಬರ್ ೦೪-೧೯೪೮ರಲ್ಲಿ ಡಾ. ಸರ್ವಪಲ್ಲಿ ರಾಧಾಕೃಷ್ಣನ್‌ರವರ ನೇತೃತ್ವದಲ್ಲಿ ಸಮಿತಿ ರಚಿಸಲಾಯಿತು. ಇದು ಉನ್ನತ ಶಿಕ್ಷಣಕ್ಕೆ ಹಲವಾರು ಶಿಫಾರಸ್ಸುಗಳು ನೀಡಿದೆ. ಅಲ್ಲದೇ ಬೋಧನಾ ಮಾಧ್ಯಮ ಕುರಿತು ಮೂರು ಭಾಷೆಯಲ್ಲಿ ಪ್ರಭುತ್ವವಾಗಿರಬೇಕು, ಕನ್ನಡ ಪ್ರಾದೇಶಿಕ ಭಾಷೆಯಾಗಿ, ರಾಷ್ಟ್ರೀಯ ಭಾಷೆಯಾಗಿ "ಹಿಂದಿ", ವ್ಯವಹಾರಿಕ ಭಾಷೆಯಾಗಿ ಇಂಗ್ಲೀಷನ್ನು ಕಲಿಯಬೇಕು"[೨೫] ಎಂದಿದ್ದಾರೆ.

## ಮಾಧ್ಯಮಿಕ ಶಿಕ್ಷಣ ಆಯೋಗ

೧೯೫೨ ಸೆಪ್ಟೆಂಬರ್ ೨೩ರಂದು ಮಾಧ್ಯಮಿಕ ಶಿಕ್ಷಣ ವ್ಯವಸ್ಥೆಯನ್ನು ಪರಿಶೀಲಿಸಲು ಹಾಗೂ ಅದರ ಪುನರ್ ವ್ಯವಸ್ಥೆ ಹಾಗೂ ಸುಧಾರಣೆಗೆ ಕ್ರಮಗಳನ್ನು ಸಲಹೆ ಮಾಡಲು CABE ಶಿಫಾರಸ್ಸಿನ ಅನ್ವಯ ಭಾರತ ಸರ್ಕಾರ ಆಗಿನ ಮದ್ರಾಸಿನ ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಖ್ಯಾತ ಶಿಕ್ಷಣವೇತ್ತ ಡಾ॥ ಲಕ್ಷ್ಮಣಸ್ವಾಮಿ ಮೊದಲಿಯಾರ್ ಅವರನ್ನು ಆಯೋಗವು ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ಈ ಆಯೋಗ ಆಗಿನ ಮಾಧ್ಯಮಿಕ ಶಿಕ್ಷಣದ ಹಲವು ದೋಷಗಳನ್ನು ಬೋಧನಾ ಮಾಧ್ಯಮದ ಬಗ್ಗೆ ಕುರಿತು ತನ್ನದೇ ಆದ ಶಿಫಾರಸ್ಸು ನೀಡಿದೆ. ಬೋಧನಾ ಮಾಧ್ಯಮ ಕುರಿತು "ಮಾತೃಭಾಷೆ/ರಾಜ್ಯಭಾಷೆ ಬೋಧನಾ ಮಾಧ್ಯಮವಾಗಿರಬೇಕು" ಎಂದು ಹೇಳಿದೆ. ಕಿರಿಯ ಮಾಧ್ಯಮಿಕ ಹಂತದಲ್ಲಿ ಕನಿಷ್ಠ ಎಂದರೆ ಎರಡು ಭಾಷೆಗಳನ್ನು ಕಲಿಸಬೇಕು"[೨೬] ಎಂದು ಹೇಳಿದೆ.

## ಭಾರತೀಯ ಶಿಕ್ಷಣ ಆಯೋಗ

ಭಾರತದ ಸರ್ಕಾರದ ಶಿಕ್ಷಣವು ಸಂಪೂರ್ಣ, ಸಮಗ್ರ ಬದಲಾವಣೆಗೆ ೧೪-೦೭-೧೯೬೪ ರಂದು ಖ್ಯಾತ ವಿಜ್ಞಾನಿ ಹಾಗೂ ಶಿಕ್ಷಣವೇತ್ತ ಡಾ॥ ಡಿ.ಎಸ್.ಕೊಠಾರಿ ಯವರ ಅಧ್ಯಕ್ಷತೆಯಲ್ಲಿ "ರಾಷ್ಟ್ರೀಯ ಶಿಕ್ಷಣ ಆಯೋಗವನ್ನು ನೇಮಿಸಿತು. ಇದು ಬೋಧನಾ ಮಾಧ್ಯಮವನ್ನು ಕುರಿತು ಈ ರೀತಿ ಹೇಳಿದೆ "ಒಂದು ಭಾಷೆಯನ್ನು ಶಿಕ್ಷಣ ಮಾಧ್ಯಮವಾಗಿ ಮಾಡಬೇಕಾದರೆ ಆ ಭಾಷೆ ಮೂರು ಉದ್ದೇಶಗಳನ್ನು ಪೂರೈಸಬೇಕು.

೧. "ಆ ಭಾಷೆಯಿಂದ ವಿದ್ಯಾರ್ಥಿಗಳು ಸುಲಭವಾಗಿ ಜ್ಞಾನವನ್ನು ಪಡೆಯಲು ಸಾಧ್ಯವಾಗಿರಬೇಕು.
೨. ಆ ಭಾಷೆಯಲ್ಲಿ ಸ್ಪಷ್ಟವಾಗಿ, ಖಚಿತವಾಗಿ ಅವರ ಜ್ಞಾನ ಪಡೆಯಲು ಸಾಧ್ಯವಾಗಬೇಕು.
೩. ಆ ಭಾಷೆಯಲ್ಲಿ ನಿರ್ದಿಷ್ಟವಾಗಿ, ಶಕ್ತಿಪೂರ್ಣವಾಗಿ ಆಲೋಚನೆ ಮಾಡಲು ಅವರಿಗೆ ಸಾಧ್ಯವಾಗಬೇಕು."[೨೭]

## ರಾಷ್ಟ್ರೀಯ ಶಿಕ್ಷಣ ನೀತಿ

ಭಾರತದ ಸರ್ಕಾರವು ರಾಷ್ಟ್ರೀಯ ಹೊಸ ಶಿಕ್ಷಣ ನೀತಿಯನ್ನು ತನ್ನ ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆಯ ಮುಖಾಂತರ ರಾಷ್ಟ್ರೀಯ ಶಿಕ್ಷಣ ಅನುಧಾನ ಹಾಗೂ ಪ್ರಶಿಕ್ಷಣ ಪರಿಷತ್ತಿನ ಮೂಲಕ ರೂಪಿಸಿ ಅದನ್ನು ಮಾಜಿ ಪ್ರಧಾನಮಂತ್ರಿ ದಿ॥ ರಾಜೀವ್ ಗಾಂಧಿ ನೇತೃತ್ವದಲ್ಲಿ ಸಂಸತ್ತಿನಲ್ಲಿ ಮಂಡಿಸಲ್ಪಟ್ಟಿತು. ಒಪ್ಪಿಗೆಯನ್ನು ಹಾಗೂ ಪಡೆಯಿತು. ನಾಲ್ಕು ಹಂತಗಳಲ್ಲಿ ತನ್ನ ಕಾರ್ಯಾಚರಣೆಯನ್ನು ಮಾಡಲು ಪ್ರಾರಂಭಿಸಿತು. ಅಲ್ಲದೇ ಭಾಷಾ ಬೋಧನೆ ಕುರಿತು "ಪ್ರಾದೇಶಿಕ

ಭಾಷೆ, ರಾಷ್ಟ್ರೀಯ ಭಾಷೆ, ಅಂತರಾಷ್ಟ್ರೀಯ ಭಾಷೆಗಳನ್ನು ಮಗು ಕಲಿಯಬೇಕು ಎಂದು ಹೇಳುತ್ತದೆ."[೨೮]

**ಗೋಕಾಕ್ ವರದಿ**

ಈ ಆಯೋಗವು ಪ್ರಾಥಮಿಕ ಮತ್ತು ಪ್ರೌಢಶಾಲಾ ಹಂತದಲ್ಲಿ ಕನ್ನಡ ಭಾಷೆಯನ್ನು ಯಾರಿಗೆ? ಯಾವ ತರಗತಿಯಿಂದ ಕಲಿಸಬೇಕು? ಎಂಬುದರ ಬಗ್ಗೆ ಹಲವಾರು ಚರ್ಚಾಸ್ಪದ ವಿಚಾರಗಳನ್ನು ನೀಡುತ್ತದೆ. ಗೋಕಾಕ್ ಚಳುವಳಿಯ ಸುದೀರ್ಘ ಹೋರಾಟದಿಂದ ೧೯೮೯ರಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಸಿ "ಕನ್ನಡ ಭಾಷೆಯೇ ಪ್ರಥಮ ಭಾಷೆಯಾಗಿರಬೇಕೆಂದು" ಶಿಫಾರಸ್ಸು ಮಾಡಿತು. ಆದರೆ ೧೯೮೧ರಲ್ಲಿ ಸರ್ಕಾರವು ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಣದಲ್ಲಿ ಭಾಷಾ ಅಧ್ಯಯನ ಬಗ್ಗೆ ತನ್ನ ನೀತಿಯನ್ನು ಈ ರೀತಿ ನಿರೂಪಿಸಿದೆ.

೧. ಒಂದರಿಂದ ನಾಲ್ಕನೇ ತರಗತಿಯವರೆಗೆ ಮಾತೃಭಾಷೆಯೇ ಶಿಕ್ಷಣ ಮಾಧ್ಯಮವಾಗಿರಬೇಕು.

೨. ಮೂರನೇ ತರಗತಿಯಿಂದ ಕನ್ನಡೇತರ ವಿದ್ಯಾರ್ಥಿಗಳಿಗೆ ಅವರ ಮಾತೃಭಾಷೆಯ ಜೊತೆ ಕನ್ನಡವನ್ನೂ ಐಚ್ಛಿಕ ವಿಷಯವಾಗಿ ಕಲಿಸಲಾಗುತ್ತದೆ. ಆದರೆ ಕನ್ನಡವು ಪರೀಕ್ಷಾ ವಿಷಯವಾಗಿರುವುದಿಲ್ಲ.

೩. ಮಾತೃಭಾಷೆಯ ಜೊತೆ ಎರಡನೇ ಭಾಷೆಯನ್ನು ಐದನೇ ತರಗತಿಯಿಂದ ಕಲಿಯುವ ವ್ಯವಸ್ಥೆ ಎಲ್ಲೆಡೆ ಇದೆ. ಅದರಂತೆ ಐದನೆ ತರಗತಿಯಿಂದ ಕನ್ನಡ ಮಗುವು ಕನ್ನಡೇತರ ಭಾಷೆಯೊಂದನ್ನು, ಕನ್ನಡೇತರ ಮಗುವು ಕನ್ನಡವನ್ನು ಕಡ್ಡಾಯವಾಗಿ ಕಲಿಸಬೇಕು. ಅದು ಪರೀಕ್ಷಾ ವಿಷಯವು ಆಗಿರುತ್ತದೆ.

**ಪ್ರೌಢಶಾಲೆಗಳಲ್ಲಿ**

ಪ್ರೌಢಶಾಲೆಗಳಲ್ಲಿ ಮೂರು ಭಾಷೆಗಳ ಅಧ್ಯಯನ ಕಡ್ಡಾಯ. ೧೨೫ ಅಂಕಗಳ ಐಚ್ಛಿಕ ಪ್ರಥಮ ಭಾಷೆ ಕನ್ನಡ. ೧೦೦ ಅಂಕಗಳ ಇನ್ನೆರಡು ಭಾಷೆಗಳು ಈ ಮೂರು ಭಾಷೆಗಳಲ್ಲೂ ತೇರ್ಗಡೆಯಾಗಬೇಕು. ಈ ಆಜ್ಞೆಯನ್ನು ಕರ್ನಾಟಕ ಉಚ್ಚನ್ಯಾಯಾಲಯವು ತನ್ನ ೨೫-೧೧-೧೯೮೯ ತೀರ್ಪಿನಲ್ಲಿ ರದ್ದು ಮಾಡಿರುವುದು.[೩೦]

**ಈಗಿನ ಭಾಷಾ ಸೂತ್ರ ೧೯-೦೬-೧೯೮೯ರ ಸರ್ಕಾರಿ ಆಜ್ಞೆ ಪ್ರಕಾರ**

**ಪ್ರಾಥಮಿಕ ಶಾಲೆಗಳಲ್ಲಿ**

೧. "ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ಎಂದರೆ ಒಂದರಿಂದ ನಾಲ್ಕನೇ ತರಗತಿಯ ವರೆಗೆ

ಮಾತೃಭಾಷೆ ಕಡ್ಡಾಯ. ಕನ್ನಡೇತರರಿಗೆ ಮೂರು ಹಾಗೂ ನಾಲ್ಕನೇ ತರಗತಿಯಲ್ಲಿ ಕನ್ನಡ ಕಲಿಸುವ ಅವಕಾಶ ಕಲ್ಪಿಸಲಾಗಿದೆ. ಕಲಿಕೆ ಹಾಗೂ ಪರೀಕ್ಷೆ ಸ್ಫೂರ್ತಿ ಸ್ವ-ಇಚ್ಛೆಗನುಗುಣವಾಗಿ.

೨. ಐದನೇ ತರಗತಿಯಿಂದ ಏಳನೇ ತರಗತಿಯ ವರೆಗೆ ಕನ್ನಡೇತರ ವಿದ್ಯಾರ್ಥಿಗಳಿಗೆ ಕನ್ನಡ ಕಡ್ಡಾಯ. ಕನ್ನಡ ವಿದ್ಯಾರ್ಥಿಗಳಿಗೆ ಮತ್ತೊಂದು ಭಾಷೆ.

೩. ಮೊದಲ ಎರಡು ಭಾಷೆಗಳಲ್ಲದೇ ಮೂರನೇ ಭಾಷೆ ಈ ಭಾಷೆಯ ತರಗತಿಗಳಿಗೆ ಹಾಜರಾತಿ ಕಡ್ಡಾಯವಾದರೂ, ಪರೀಕ್ಷೆಯಲ್ಲಿ ಉತ್ತೀರ್ಣತೆ ಅವಶ್ಯಕವಲ್ಲ."

**ಪ್ರೌಢಶಾಲೆಗಳಲ್ಲಿ**

ಎಂಟರಿಂದ ಹತ್ತನೇ ತರಗತಿಯವರೆಗೆ ಎಲ್ಲ ವಿದ್ಯಾರ್ಥಿಗಳು ಎರಡು ಮೂರು ಭಾಷೆಗಳ ಅಭ್ಯಾಸ ಹಾಗೂ ತೇರ್ಗಡೆ ಕಡ್ಡಾಯ. ೧೨೫ ಅಂಕಗಳಿಗೆ ಮೊದಲನೇ ಭಾಷೆ, ೧೦೦ ಅಂಕಗಳಿಗೆ ಉಳಿದ ಭಾಷೆಯಾಗಿರಬೇಕು ಎಂಬ ಶಿಫಾರಸ್ಸನ್ನುಮಾಡಿದೆ.[೩೧]

**ಬೋಧನಾ ಮಾಧ್ಯಮ ಕುರಿತು ಶಿಕ್ಷಣತಜ್ಞರು ಹಾಗೂ ಭಾಷಾ ವಿಜ್ಞಾನಿಗಳ ಚಿಂತನೆಗಳು**

ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯೇ ಬೋಧನಾ ಮಾಧ್ಯಮವಾಗಬೇಕೆಂದು ಪ್ರಾಚೀನ ಕಾಲದಿಂದಲೂ ಚರ್ಚೆ ನಡೆಯುತ್ತವೆ. ಅಲ್ಲದೇ ಹಲವಾರು ಭಾಷಾ ವಿಜ್ಞಾನಿಗಳು, ಶಿಕ್ಷಣ ತಜ್ಞರು, ಸಮಾಜ ಶಾಸ್ತ್ರಜ್ಞರು, ಕಲಿಕೆಯ ಮಾಧ್ಯಮದ ಬಗ್ಗೆ ತಮ್ಮದೇ ಆದ ವಿಚಾರಗಳನ್ನು ಹೇಳುತ್ತಾಬಂದಿದ್ದಾರೆ. ಅವರು ಮಾತೃಭಾಷೆ ಎಂದರೆ ಯಾವುದು? ಅದನ್ನು ಯಾವ ಹಂತದಿಂದ ಯಾವ ಹಂತದ ವರೆಗೆ ಕಲಿಸಬೇಕು? ಹೇಗೆ ಕಲಿಸಬೇಕು? ಅದರ ಪ್ರಯೋಜನಗಳನ್ನು ಕುರಿತು ಚರ್ಚೆ ನಡೆಸುತ್ತಾ ಬಂದಿದ್ದಾರೆ. ಅವುಗಳಲ್ಲಿ ಮುಖ್ಯವಾದ ಕೆಲವು ಚಿಂತನೆಗಳ ಬಗ್ಗೆ ತಿಳಿಯುವುದು ಸೂಕ್ತವಾಗಿದೆ.

ಒಂದು ಸಮಾಜದ ಬಹು ಸಂಖ್ಯಾತರಾಡುವ ಭಾಷೆಯೇ ಆ ಸಮಾಜದ ಮಾತೃಭಾಷೆ. ಆ ಭಾಷೆಯು ಅಲ್ಲಿನ ಜನರನ್ನು ಸಾಮಾಜಿಕವಾಗಿ, ಭಾವನಾತ್ಮಕವಾಗಿ, ಸಾಂಸ್ಕೃತಿಕವಾಗಿ ಒಗ್ಗೂಡಿಸುತ್ತದೆ. ಆ ಜನಾಂಗದ ಜೀವವಾಹಿನಿಯಾಗಿ ಎಲ್ಲಾ ಜನರನ್ನೂ ಸಂಪರ್ಕಿಸಲಾಗುತ್ತದೆ. ಆ ಸಮಾಜದ ಸಾಮಾಜಿಕ, ಶೈಕ್ಷಣಿಕ ಮತ್ತು ಆಡಳಿತ ಕ್ಷೇತ್ರಗಳಲ್ಲಿ ಆ ಭಾಷೆಯು ಮಹತ್ವದ ಪಾತ್ರ ವಹಿಸುತ್ತದೆ. ಅದುದರಿಂದ ಒಂದು ಸಮಾಜದ ಬಹು ಸಂಖ್ಯಾತರ ಆಡುಭಾಷೆಯು ಆ ಸಮಾಜದ ಮಾತೃಭಾಷೆಯಾಗಿರುತ್ತದೆ. ಸರ್ವಜನರ ಸಮಸ್ತ ಕ್ಷೇತ್ರಗಳಲ್ಲೂ ಆ ಭಾಷೆಗೆ ಪ್ರಥಮ ಸ್ಥಾನ ಲಭ್ಯವಾಗುತ್ತದೆ. ಡಾ॥ ಜಿ.ಎಸ್.ಶಿವರುದ್ರಪ್ಪ ನವರು ಅಭಿಪ್ರಾಯಪಡುವಂತೆ "ಯಾವುದೇ ಭಾಷೆ ಒಂದು ಪ್ರದೇಶದಲ್ಲಿ ಪ್ರಥಮ ಭಾಷೆಯಾಗಬೇಕಾದರೆ, ಅದು ಅಲ್ಲಿನ ಬಹು ಸಂಖ್ಯಾತರ

ಮಾತೃಭಾಷೆಯಾಗಿರಬೇಕು". ಅಲ್ಲಿನ ಜನರ ಎಲ್ಲಾ ಹಂತಗಳ ವ್ಯವಹಾರಕ್ಕೆ ಆ ಭಾಷೆ ಸಲ್ಲಿಸುವಂತಿರಬೇಕು. ಅಂದರೆ ಒಂದು ಪ್ರದೇಶದ ಜನ ಸಾಮಾನ್ಯರೆಲ್ಲರ ಜನ ಜೀವನದಲ್ಲಿ ಹಾಸುಹೊಕ್ಕಾಗಿರುವ ಭಾಷೆಯೇ ಅಲ್ಲಿನ ಮಾತೃಭಾಷೆ. ಈ ಭಾಷೆಗೆ ಪ್ರಥಮ ಆದ್ಯತೆ ದೊರೆಯಬೇಕು. ಜನಸಾಮಾನ್ಯರು ಸಾಮಾನ್ಯ ವ್ಯವಹಾರಗಳಿಂದ, ದಾರ್ಶನಿಕರ ತಾತ್ವಿಕ ವಿಚಾರಗಳಿಂದ, ವಿಮರ್ಶೆಗಳು ಕೂಡ ಆ ಪ್ರದೇಶದ ಮಾತೃಭಾಷೆಯಲ್ಲಿಯೇ ಜೀವ ತುಂಬಿಕೊಳ್ಳಬೇಕು.ಈ ರೀತಿ ಒಂದು ಪ್ರದೇಶದ ಬಹುಸಂಖ್ಯಾತರ ಮಾತೃಭಾಷೆಯ ಪ್ರಥಮ ಪ್ರಾಶಸ್ತ್ಯದಿಂದ ಬಳಕೆಯಾಗುವುದರಿಂದ ಕೇವಲ ಆ ಭಾಷೆಗಷ್ಟೇ ಲಾಭವಲ್ಲ, ಭಾಷೆಯ ಮೂಲಕ ಆ ಪ್ರದೇಶದ ಸರ್ವಾಂಗೀಣ ಅಭಿವೃದ್ಧಿ ವಿಕಾಸಕ್ಕೆ ಸಹಾಯವಾಗಬೇಕು. ಈ ರೀತಿ ಒಂದು ಪ್ರದೇಶದ ಮಾತೃಭಾಷೆ ಅಲ್ಲಿನ ಜನರ ಜೀವನದ ಪರಸ್ಪರ ಪೂರಕವಾಗಿ ಅಭಿವೃದ್ಧಿಯಾಗುತ್ತದೆ. ಈ ನಿಟ್ಟಿನಲ್ಲಿ ಮಾತೃಭಾಷೆಯೇ ಶಿಕ್ಷಣದ ಬೋಧನಾ ಮಾಧ್ಯಮವಾಗಬೇಕು ಎಂದು ತಜ್ಞರು ತಮ್ಮ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ.

**ಶಿಕ್ಷಣ ಮಾಧ್ಯಮವಾಗಿ ಮಾತೃಭಾಷೆ**

ಭಾರತದಲ್ಲಿ ಭಾಷಾ ಸಮಸ್ಯೆ, ಶಿಕ್ಷಣ ಮಾಧ್ಯಮದ ಸಮಸ್ಯೆಗಳು ಸರ್ವವ್ಯಾಪಿಯಾಗಿವೆ. ಸ್ವಾತಂತ್ರ ಬಂದು ಆರು ದಶಕಗಳಾಗುತ್ತಾ ಬಂದಿದ್ದರೂ ರಾಷ್ಟ್ರಭಾಷೆಯಾವುದು, ಆಡಳಿತ ಭಾಷೆ ಯಾವುದು, ಶಿಕ್ಷಣದ ಭಾಷೆ ಯಾವುದಿರಬೇಕು, ಯಾವ ತರಗತಿಯಿಂದ ಯಾವ ತರಗತಿಯ ತನಕ ಮಾತೃಭಾಷೆಯನ್ನು ಕಲಿಸಬೇಕು ಎಂಬ ಬಗ್ಗೆ ಖಚಿತ ತೀರ್ಮಾನಗಳು, ಮನಃ ಪೂರ್ವಕವಾಗಿ ಆಚರಣೆಗಳು ಇನ್ನೂ ಬಾರದೆ ಇರುವುದು ವಿಶಾದಕರ. ಶಿಕ್ಷಣ ಕ್ಷೇತ್ರದಲ್ಲಿಯೂ ಭಾಷಾ ಸಮಸ್ಯೆ ತುಂಬಾ ಸೂಕ್ಷ್ಮವಾಗಿದೆ. ಗಂಭೀರ ಸಮಸ್ಯೆಯಾಗಿದೆ. ದೇಶದಾಂತ್ಯ ಪ್ರಾದೇಶಿಕ ಭಾಷೆಗಳು ತಮ್ಮ ವರ್ಚಸ್ಸನ್ನು ಕಳೆದುಕೊಳ್ಳುತ್ತಿದ್ದರೂ ಇಂಗ್ಲೀಷ್ ವ್ಯಾಮೋಹವನ್ನು ನಾವು ಬಿಡುತ್ತಿಲ್ಲ. ವಿಶ್ವದ ಎಲ್ಲ ಶಿಕ್ಷಣ ತಜ್ಞರು ವಿಚಾರವಂತರು ಮಾತೃಭಾಷೆಯಲ್ಲಿಯೇ ಶಿಕ್ಷಣ ನೀಡಬೇಕೆಂದು ಅನುಮೋದಿಸಿದರು. ಮಾತೃಭಾಷೆಗಳಲ್ಲಿ ಶಿಕ್ಷಣ ನೀಡಲು ಭಾರತೀಯರು ಇನ್ನೂ ಸ್ವಹೃದಯ ತೋರುತ್ತಿಲ್ಲ. ಲಾರ್ಡ್ ಮೇಕಾಲಿ ಇಂಗ್ಲೀಷ್ ಶಿಕ್ಷಣ ನೀತಿಯೊಂದಿಗೆ ಭಾರತದಲ್ಲಿ ಭಾಷೆಯ ಅಧ್ಯಯನ, ಭಾಷಾ ಮಾಧ್ಯಮದ ಸಮಸ್ಯೆ ಪ್ರಾರಂಭವಾಯಿತು. ಮೇಕಾಲೆ ಹೇಳಿಕೊಂಡಿರುವಂತೆ ಬಣ್ಣ ಮತ್ತು ರಕ್ತದಲ್ಲಿ ಭಾರತೀಯರಾಗಿದ್ದರು ರುಚಿ, ಅಭಿಪ್ರಾಯ, ಬುದ್ಧಿಯಲ್ಲಿ ಇಂಗ್ಲೀಷ್ ಮಾದರಿಯ ಜನರನ್ನು ರೂಪಿಸುವುದೇ ಅವರ ಗುರಿಯಾಗಿತ್ತು. ಇಂಗ್ಲೀಷ್ ಮಾಧ್ಯಮದ ಶಿಕ್ಷಣವನ್ನು ಜಾರಿಗೆ ತರಲಾಯಿತು. ಭಾರತೀಯರಿಗೆ ಇಂಗ್ಲೀಷ್ ಭಾಷೆಯ ಸಾಹಿತ್ಯ, ವಿಜ್ಞಾನ ಜ್ಞಾನವನ್ನು ದೊರಕಿಸಿಕೊಡುವುದಕ್ಕಾಗಿಯೇ ಬೊಕ್ಕಸದ ಹಣವನ್ನೆಲ್ಲಾ ಖರ್ಚು ಮಾಡಿದರೂ ತಪ್ಪಲ್ಲ." ಎಂದು ಬೆಂಟಿಕನ ಸರ್ಕಾರ ತಿರ್ಮಾನಿಸಿದರೂ, ಕರ್ನಾಟಕದಲ್ಲಿ ಕನ್ನಡ ಭಾಷೆಯ ಮೂಲಕ ಶಿಕ್ಷಣ ಪ್ರಸಾರ ಮಾಡಿದ

ಇಂಗ್ಲೀಷ್ ಅಧಿಕಾರಿಗಳು ಇದ್ದರೂ ಎಂಬುದನ್ನು ನಾವು ಮರೆಯುವಂತಿಲ್ಲ. ಇಂಗ್ಲೀಷ್ ಭಾಷೆ ಮತ್ತು ಸಾಹಿತ್ಯದಿಂದ ನಮಗೆ ಹೆಚ್ಚಿನ ಅನುಕೂಲವಾಗಿದೆ. ಆದರೆ ಒಂದು ಇಂಗ್ಲೀಷ್ ಮಾಧ್ಯಮದ ಶಿಕ್ಷಣವು ಗೊಂದಲವನ್ನುಂಟುಮಾಡಿದೆ. ಶಿಕ್ಷಣದ ಗುಣಮಟ್ಟ ಕುಸಿಯಲು ಕಾರಣವಾಗಿದೆ. ಒಂದು ಭಾಷೆಯಾಗಿ ನಮ್ಮಲ್ಲಿ ಕೆಲವರಿಗೆ ಇಂಗ್ಲೀಷ್ ಬೇಕು. ಇಂಗ್ಲೀಷ್ ಸಾಹಿತ್ಯವು ಹಲವರಿಗೆ ಅಗತ್ಯವಾಗಿ ಬೇಕು. ಅಂದರೆ ಶಿಕ್ಷಣ ಮಾಧ್ಯಮವಾಗಿ ಇಂಗ್ಲೀಷ್‌ನ ಅವಶ್ಯಕತೆ ಇಲ್ಲ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದಲ್ಲಿ ಇಂಗ್ಲೀಷ್ ಮಾಧ್ಯಮ ಬಯಸುವುದು ನಮ್ಮ ಅಲ್ಪ ಜ್ಞಾನ ಮತ್ತು ಆ ಅವೈಜ್ಞಾನಿಕ ತೀರ್ಮಾನವೇ ಆಗಿದೆ. ಪೂರ್ವ ಪ್ರಾಥಮಿಕ ಶಾಲೆಯಲ್ಲಿ ಮತ್ತು ಪ್ರಾಥಮಿಕ ಶಾಲೆಯಲ್ಲಿ ಕನ್ನಡ ಮಾಧ್ಯಮದೊಳಗೆ ಹೇಳಬೇಕೆಂದು ಭಾಷಾ ಚಿಂತಕರು ಈ ರೀತಿ ತಮ್ಮ ವಿಚಾರಗಳನು ತಿಳಿಸಿದ್ದಾರೆ.

**ರವೀಂದ್ರನಾಥ ಠಾಗೂರ್**

ರವೀಂದ್ರನಾಥ ಠಾಗೂರು ರವರು ಭಾರತದಲ್ಲಿ ಶಿಕ್ಷಣ ಮಾಧ್ಯಮವನ್ನು ಕುರಿತು ಹೇಳುತ್ತಾ "ಭಾರತವಲ್ಲದೆ ಬೇರಾವ ದೇಶದಲ್ಲೂ ವಿದ್ಯಾರ್ಥಿಯ ಭಾಷೆಗೂ, ಶಿಕ್ಷಣದ ಭಾಷೆಗೂ ಈ ಬಗೆಯ ಅಂತರವಿಲ್ಲ."[೨] ಎಂದು ಅಭಿಪ್ರಾಯಪಟ್ಟು ಮಾತೃಭಾಷೆಯು ಶಿಕ್ಷಣದ ಮಾಧ್ಯಮವಾಗಬೇಕು ಎಂದು ಹೇಳಿದ್ದಾರೆ. ಪ್ರಾದೇಶಿಕ ಭಾಷೆ ಶಿಕ್ಷಣ ಮಾಧ್ಯಮವಾಗದೆ ಶಿಕ್ಷಣದ ಗುಣಮಟ್ಟ ಸುಧಾರಣೆ ಆಗುವುದಿಲ್ಲ. ಮಕ್ಕಳ ಮನೆಯ ಭಾಷೆಗೂ, ಶಾಲೆಯ ಭಾಷೆಗೂ, ಸಮಾಜದ ಭಾಷೆಗೂ ವ್ಯತ್ಯಾಸವಿದ್ದಾಗ ಮಕ್ಕಳ ಸ್ವಾಭಾವಿಕ ಬೆಳವಣಿಗೆ ಕುಂಠಿತವಾಗುತ್ತದೆ. ಈಗಾಗಲೇ ತನ್ನ ಮಾತೃ ಭಾಷೆಯನ್ನು ಕಲಿತು ಶಾಲೆಗೆ ಬರುವ ಮಗುವಿಗೆ ಆ ಭಾಷೆಯಲ್ಲಿಯೆ ಶಿಕ್ಷಣ ಕೊಡುವುದರಿಂದ ಆ ಮಗುವಿನ ಶಿಕ್ಷಣ ಹೆಚ್ಚು ಅರ್ಥಪೂರ್ಣವಾಗುತ್ತದೆ.

**ಗಾಂಧೀಯವರ ಚಿಂತನೆಗಳು**

ಮಾತೃಭಾಷೆ ಶಿಕ್ಷಣ ಮಾಧ್ಯಮದ ಬಗೆಗೆ ಮಹಾತ್ಮ ಗಾಂಧೀಜಿಯವರ ವಿಚಾರಧಾರೆಗಳು ಮಹತ್ವವಾದವು. ಅವರು ತಮ್ಮ ಮೂಲ ಶಿಕ್ಷಣದಲ್ಲಿ ಮಾತೃಭಾಷಾ ಕಲಿಕೆಗೆ ಮತ್ತು ಮಾತೃಭಾಷೆಯ ಮೂಲಕ ಕಲಿಸುವುದಕ್ಕೆ ವಿಶೇಷ ಆದ್ಯತೆ ನೀಡಿದ್ದಾರೆ. ಗಾಂಧೀಜಿಯವರು ಇಂಗ್ಲೀಷ್ ಭಾಷೆಯನ್ನು ಕಟುವಾಗಿ ಟೀಕಿಸಿದರು. ಇದು ಮಗುವಿನ ಸರ್ವಾಂಗೀಣ ಅಭಿವೃದ್ಧಿಗೆ ಅಡ್ಡಿ, ಬರೀ ಅನುಕರಣೆಯಾಗುತ್ತದೆ. ಅನುಕರಣಶೀಲ ತಲೆಮಾರನ್ನು ನಿರ್ಮಿಸುವ ಮೂಲಕ ಯಾವುದೇ ನಾಡು ರಾಷ್ಟ್ರವಾಗಲಾರದು. ಇಂಗ್ಲೀಷ್ ಭಾಷೆ ಇಲ್ಲದೆ ನಾವು ಬದುಕಲಾರವು ಎಂದು ಭಾವಿಸುವುದು ನಮ್ಮ ಮಾನಸಿಕ ದಾಸ್ಯದ ಪರಿಣಾಮವೇ ಆಗಿದೆ.

ಮಗುವಿನ ಸರ್ವಾಂಗೀಣ ವಿಕಾಸಕ್ಕೆ ಅಗತ್ಯವಾದ ಮಾತೃಭಾಷೆಯನ್ನು ಬಿಟ್ಟು ಬೇರೊಂದು ಭಾಷೆಯನ್ನು ಅವರ ಮೇಲೆ ಹೇರುವುದು ಮಾತೃಭಾಷೆಯ ವಿರುದ್ಧ ನಾವು ಎಸಗುವ ಪಾಪವಾಗುತ್ತದೆ. ಪರಭಾಷೆಯ ಶಿಕ್ಷಣ ನಮ್ಮ ಮಕ್ಕಳ ಬುದ್ಧಿಶಕ್ತಿಯನ್ನು ಬೆಂಡು ಮಾಡಿದೆ, ಅವರ ನರಗಳನ್ನು ದುರ್ಬಲಗೊಳಿಸಿದೆ, ಅವರನ್ನು ಬಾಯಿಪಾಠ ಮಾಡುವ ಗಿಳಿಗಳನ್ನಾಗಿ ಮಾಡಿದೆ. ನಾನಿಂದು ಸರ್ವಾಧಿಕಾರಿ ಯಾಗಿದ್ದರೆ ಪರಭಾಷೆಯ ಮೂಲಕ ಶಿಕ್ಷಣ ರದ್ದುಗೊಳಿಸುತಿದ್ದೆ ಎಂದಿದ್ದಾರೆ. ಗಾಂಧೀಜಿಯವರ ಅಭಿಪ್ರಾಯದಲ್ಲಿ ಪರಭಾಷೆಯ ಶಿಕ್ಷಣ ಬರೀ ಅನುಕರಣೆ. ಸತ್ವಹೀನ ಅನುಕರಣೆಯಿಂದ ಆ ಶಿಕ್ಷಣ ದ್ವಿತೀಯ ದರ್ಜೆಯದು. ಇಂತಹ ಶಿಕ್ಷಣದಿಂದ ನಾವು ದ್ವಿತೀಯ ದರ್ಜೆ ಪ್ರಜೆಗಳನ್ನು ತಯಾರಿಸುತ್ತೇವೆ. ಆದ್ದರಿಂದ ಮಕ್ಕಳ ಶಿಕ್ಷಣ ಅವರ ಮಾತೃಭಾಷೆಯಲ್ಲೇ ಸಾಗಬೇಕು. ಕೊರತೆಗಳೇನೇ ಇದ್ದರೂ ನನ್ನ ತಾಯಿಯ ಎದೆಗೆ ಅಂಟಿಕೊಳ್ಳಬೇಕು. ಅದು ಮಾತ್ರವೆ ನನಗೆ ಪ್ರಾಣದಾಯಕವಾದ ಹಾಲನ್ನು ಕೊಡಬಲ್ಲದು ಎಂದಿದ್ದಾರೆ. ಅಲ್ಲದೆ "ಮಾತೃಭಾಷೆಯನ್ನು ನಾವೂ ಒಂದೇ ಸಮನ ನಿರ್ಲಕ್ಷಿಸಿಕೊಂಡು ಬಂದಿರುವುದಕ್ಕಾಗಿ, ನಾವೂ ಭಾರೀ ಬೆಲೆಯನ್ನು ತೆರಬೇಕಾಗುತ್ತದೆ. ಇದರಿಂದ ರಾಷ್ಟ್ರ ಅಪಾರ ನಷ್ಟವನ್ನು ಅನುಭವಿಸುತ್ತಿದೆ. ಈ ಸಂಕಟದಿಂದ ರಾಷ್ಟ್ರವನ್ನು ಪಾರು ಮಾಡುವುದು ಶಿಕ್ಷಿತ ವರ್ಗದ ಪ್ರಥಮ ಕರ್ತವ್ಯವಾಗಿದೆ. ಮಾತೃಭಾಷೆಯನ್ನು ಕಡೆಗೆಣಿಸಿದರೆ ನಮ್ಮ ಸಂಸ್ಕೃತಿ ಮತ್ತು ಪರಂಪರೆಯನ್ನು ನಾವು ಅರ್ಥ ಮಾಡಿಕೊಳ್ಳಲಾರೆವು. ಅದರಿಂದ ಮಾತೃಭಾಷೆ ಶಿಕ್ಷಣ ಮಾಧ್ಯಮವಾಗಬೇಕು."[೨] ಎಂದಿದ್ದಾರೆ.

**ನೆಹರು**

ನೆಹರುರವರು ಮಾತೃಭಾಷಾ ಶಿಕ್ಷಣ ಮಾಧ್ಯಮವನ್ನು ಬೆಂಬಲಿಸಿದ್ದಾರೆ. ಅವರ ಪ್ರಕಾರ ವಿದ್ಯಾರ್ಥಿಗಳ ಭಾಷೆಯಲ್ಲಿಯೇ ಶಿಕ್ಷಣ ನೀಡಬೇಕೆಂದು ಸರ್ಕಾರದ ನೀತಿಯಾಗಬೇಕು. ಪ್ರತಿಯೊಂದು ಭಾಷಾ ಪ್ರದೇಶದಲ್ಲೂ ಪ್ರಾಥಮಿಕ ಶಿಕ್ಷಣದಿಂದ ವಿಶ್ವವಿದ್ಯಾಲಯ ಹಂತದವರೆಗೆ ಆ ಪ್ರಾಂತ್ಯ ಭಾಷೆಯಲ್ಲಿಯೇ ಶಿಕ್ಷಣ ನೀಡಬೇಕು ಎಂದು ಹೇಳುತ್ತಾ ನಮ್ಮ ದೇಶಿಯ ಭಾಷೆಗಳು ಕೇವಲ ಆಡು ಮಾತುಗಳಲ್ಲಿ ಅವುಗಳಿಗೆ ಅತ್ಯಂತ ಪ್ರಾಚೀನವಾದ ಸಾಹಿತ್ಯ ಉಂಟು. ಆ ಭಾಷೆಗಳನ್ನುಡುವ ಲಕ್ಷವದಿ ಜನರು. ತಮ್ಮ ಸ್ವಂತ ಭಾಷೆಯಲ್ಲಿಯೆ ಶಿಕ್ಷಣ ಪಡೆಯುವುದರಿಂದ ಮಾತ್ರವೇ ಅವರು ಮುಂದುವರೆಯುವುದು ಸಾಧ್ಯ "ಆಯಾ ಪ್ರದೇಶಗಳಲ್ಲಿ ಆಯಾ ಪ್ರದೇಶಿಕ ಭಾಷೆಗಳಲ್ಲಿಯೆ ಸಾರ್ವಜನಿಕ ಕಾರ್ಯಗಳು ನಡೆಯಬೇಕು. ಪ್ರದೇಶದಲ್ಲಿ ಆ ಭಾಷೆಯೇ ಪ್ರಧಾನ ಭಾಷೆಯಾಗಬೇಕು."[೩] ಎಂದಿದ್ದಾರೆ.

**ಕುವೆಂಪುರವರ ಚಿಂತನೆಗಳು**

ಕುವೆಂಪುರವರು ಮಾತೃಭಾಷೆಯ ಹೋರತಾಗಿ ನೀಡುವ ಇಂಗ್ಲೀಷ್ ಭಾಷೆಯನ್ನು ಶಿಕ್ಷಣ

ಮಾಧ್ಯಮವಾಗಿ ಇಟ್ಟುಕೊಂಡು ಕಲಿಸಬಾರದು ಎಂದು ಹೇಳಿದ್ದಾರೆ. ಅಲ್ಲದೇ ಶಿಕ್ಷಣ ಇಂಗ್ಲೀಷ್, ಹಿಂದಿ, ಸಂಸ್ಕೃತ ಭಾಷೆಗಳ ಬಗ್ಗೆ ವ್ಯಾಮೋಹಪಡುವ ಸ್ಥಿತಿಯನ್ನು ಕುರಿತು ರಾಷ್ಟ್ರಕವಿ ಕುವೆಂಪುರವರು "ಸಾಯುತಿದೆ ನಿಮ್ಮ ನುಡಿ. ಓ ಕನ್ನಡದ ಕಂದರಿರ" ಎಂಬ ಕವನದಲ್ಲಿ ಈ ರೀತಿ ಹೇಳುತ್ತಾರೆ.

"ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದರಿರ
ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ
ರಾಜನುಡಿಯೆಂದೊಂದು ರಾಷ್ಟ್ರನುಡಿಯೆಂದೊಂದು
ದೇವನುಡಿಯೆಂದೊಂದು ಹತ್ತಿ ಜಗ್ಗಿ
ನಿರಿ ನಿಟಲು ನಿಟಿಲೆಂದು ಮುದಿ ಮೂಳೆ ಮುರಿಯುತಿದೆ
ಕನ್ನಡಮ್ಮನ ಬೆನ್ನು ಬಳುಕಿ ಬಗ್ಗಿ;
ಕೂಗಿಕೊಳ್ಳಲು ಕೂಡಾ ಬಲವಿಲ್ಲಾ, ಮಕ್ಕಳೇ
ಬಾಯ್ಮುಚ್ಚಿ ಹಿಡಿದಿಹರು ಕೆಲವರು ನುಗ್ಗಿ"[೨]

ಅಲ್ಲದೆ, ಮಾಲೆವಾಲಿನೊಡ ಗೂಡಿ ಬಂದ ನುಡಿ ತಾಯಿ ನುಡಿ ಕೊಲೆ ಗೈದರಮ್ಮನನೆ ಕೂಲಿಸಿದಂತೆ" ಎಂದಿದ್ದಾರೆ. (ನಮ್ಮ ಕನ್ನಡ ಡಿಂಡಿಮ ಪದ್ಯದಿಂದ)

ಮಾತೃಭಾಷೆಯ ಮೂಲಕ ಶಿಕ್ಷಣ ಮತ್ತು ಆಡಳಿತ ನಡೆಯಬೇಕು ಎಂಬುದನ್ನು ಸಂಪೂರ್ಣವಾಗಿ ಬೆಂಬಲಿಸಿರುವ ಕುವೆಂಪುರವರು ಈ ರೀತಿ ಅಭಿಪ್ರಾಯ ತಿಳಿಸಿದ್ದಾರೆ. ಮಾತೃಭಾಷೆಯ ಮೂಲಕ ವ್ಯವಹಾರ ಸ್ವಂತ ಕಾಲುಗಳಿಂದ ನಡೆದಂತೆ, ಬೆಂಡು ಕಟ್ಟಿಕೊಂಡು ಈಜಿಗೆ ಹೊರಟಂತೆ. ವಿದೇಶಿ ಭಾಷೆಯ ಮೂಲಕದ ವ್ಯವಹಾರ ಮರಗಾಲುಗಳನ್ನು ಕಟ್ಟಿಕೊಂಡು ನಡೆದಂತೆ, ಬೆನ್ನಿಗೆ ಕಲ್ಲು ಕಟ್ಟಿಕೊಂಡು ನೀರಿಗೆ ಬಿದ್ದಂತೆ ವಿದೇಶಿ ಭಾಷೆಯ ಬಳಕೆಯಿಂದ ಭಾಷೆ ಮೊಂಡಾಗುತ್ತದೆ. ಭಾವದ ನೆಲೆ ಬತ್ತುತ್ತದೆ. ಅಷ್ಟೇ ಅಲ್ಲ ಅದು ಸಾಮಾನ್ಯ ಜನತೆಯನ್ನು ನಿರಕ್ಷರತೆಗೂ, ಅಜ್ಞಾನಕ್ಕೂ ಗುರಿಮಾಡುತ್ತದೆ. ಸರ್ವ ವ್ಯವಹಾರಗಳು ಮಾತೃಭಾಷೆಯಲ್ಲಿ ನಡೆಯಬೇಕು. ಕಲಿತವರ ಮತ್ತು ಕಲಿಯುವವರ ನಡುವಿನ ಅಂತರ ಕಡಿಮೆಯಾಗಿ ಭಾವೈಕ್ಯ ಕಾದೇರಿ ಜ್ಞಾನದ ಮಟ್ಟ ಸಾಮಾಜಿಕವಾಗಿ ಮೇಲೇರುತ್ತದೆ. ಇಂಗ್ಲೀಷ್ ಮಾಧ್ಯಮದ ಶಿಕ್ಷಣದಲ್ಲಿ ನಮ್ಮ ವಿದ್ಯಾರ್ಥಿಗಳ ಸೂಪ್ತಪ್ರತಿಭೆಗಳು ಚಿಗುರೊಡೆಯುವ ಬದಲಾಗಿ ಅವರ ಚೈತನ್ಯವು ಮೊಳಕೆಯಲ್ಲಿಯೆ ಮುರುಟಿ ಹೋಗುತ್ತಿವೆ ಎಂಬ ಅಭಿಪ್ರಾಯವನ್ನು ಕುವೆಂಪು ಹೇಳಿದ್ದಾರೆ.

**ಡಾ. ಎಂ.ಚಿದಾನಂದ ಮೂರ್ತಿಯವರ ಚಿಂತನೆಗಳು**

"ಕರ್ನಾಟಕದಲ್ಲಿ ಕನ್ನಡವೇ ಏಕೈಕ ಪ್ರಥಮ ಭಾಷೆಯಾಗಿರಬೇಕು. ಶಿಕ್ಷಣ ಮಾಧ್ಯಮ

ಕನ್ನಡವೇ ಆಗಬೇಕು ಎಂದು ಕನ್ನಡಪರ ಹೋರಾಟ ನಡೆಸುತ್ತಿರುವ ಡಾ॥ ಎಂ.ಚಿದಾನಂದ ಮೂರ್ತಿಯವರು ಅಭಿಪ್ರಾಯಪಟ್ಟಿದ್ದಾರೆ."

"ಆಂಗ್ಲ ಶಾಲೆಗಳು ಶಿಕ್ಷಣದಲ್ಲಿ ಹಳ್ಳಿ-ನಗರ ಎಂಬ ಬೇಧವನ್ನು, ಬಡವ–ಶ್ರೀಮಂತ ಎಂಬ ಭೇಧವನ್ನು ಸೃಷ್ಠಿಸಿ ಸಮಾಜವನ್ನು ಒಡೆದಿದೆ. ದೇಶಿಯ ಸಂಸ್ಕೃತಿಯನ್ನು ಮೂಲೆಗೆ ಒತ್ತರಿಸಿ, ವಿದೇಶಿ ಸಂಸ್ಕೃತಿಗೆ ಮಕ್ಕಳನ್ನು ಒತ್ತೆ ಇಟ್ಟಿವೆ. ಮಕ್ಕಳ ಆಲೋಚನಾ ಶಕ್ತಿಯನ್ನು ಕುಂಠಿತಗೊಳಿಸಿ, ಅವು ಕೇವಲ ವಿದೇಶಿ ಭಾಷೆ ಕಲಿಕೆಯೆ ಜ್ಞಾನ ಎಂಬ ಭ್ರಮೆಯನ್ನು ಹುಟ್ಟಿಸಿದೆ. ಭಾರತವು ಶತ ಶತಮಾನಗಳ ವರೆಗೆ ದಾಸ್ಯ ಸ್ಥಿತಿಯಲ್ಲಿರುವಂತೆ ಅವು ಮಾಡುತ್ತವೆ. ಅವು ಭ್ರಷ್ಟಾಚಾರದ ಕೂಪಗಳು, ಹಣ ದುಡಿಯುವ ಸಾಧನೆಗಳು. ಇದಕ್ಕೆಲ್ಲಾ ಆಂಗ್ಲ ಮಾಧ್ಯಮ ಶಾಲೆಗಳು ಮಾತೃಭಾಷೆ ಶಾಲೆಗಳಾಗಿ ಪರಿವರ್ತಿಸುವುದೊಂದೆ ಮದ್ದು ಎಂದಿದ್ದಾರೆ."[೨೮]

**ಹಾ.ಮಾ.ನಾಯಕ್**

ಕನ್ನಡದ ಸಾಹಿತಿಗಳು ಹಾಗೂ ಶಿಕ್ಷಣ ತಜ್ಞರು ಆದಂತಹ ಹಾ.ಮಾ.ನಾಯಕರು ಕರ್ನಾಟಕದಲಿ ಶಿಕ್ಷಣ ಮಾಧ್ಯಮವನ್ನು ಕುರಿತು "ಕನ್ನಡದ ಮಕ್ಕಳಿಗೆ ಕನ್ನಡವೇ ದಾರಿ ದೀಪ".[೨೯] ಎಂದಿದ್ದಾರೆ. ಅವರು ಮಾತೃಭಾಷಾ ಶಿಕ್ಷಣ ಮಾಧ್ಯಮದ ಬಗೆಗೆ ಅಭಿಪ್ರಾಯಪಡುತ್ತಾ ಶಿಕ್ಷಣದಲ್ಲಿ ಅಥವಾ ಮಗುವಿನ ಪರಿಸರದ ಭಾಷೆಯನ್ನು ಬೆಳೆಸಿದ್ದಾರೆ. ಮಗುವಿನ ಶಕ್ತಿಯನ್ನು ಸಂಬಂಧವಿಲ್ಲದ ಬೇರೊಂದು ಭಾಷೆಯನ್ನು ಕಲಿಯುವುದರಲ್ಲಿಯೇ ವ್ಯಯವಾಗುತ್ತದೆ. ಅದ್ದರಿಂದ ಜಗತ್ತಿನಾದ್ಯಂತ್ಯ ಶಿಕ್ಷಣಾ ತಜ್ಞರು ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯ ಶಿಕ್ಷಣವನ್ನು ಪುರಸ್ಕರಿಸಿದ್ದಾರೆ. ಪರಭಾಷೆಯಲ್ಲಿ ಶಿಕ್ಷಣ ಪಡೆಯುವುದು ಮಗು ದ್ವೀಪವಾಗುತ್ತದೆ. ಅದಕ್ಕೆ ತನ್ನವರ ಸಂಪರ್ಕವೇ ತಪ್ಪಿ ಹೋಗುತ್ತದೆ. ಅದ್ದರಿಂದ ಸಂಪೂರ್ಣವಾಗಿ ಪ್ರಾಥಮಿಕ ಶಿಕ್ಷಣ ಮಾತೃಭಾಷೆ ಅವಶ್ಯಕ, ಅನಿವಾರ್ಯ. ನಮ್ಮ ದೇಶದ ಅಪಾರವಾದ ಮಾನವ ಶಕ್ತಿ ಹರಕು ಮುರಕು ಇಂಗ್ಲೀಷ್ ಕಲಿಯುವುದರಲ್ಲದೆ ಅಪವ್ಯಯವಾಗುತ್ತಿವೆ. ಮಾತೃಭಾಷಾ ಶಿಕ್ಷಣ ಒಂದೇ ಇರುವ ದಾರಿ ಎಂದಿದ್ದಾರೆ.

**ಬಿ.ಎಂ.ಶ್ರೀ**

ಬಿ.ಎಂ.ಶ್ರೀ ರವರು ಮಾತೃಭಾಷೆ ಬಗ್ಗೆ ಹೀಗೆ ಹೇಳಿದ್ದಾರೆ.

"ಮೊದಲ ತಾಯಿ ಹಾಲು ಕುಡಿದು
ಲಲ್ಲೆಯಿಂದ ತೊದಲ ನುಡಿದು
ಗೆಳೆಯರೊಡನೆ ಬೆಳೆದು ಬಂದ
ಮಾತಾದಾವುದು .................?

ನಲ್ಲೆ ಯೊಲವ ತೆರದು ತಂದ

ಮಾತಾದಾವುದು .......... ?

ಅದೇ ಮಾತೃಭಾಷೆ"[೩೩] ಎಂದಿದ್ದಾರೆ.

ಹೀಗೆ ತಾಯಿ ಹಾಲು ಕುಡಿಯುತ್ತಾ ರಕ್ತಗತವಾಗಿ ಬಂದು ಗೆಳೆಯರೊಡನೆ ಆಟವಾಡುತ್ತಾ ಆ ಭಾಷೆ ವೃದ್ಧಿಯಾಗಿ ಮುಂದೆ ನಲ್ಲನಲ್ಲೆಯರ ಜೊತೆಯಲ್ಲಿ ಬೆಳೆದು ಬಂದುದು ತಾಯ್ನುಡಿ. ಹೀಗೆ ಮಗು ತಾನು ಕಲಿತ ಭಾಷೆಯನ್ನು ಮುಂದೆ ಜೀವನನುದ್ದಕ್ಕೂ ಮುಂದುವರೆಸಿಕೊಂಡು ಹೋಗುವುದರಿಂದ ಆ ಮಾತೃಭಾಷೆಯಲ್ಲಿಯೆ ಶಿಕ್ಷಣ ನೀಡುವುದು ಒಳ್ಳೆಯದು ಎಂದಿದ್ದಾರೆ.

**ಮಂಜೇಶ್ವರ ಗೋವಿಂದ ಪೈ**

ಪೈಯವರು ಹೇಳುವಂತೆ "ತಾಯ್ನುಡಿಯಿಂದ ಕಲಿತ ವಿದ್ಯ ನಿಜವಾದ ವಿದ್ಯೆ. ಪರರ ಎಂಜಿಲು ಯಾವಾಗಲೂ ಸವಿಯಲ್ಲ. ಅದ್ದರಿಂದ ಮಗುವಿನ ಮಾತೃಭಾಷೆಯ ಮೂಲಕವೇ ಶಿಕ್ಷಣ ಸೂಕ್ತವಾದುದು. ಶಿಕ್ಷಣದ ಎಲ್ಲಾ ಚಟುವಟಿಕೆಗಳಲ್ಲಿಯೂ ಸಕ್ರಿಯವಾಗಿ ಪಾಲ್ಗೊಳ್ಳಲು ಅನುಕೂಲವಾಗಿದೆ ಎಂದಿದ್ದಾರೆ.

**ಬಿ.ವಿ.ರಮಣ**

ಬಿ.ವಿ.ರಮಣ ರವರು ಮಾತೃಭಾಷೆಯು ಆಗಸದ ಆಳದೊಡನೆ ನೀಲಿಮೆಯು ಸೇರಿಕೊಂಡಿರುವಂತೆ, ಹೂವಿನೊಡನೆ ಬಣ್ಣವು ಬೆರೆತುಕೊಂಡಿರುವಂತೆ, ಮನಷ್ಯನ ಬಾಳನ್ನು ಸೇರಿಕೊಂಡು ಅವನ ಸರ್ವತೋಮುಖವಾದ ವಿಕಾಸಕ್ಕೂ, ಅವನ ಏಳ್ಗೆಗೂ ಕಾರಣವಾಗುತ್ತದೆ. ತಾಯಿಯ ನುಡಿಯು "ಅರಿವಿಂಗಿ ಆಡಿಗಲ್ಲು, ತಿಳಿವಿಂಗೆ ತಳಹದಿ, ಬಾಳಿಂಗೆ ಒಡನಾಡಿಯಾಗಿ ಅವನ ಜೀವನದುದ್ದಕ್ಕೂ ವಿಸ್ತರಿಸುತ್ತದೆ. ಅದಕ್ಕಾಗಿ ಮಾತೃಭಾಷೆಯಲ್ಲಿಯೇ ಶಿಕ್ಷಣ ನೀಡಬೇಕೆಂದು"[೩೪] ಎಂದಿದ್ದಾರೆ.

**ಮಹಾಲಿಂಗರಾಯರು**

ಮಹಾಲಿಂಗರಾಯರು ಕನ್ನಡ ಸ್ವರೂಪವನ್ನು ಕುರಿತು ಅದರ ಮಹತ್ವವನ್ನು ಕುರಿತು "ಕನ್ನಡ ಭಾಷೆಯು ಸುಲಿದ ಬಾಳೆಯ ಹಣ್ಣಿನಂದದಿ, ಕಳಿದ ಸಿಗುರಿನ ಕಬ್ಬಿನಂದದಿ, ಅಳಿದ ಉಷ್ಣದ ಹಾಲಿನಂದದಿ ಕನ್ನಡ ಮಧುರ ಭಾಷೆಯಾಗಿದೆ. ಎಂದು ಹೇಳುತ್ತಾ ಇಂತಹ ಸರಳ, ಸುಲಲಿತವಾದ, ಮಧುರವಾದ ಮಾತೃಭಾಷೆಯು ವ್ಯಕ್ತಿಯ ಅಂತರಾಳದಲ್ಲಿ ಮೂಡಿದ ಭಾವನೆಗಳನ್ನು ಹೊರಹಾಕಲು ಭಾಷೆ ಭಾವಕವು ಹಾಗೂ ಪೋಷಕವೂ ಆಗಿದೆ."[೩೪] ಎಂದಿದ್ದಾರೆ.

**ಬೆನಗಲ್ ರಾಮರಾಯರು**

ಮಾತೃಭಾಷೆ ಬೋಧನೆ ಕುರಿತು ಅದರ ಮಹತ್ವ ಹಾಗೂ ಕನ್ನಡದ ಅನಿರ್ವಾಯತೆಯನ್ನು ಕುರಿತು ಈ ರೀತಿ ಹೇಳಿದ್ದಾರೆ "ಕನ್ನಡವಳಿದೊಡೆ ಏನುಂಟು ? ಬರಿ ಕನ್ನಡಿಯೊಳಗಿನ ಹುಸಿಗಂಟು" ಎಂದಿದ್ದಾರೆ.

**ಕೆ.ಎಸ್.ನರಸಿಂಹಸ್ವಾಮಿ**

ಕೆ.ಎಸ್.ಎನ್.ರವರು ಕವಿಗಳಿಗೆ ಕನ್ನಡ ಕಲಿಕೆಯ ಅಗತ್ಯವನ್ನು ಒತ್ತಿ ಹೇಳುವ ಮೂಲಕ ಮಾತೃಭಾಷೆಯ ಬೋಧನೆಗೆ ಮಹತ್ವ ನೀಡಿದ್ದಾರೆ. "ಶಿಕ್ಷಣ ಮಾಧ್ಯಮವೆಂದರೆ ಸಾಲದು ಕನ್ನಡ ಮಕ್ಕಳಿಗೆ ಮಾಧ್ಯಮ ವಾಗಲೇಬೇಕು ಎಂದು ಕವಿಗಳಿಗೆ ಹೇಳಿದ್ದಾರೆ.

**ಲಪಾಜ್‌ರವರ ಚಿಂತನೆಗಳು**

ಮಗುವಿನ ತಾಯಿ ತಂದೆಯರಲ್ಲದ ಭಾಷೆಯಲ್ಲಿ ಶಿಕ್ಷಣ ನೀಡುವುದರಿಂದ ಆ ಮಗುವನ್ನು ತನ್ನ ತಾಯಿ ತಂದೆಯವರಿಂದ ವಿಮುಖಗೊಳಿಸಿದಂತಾಗುತ್ತದೆ. ದೇಶಿಯವಲ್ಲದ ಭಾಷೆಯಲ್ಲಿ ಅವನಿಗೆ ಶಿಕ್ಷಣ ನೀಡುವುದರಿಂದ ಅವನ ದೇಶದ ಸಂಸ್ಕೃತಿಯಿಂದ ಅವನನ್ನು ವಿಮುಖಗೊಳಿಸಿದ ಹಾಗಾಯಿತು. ಶಾಲಾ ಕೊಠಡಿಗೆ ಒಂದು ಭಾಷೆ, ಹೊರಗಿನ ಜಗತ್ತಿಗೆ ಒಂದು ಭಾಷೆ ಇವುಗಳೊಂದಿಗೆ ಬೆಳೆದ ವಿದ್ಯಾರ್ಥಿ ದ್ವಂದ್ವ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುತ್ತಾನೆ. ಶಾಲೆಯಲ್ಲಿ ಪರಭಾಷೆಯಲ್ಲಿ ಕಲಿತ ವಿದ್ಯಾರ್ಥಿಯ ವ್ಯಕ್ತಿತ್ವ ಒಂದು ಪಾಲಿಥೀನ್ ಚೀಲದಲ್ಲಿ ಬಂಧಿತವಾಗುತ್ತದೆ. ಕಲಿತ ವಿಚಾರಗಳು ಅವನ ಜೀವನ ಕ್ಷೇತ್ರಕ್ಕೆ ಉಪಯುಕ್ತವಾಗದೇ ಹೋಗುತ್ತವೆ ಎಂದು ಅಭಿಪ್ರಾಯಪಟ್ಟಿದ್ದಾರೆ.

**ಪಿ.ಟಿ.ಬೋಡ್**

ಮಾತೃಭಾಷೆಯನ್ನು "ಮೊದಲ ನುಡಿ" ಎಂದು ಕರೆದಿದ್ದಾರೆ. ಮೊದಲ ನುಡಿಯಿಂದ ಕಲಿತ ಕಲಿಕೆಯು ಪರಿಣಾಮಕಾರಿಯಾಗುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

**ವಿ.ಕೆ.ಆರ್.ವಿ.ರಾವ್**

"ಭಾರತ ಮಾತೃಭಾಷೆಯಲ್ಲಿ ಕಲಿಯಲು ಆರಂಭಿಸಿದರೆ ಇನ್ನು ಐವತ್ತು ವರ್ಷಗಳಲ್ಲಿ ಬಲಿಷ್ಠ ರಾಷ್ಟ್ರಗಳೊಂದಿಗೆ ಸರಿಸಮಾನವಾಗಿ ಬಾಳಲು ಸಾಧ್ಯವಾಗುವುದು."[೩೪] ಎಂದಿದ್ದಾರೆ.

**ಕೋಲ್‌ರಿಚ್**

ಆಂಗ್ಲ ಕವಿ ಕೋಲ್‌ರಿಚ್ ಹೇಳಿರುವಂತೆ "ಮಾತೃಭಾಷೆಯು ಒಂದು ಹೃದಯ ಭಾಷೆ. ಈ ಹೃದಯದಿಂದ ಬರುವ ಭಾಷೆ ಹೃದಯಂಗಮವಾಗಿಯೂ, ಮನಃಪೂರ್ವಕವಾಗಿಯೂ ಇರುತ್ತದೆ."[೩೪] ಎಂದಿದ್ದಾರೆ.

ಯಾವ ವ್ಯಕ್ತಿಯೇ ಆಗಲಿ ತನ್ನ ಭಾವನೆಯನ್ನು ಲೀಲಾಜಾಲವಾಗಿ, ನಿರರ್ಗಳವಾಗಿ, ನಿರ್ಭಯವಾಗಿ ತನ್ನ ಮಾತೃಭಾಷೆಯಲ್ಲಿ ಹೊರಹಾಕುವಂತೆ ಬೇರೆ ಭಾಷೆಯಲ್ಲಿ ತಿಳಿಸಲು ಸಾಧ್ಯವಿಲ್ಲ. ಅದ್ದರಿಂದ ಮಗುವಿನ ಶಿಕ್ಷಣ ಮಾತೃಭಾಷೆಯ ಮೂಲಕ ಸಾಗಬೇಕು ಎಂದು ಅಭಿಪ್ರಾಯಪಟ್ಟಿದ್ದಾರೆ.

**ಐ.ಎಲ್.ಕ್ಯಾಂಡಲ್‌ರವರು**

ಮಾತೃಭಾಷೆಯನ್ನು ಎಲ್ಲರು ಕಲಿಯುವುದು ಕಡ್ಡಾಯವೆಂದು ಹೇಳಿದ್ದಾರೆ.

**ರಾಷ್ಟ್ರೀಯ ಶೈಕ್ಷಣಿಕ ಸಂಶೋಧನ ಮತ್ತು ತರಬೇತಿ ಪರಿಷತ್ತು**

ಇದು ರೂಪಿಸಿರುವ ವ್ಯಾಸಂಗ ಕ್ರಮದ ಚೌಕಟ್ಟು ೨೦೦೫ ನಮ್ಮ ಸಂವಿಧಾನದ ೩೭೨(ಎ) ಆರ್ಟಿಕಲ್ ಅನ್ನು ಅನುಮೋದಿಸಿತ್ತು ಶಾಲೆಗಳಲ್ಲಿ ಮಾತೃಭಾಷೆಯೆ ಶಿಕ್ಷಣ ಮಾಧ್ಯಮವಾಗಬೇಕೆಂದು ತನ್ನ ಖಚಿತ ಅಭಿಪ್ರಾಯಗಳನ್ನು ಮಂಡಿಸುತ್ತದೆ.

**ಪ್ರೋ ಬಿ.ಎಚ್. ಕೃಷ್ಣಮೂರ್ತಿ**

ಹೈದ್ರಾಬಾದ್ ವಿಶ್ವವಿದ್ಯಾಲಯ ಕುಲಪತಿಗಳಾಗಿದ್ದ ಇವರು ಮಾತೃಭಾಷೆ ಮಾಧ್ಯಮದ ಮಹತ್ವವನ್ನು ಕುರಿತು ಈ ರೀತಿ ಹೇಳಿದ್ದಾರೆ. "ಪ್ರಪಂಚದ ಯಾವ ಮುಂದುವರೆದ ದೇಶವೂ ಮಾತೃಭಾಷೆ ಅಥವಾ ಸ್ಥಳೀಯ ಭಾಷೆಯಲ್ಲಿರುವ ಬೇರೊಂದು ಭಾಷೆ ಶಿಕ್ಷಣಕ್ಕೆ ಮಾಧ್ಯಮವಾಗಿ ಬಳಸುತ್ತಿಲ್ಲ." ಅವರು ಮುಂದುವರೆದು ನಮ್ಮ ಭಾಷೆಯಲ್ಲಿ ನಾವೂ ಚಿಂತನೆಮಾಡದಿದ್ದರೆ ನಮ್ಮ ಭೌತಿಕ ಸಾಮರ್ಥ್ಯ ಸಂಪೂರ್ಣ ಉಪಯೋಗ ಸಾಧ್ಯವಿಲ್ಲ ಎಂದಿದ್ದಾರೆ.

**ಬ್ರೈಲ್ಸ್ ಪರ್ನ್ಸ ಚಿಂತನೆಗಳು**

ನಮ್ಮ ಭಾವನೆಗಳ ಬೀಗದ ಕೈ ಇರುವುದು ಒಂದೇ ಒಂದು ಭಾಷೆಯಲ್ಲಿ. ಸೂಕ್ಷ್ಮಾತಿ ಸೂಕ್ಷ್ಮ ಸಂಪಾದನೆಗಳನ್ನು ಸಹಜವಾಗಿ ಅಂತಃಪ್ರೇರಣೆಯಿಂದ ಮನವರಿಕೆ ಮಾಡಿಕೊಡುವ ಶಕ್ತಿ ಒಂದೇ ಒಂದು ಭಾಷೆಗಿದೆ. ತಾಯಿಯ ತೊಡೆಯ ಮೇಲೆ ಕಲಿತ ಭಾಷೆಯು ಅದು ನಮ್ಮ ದುಃಖ ಮತ್ತು ಸಂತೋಷಗಳ ಸಲಿಲ ಅಭಿವ್ಯಕ್ತಿ ಮಾಧ್ಯಮವದು. ಅನ್ಯಭಾಷೆಯಿಂದ ಶಿಕ್ಷಣ ಮಾಧ್ಯಮವಾಗಿ ಅಂಗೀಕರಿಸುವುದರಿಂದ ವಿದ್ಯಾರ್ಥಿಗಳ ಅನೂಹ್ಯವಾದುದು ಕಷ್ಟಕ್ಕೆ ಗುರಿಯಾಗಬೇಕು.

**ಗೋಕಾಕರ್ ಚಿಂತನೆಗಳು**

ಇಂಗ್ಲೀಷ್ ಪ್ರಾಧ್ಯಾಪಕರು ಶ್ರೇಷ್ಠ ಸಾಹಿತಿಗಳಾದ ಗೋಕಾಕರು "ಉನ್ನತ ಶಿಕ್ಷಣ ಮಾಧ್ಯಮದ ಸ್ಥಾನಮಾನಗಳನ್ನು, ದೇಶಭಾಷೆಗಳಿಗೊದಗಿಸಿದ್ದಾರೆ. ಅವುಗಳ ನ್ಯಾಯವಾದ ಬೆಳವಣಿಗೆ ಮತ್ತು

ಪರಿಪೂರ್ಣತೆಗೆ ಅಡಚಣೆಯೊಡ್ಡಿದಂತಾಗುತ್ತದೆ. ವಿಶ್ವವಿದ್ಯಾಲಯದ ಮಾಧ್ಯಮಗಳಿಂದ ಅವನ್ನು ಅಂಗೀಕರಿಸಿದ ಕೂಡಲೇ ಅವುಗಳ ಬೆಳವಣಿಗೆಗೆ ಹಾಗೂ ಶ್ರೀಮಂತಿಕೆಗೆ ಸ್ಫೂರ್ತಿಯೊದಗಿಸಿದಂತಾಗುತ್ತದೆ.

ಇತ್ತೀಚಿನ ಚರ್ಚೆಗಳನ್ನು ಗಮನಿಸಿದಾಗ ಶಾಲೆಗಳಲ್ಲಿ ಅಂದರೆ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಣ ಮಾಧ್ಯಮ ಯಾವುದಿರಬೇಕೆಂಬ ಬಗ್ಗೆ ನಮ್ಮ ಸಾಹಿತಿಗಳು, ಶಿಕ್ಷಣ ತಜ್ಞರು, ಭಾಷಾ ತಜ್ಞರು, ಮನೋವಿಜ್ಞಾನಿಗಳು, ಸಮಾಜಶಾಸ್ತ್ರಜ್ಞರಲ್ಲಿ ಹಲವಾರು ಭಿನ್ನಾಭಿಪ್ರಾಯಗಳು ಇರುವುದು ಕಂಡುಬಂದಿದೆ. ಅಷ್ಟೇ ಏಕೆ? ನಮ್ಮ ನ್ಯಾಯಾಂಗ ವ್ಯವಸ್ಥೆಯಲ್ಲಿ ಕೆಲವು ಭಿನ್ನತೆಗಳಿರುವುದನ್ನ ಗುರುತಿಸಬಹುದಾಗಿದೆ. ಶಿಕ್ಷಣ ಮಾಧ್ಯಮ ಕುರಿತು ಸುಪ್ರೀಂ ಕೋರ್ಟ್ ೧೯೯೩ ಡಿಸೆಂಬರ್ ೩ರಂದು ಮಹತ್ವದ ತೀರ್ಪು ನೀಡಿದೆ. ಭಾಷಾ ಅಲ್ಪಸಂಖ್ಯಾತರು ತಮ್ಮ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳಲು ತಮ್ಮ ಮಾತೃಭಾಷೆ ಯಾವುದೋ ಆ ಮಾಧ್ಯಮದ ಶಾಲೆಗಳನ್ನು ಆರಂಭಿಸಲು ಸಂವಿಧಾನ ಅವಕಾಶ ಕಲ್ಪಿಸಿಕೊಟ್ಟಿದೆಯೆ ಹೊರತು ಇಂಗ್ಲೀಷ್ ಮಾಧ್ಯಮ ಶಾಲೆಗಳನ್ನಲ್ಲ. ಭಾರತದಲ್ಲಿ ಆಂಗ್ಲೋ-ಇಂಡಿಯನ್ನರ ಮಾತೃಭಾಷೆ ಇಂಗ್ಲೀಷ್ ಉಳಿದಂತೆ ಯಾರ ಮಾತೃಭಾಷೆಯೋ ಇಂಗ್ಲೀಷ್ ಅಲ್ಲ ಎಂದು ನ್ಯಾಯಾಲಯ ಸ್ಪಷ್ಟಪಡಿಸಿದೆ. ಈ ತೀರ್ಪಿನನ್ವಯ ಕರ್ನಾಟಕ ಸರ್ಕಾರ ೨೯.೦೪.೧೯೯೪ರಲ್ಲಿ ಒಂದು ಆದೇಶವನ್ನು ಹೊರಡಿಸಿತು. ಒಂದರಿಂದ ನಾಲ್ಕನೇ ತರಗತಿ ವರೆಗೆ ಕನ್ನಡ ಅಥವಾ ಮಾತೃಭಾಷಾ ಮಾಧ್ಯಮ ಕಡ್ಡಾಯವಾಗಬೇಕು. ಐದನೇ ತರಗತಿಯಿಂದ ಮಕ್ಕಳು ತಮಗೆ ಇಷ್ಟವಾದ ಮಾಧ್ಯಮಗಳನ್ನು ಆಯ್ಕೆ ಮಾಡಿಕೊಳ್ಳಬಹುದು ಎಂದು ಸ್ಪಷ್ಟವಾಗಿ ತಿಳಿಸಿದೆ. ಆದರೆ ರಾಜ್ಯ ಹೈಕೋರ್ಟ್ ೦೨-೦೭-೨೦೦೮ರಂದು ವ್ಯತಿರಿಕ್ತ ತೀರ್ಪು ನೀಡಿ ಗೊಂದಲಗಳನ್ನು ಸೃಷ್ಟೀಕರಿಸುವುದರಿಂದ ಎಷ್ಟರ ಮಟ್ಟಿಗೆ ಸರಿ? ಎಂಬುದನ್ನು ಮತ್ತೊಮ್ಮೆ ಅವಲೋಕಿಸಬೇಕಾಗಿದೆ.

ಕಳೆದ ಜುಲೈ ಎರಡು ೨೦೦೮ರಂದು ಹೈಕೋರ್ಟ್ ನೀಡಿದ ತೀರ್ಪಿನಲ್ಲಿ ಕನ್ನಡ ಪರವಾದ ಮತ್ತು ಕನ್ನಡದ ವಿರುದ್ಧವಾದ ಅಭಿಪ್ರಾಯಗಳಿವೆ. ಅವುಗಳಲ್ಲಿ ಮೊದಲಿಗೆ ಕನ್ನಡ ಪರವಾದ ಅಭಿಪ್ರಾಯಗಳಿವೆ. ಅವುಗಳನ್ನು ಈ ರೀತಿಯಲ್ಲಿ ಕಾಣಬಹುದು. ಸರ್ಕಾರಿ ಶಾಲೆ ಅಥವಾ ಸರ್ಕಾರದಿಂದ ಅನುದಾನ ಪಡೆಯುತ್ತಿರುವ ಶಾಲೆಗಳಲ್ಲಿ ಕನ್ನಡ ಮಾಧ್ಯಮದ ಮೂಲಕ ಕಲಿಸುವುದನ್ನು ನ್ಯಾಯಾಲಯ ಸಮರ್ಥಿಸಿದೆ. ಹಾಗೇಯೆ ಕನ್ನಡ ಮಾತೃಭಾಷೆಯಾಗಿರುವ ವಿದ್ಯಾರ್ಥಿಗಳು ಕನ್ನಡವನ್ನು ಪ್ರಥಮ ಭಾಷೆಯಾಗಿದೆ ಎಂದು ಸಮರ್ಥಿಸಿದೆ. ಅಲ್ಲದೆ ಮಾತೃಭಾಷೆಯಲ್ಲದ ವಿದ್ಯಾರ್ಥಿಗಳು ಕನ್ನಡವನ್ನು ಒಂದು ಭಾಷೆಯಾಗಿ ಕಡ್ಡಾಯವಾಗಿ ಕಲಿಯಬೇಕು ಎಂಬುದನ್ನು ಒಪ್ಪಿಕೊಂಡಿವೆ. ಇವೆಲ್ಲವು ಕನ್ನಡಪರ ಸಂಘಟನೆ ಆಶಯಕ್ಕೆ ಪೂರಕವಾಗಿವೆ.

ಆದರೆ ಇನ್ನೊಂದು ತೀರ್ಪು ಬಹುತೇಕ ಕನ್ನಡ ಪರ ಚಿಂತಕರ ಅಸಮಧಾನಕ್ಕೆ ಕಾರಣವಾಗಿದೆ. ಸರ್ಕಾರದಿಂದ ಅನುದಾನ ಪಡೆಯದ ಖಾಸಗಿ ಶಾಲೆಗಳು ಕಡ್ಡಾಯವಾಗಿ ಕನ್ನಡ ಮಾಧ್ಯಮದಲ್ಲಿ ಕಲಿಸಬೇಕು ಎಂಬ ನಿಬಂಧನವನ್ನು ಸರ್ಕಾರವು ಅವುಗಳ ಮೇಲೆ ಏರುತ್ತಿದ್ದಂತಿಲ್ಲ ಎಂಬುದೇ ಆ ತೀರ್ಪು. ಆ ಖಾಸಗಿ ಶಾಲೆಗಳು ತಮಗೆ ಇಷ್ಟಬಂದ ಮಾಧ್ಯಮದಲ್ಲಿ ಬೋಧಿಸಲು ಸ್ವಾತಂತ್ರ ಎಂದು ತೀರ್ಪು ಹೇಳುತ್ತದೆ. ಈ ತೀರ್ಪು ಸರ್ಕಾರದಿಂದ ಹಾಗೂ ಕನ್ನಡಪರ ಹೋರಾಟದಿಂದ ಸ್ವಾಭಿಮಾನದ ಮೇಲೆ ಬರೆ ಏಳೆದಿದೆ. ಅಲ್ಲದೆ ಈ ತೀರ್ಪು ಕೆಲವರಲ್ಲಿ ಸಂತಸ ಹಾಗೂ ಸ್ವಾಗತಾರ್ಹ ತಂದರೆ ಇನ್ನೂ ಕೆಲವರಲ್ಲಿ ಮನಸ್ಸಿಗೆ ನೋವುಂಟಾಗಿದೆ. ಈ ತೀರ್ಪು ಕುರಿತು ಕೆಲವರ ಅಭಿಪ್ರಾಯಗಳು ಈ ರೀತಿಯಾಗಿವೆ.

ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅಧ್ಯಕ್ಷ "ಮುಖ್ಯಮಂತ್ರಿ ಚಂದ್ರು" ರವರ ಅಭಿಪ್ರಾಯ ಈ ರೀತಿಯಾಗಿದೆ. "ಕನ್ನಡ ಕಡ್ಡಾಯವಲ್ಲ" ಎಂಬ ಹೈಕೋರ್ಟ್ ನೀಡಿರುವ ತೀರ್ಪು ಕನ್ನಡಪರವಾಗಿ ನಿಂತಿರುವ ಎಲ್ಲಾ ಕನ್ನಡಿಗರ ಮನಕ್ಕೆ ನೋವಾಗಿದ್ದು, ಕರ್ನಾಟಕಕ್ಕೆ ಅನ್ಯಾಯವಾಗಿದೆ. ಈ ಹಿಂದೆ ಸುಪ್ರೀಂ ಕೋರ್ಟ್ ಮಾತೃಭಾಷಾ ಮಾಧ್ಯಮದ ಪರವಾಗಿ ಎಲ್ಲಾ ಕಡೆಗೂ ಏಕರೂಪದ ಶಿಕ್ಷಣ ನೀತಿ ಇರುಬೇಕು ಎಂಬ ನೀತಿಗೆ ಇದು ವಿರುದ್ದವಾಗಿದೆ. ಈ ತೀರ್ಪಿನ ವಿರುದ್ದ ಸುಪ್ರೀಂ ಕೋರ್ಟ್‌ಗೆ ಮೇಲ್ಮನವಿ ಸಲ್ಲಿಸಲು ಮುಖ್ಯಮಂತ್ರಿಗೆ ಮನವಿ ಮಾಡಿದ್ದಾರೆ."

## ಸಿದ್ದಲಿಂಗಯ್ಯನವರ ಚಿಂತನೆ

ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷ "ಡಾ॥ ಸಿದ್ದಲಿಂಗಯ್ಯ" ರವರ ಅಭಿಪ್ರಾಯ ಈ ರೀತಿಯಾಗಿದೆ. "ಈ ತೀರ್ಪು ಅನಿರೀಕ್ಷಿತ ಹಾಗೂ ಅಷ್ಟೇ ದುರದೃಷ್ಟಕರ. ಈ ತೀರ್ಪಿನಿಂದಾಗಿ ಖಾಸಗಿ ಶಾಲೆಗಳ ಪಾಳೇಗಾರಿಕೆಗೆ ಮುಕ್ತ ಅವಕಾಶ ಸಿಕ್ಕಂತಾಗುತ್ತದೆ. ಇದು ಅಪಘಾತಕರವಾಗಿದೆ ಎಂದಿದ್ದಾರೆ. (ಪ್ರಜಾವಾಣಿ ೦೩.೦೭.೨೦೦೮)

ಶೈಕ್ಷಣಿಕ ಅವಾಂತರಗಳಿಗೆ ಅವಕಾಶ ಮಾಡಿಕೊಟ್ಟಂತಾಗುತ್ತದೆ. ಈ ತೀರ್ಪಿನ ವಿರುದ್ಧ ಸರ್ಕಾರ ಸುಪ್ರೀಂ ಕೋರ್ಟಿಗೆ ಮೇಲ್ಮನವಿ ಸಲ್ಲಿಸಬೇಕು ಹಾಗೂ ಈ ತೀರ್ಪು ಅನುಷ್ಠಾನಕ್ಕೆ ಬಾರದಂತೆ ತಡೆಯಾಜ್ಞೆ ಪಡೆಯಲು ಸುಪ್ರೀಂ ಕೋರ್ಟಿಗೆ ಮಧ್ಯಂತರ ಪರಿಹಾರಕ್ಕೆ ಅರ್ಜಿ ಸಲ್ಲಿಸಬೇಕು.

## ಡಾ ಹಂಪನಾಗರಾಜಯ್ಯ ರವರ ಚಿಂತನೆಗಳು

ಮಾತೃಭಾಷೆಯ ಶಿಕ್ಷಣ ಮಾಧ್ಯಮದ ವಿರುದ್ಧವಾಗಿ ಹೈಕೋರ್ಟ್ ನೀಡಿರುವ ತೀರ್ಪು ಪ್ರಾಥಮಿಕ ಶಿಕ್ಷಣದ ಆಶಯಗಳಿಗೆ ಘೋರ ಅನ್ಯಾಯ ಮಾಡುವಂತಾಗಿದೆ. ಈ ತೀರ್ಪಿನಿಂದ

ಮುಕ್ತ ಮಾರುಕಟ್ಟೆಯ ಖಾಸಗೀಕರಣ ನೀತಿಯನ್ನು ಈ ಮೂಲಕ ಶಿಕ್ಷಣ ಕ್ಷೇತ್ರದಲ್ಲಿಯೂ ಎತ್ತಿಹಿಡಿದಂತಾಗಿದೆ. ಅದರಲ್ಲೂ ಸರ್ಕಾರಿ ಮತ್ತು ಅನುದಾನಿತ ಶಾಲೆಗಳು ಮಾತ್ರವೇ ಕನ್ನಡ ಅಥವಾ ಮಾತೃಭಾಷೆಯ ಮಾಧ್ಯಮದಲ್ಲೇ ಶಿಕ್ಷಣ ನೀಡಬಹುದು. ಖಾಸಗಿ ಶಾಲೆಗಳಿಗೆ ಈ ನೀತಿ ಅನ್ವಯಿಸಬಹುದು ಎಂದು ಹೇಳಿರುವುದು ಶೈಕ್ಷಣಿಕ ಅಸಮಾನತೆಗಳಿಗೆ ನೀಡಿದ ಮನ್ನಣೆಯಾಗಿರುವ ಈ ಹಿಂದೆ ಸುಪ್ರೀಂ ಕೋರ್ಟ ಭಾಷಾ ನೀತಿಯ ಬಗ್ಗೆ ನೀಡಿದ ಆದೇಶಕ್ಕೆ ವಿರುದ್ಧವಾಗಿದೆ.

**ಚಂಪಾರವರ ಚಿಂತನೆಗಳು**

ಕನ್ನಡ ಸಾಹಿತ್ಯ ಪರಿಷತ್‌ನ ಮಾಜಿ ಅಧ್ಯಕ್ಷ ಪ್ರೊ॥ ಚಂದ್ರಶೇಖರ್ ಪಾಟೀಲ್ ರವರ ಅಭಿಪ್ರಾಯ ಈ ಕೆಳಗಿನಂತಿದೆ.

೧೯೯೪ರಲ್ಲಿ ಸುಪ್ರೀಂ ಕೋರ್ಟ್ ತೀರ್ಪಿನ ಆಧಾರದ ಮೇಲೆ ರಾಜ್ಯ ಸರ್ಕಾರ ಜಾರಿಗೊಳಿಸಿದ್ದ ಭಾಷಾ ನೀತಿಯನ್ನು ಹೈಕೋರ್ಟ್ ಅನುರ್ಜಿತಗೊಳಿಸಿರುವುದು ಕಾನೂನು ಬಿಕ್ಕಟ್ಟಿಗೆ ಆಸ್ಪದಮಾಡಿಕೊಟ್ಟಂತಾಗಿದೆ. ಇದು ಸಮಾನ ಶಿಕ್ಷಣ ನೀತಿಗೆ ವಿರುದ್ಧವಾದ ತೀರ್ಪು ಅಲ್ಲದೆ ಕನ್ನಡಪರ ಸಂಘಟನೆಗಳ ಹೋರಾಟಕ್ಕೂ ಹಿನ್ನಡೆಯಾಗಿದ್ದು ರಾಜ್ಯ ಸರ್ಕಾರ ಕೂಡಲೆ ಸುಪ್ರೀಂ ಕೋರ್ಟ್‌ಗೆ ಅರ್ಜಿ ಸಲ್ಲಿಸಿ ಹೈಕೋರ್ಟ್ ತೀರ್ಪಿಗೆ ತಡೆಯಾಜ್ಞೆ ತರಬೇಕು ಅಂದಿದ್ದಾರೆ.

**ಎಂ.ಎ.ಆನಂದ ರವರ ಚಿಂತನೆಗಳು**

ರಾಜ್ಯ ಖಾಸಗಿ ಶಾಲೆಗಳ ಆಡಳಿತ ಮಂಡಳಿ ಒಕ್ಕೂಟದ ಅಧ್ಯಕ್ಷ ಎಂ.ಎ.ಆನಂದ ರವರ ಅಭಿಪ್ರಾಯ ಈ ಕೆಳಗಿನಂತಿದೆ.

ಹೈಕೋರ್ಟ್ ತೀರ್ಪು ಒಕ್ಕೂಟದ ಎಲ್ಲಾ ಸದಸ್ಯರಿಗೂ ಸಂತಸ ತಂದಿದೆ. ಇದರಿಂದ ನಾವು ಹೋರಾಟದಲ್ಲಿ ಶೇ. ೭೫ರಷ್ಟು ಗೆದ್ದಂತಾಗಿದೆ. ಉಳಿದ ೨೫%ರಷ್ಟು ಸರ್ಕಾರಕ್ಕೆ ಮನವಿ ಸಲ್ಲಿಸುವುದರ ಮೂಲಕ ಗೆಲ್ಲುತ್ತೇವೆ. ಇದೊಂದು ಮಹತ್ವದ ತೀರ್ಪಾಗಿದ್ದು, ಮುಂದಿನ ಹೋರಾಟಕ್ಕೆ ಸ್ಫೂರ್ತಿ ನೀಡಿದೆ. ಸರ್ಕಾರ ನಮ್ಮ ಮನವಿ ಪುರಸ್ಕರಿಸಿದ್ದಾರೆ. ಸಂಘ ಪುನಃ ನ್ಯಾಯಾಲಯದ ಮೆಟ್ಟಿಲೇರುತ್ತಿದೆ.

**ಬರಗೂರು ರಾಮಚಂದ್ರಪ್ಪನವರ ಚಿಂತನೆ**

ಪ್ರೊ॥ ಬರಗೂರು ರಾಮಚಂದ್ರಪ್ಪ ರವರ ಅಭಿಪ್ರಾಯ ಈ ಕೆಳಗಿನಂತಿದೆ : ಮಾತೃಭಾಷೆಯ ಶಿಕ್ಷಣ ಮಾಧ್ಯಮದ ವಿರುದ್ಧವಾಗಿ ಹೈಕೋರ್ಟ್ ನೀಡಿರುವ ತೀರ್ಪು ಪ್ರಾಥಮಿಕ ಶಿಕ್ಷಣದ

ಆಶಯಗಳಿಗೆ ಘೋರ ಅನ್ಯಾಯ ಮಾಡುವಂತಾಗಿದೆ. ಈ ತೀರ್ಪಿನಿಂದ ಮುಕ್ತ ಮಾರುಕಟ್ಟೆಯ ಖಾಸಗೀಕರಣ ನೀತಿಯನ್ನು ಈ ಮೂಲಕ ಶಿಕ್ಷಣ ಕ್ಷೇತ್ರದಲ್ಲಿಯೂ ಎತ್ತಿಹಿಡಿದಂತಾಗಿದೆ. ಅದರಲ್ಲೂ ಸರ್ಕಾರಿ ಮತ್ತು ಅನುದಾನಿತ ಶಾಲೆಗಳು ಮಾತ್ರವೇ ಕನ್ನಡ ಅಥವಾ ಮಾತೃಭಾಷೆಯ ಮಾಧ್ಯಮದಲ್ಲೇ ಶಿಕ್ಷಣ ನೀಡಬಹುದು. ಖಾಸಗಿ ಶಾಲೆಗಳಿಗೆ ಈ ನೀತಿ ಅನ್ವಯಿಸಬಹುದು ಎಂದು ಹೇಳಿರುವುದು ಶೈಕ್ಷಣಿಕ ಅಸಮಾನತೆಗಳಿಗೆ ನೀಡಿದ ಮನ್ನಣೆಯಾಗಿರುವ ಈ ಹಿಂದೆ ಸುಪ್ರೀಂ ಕೋರ್ಟ ಭಾಷಾ ನೀತಿಯ ಬಗ್ಗೆ ನೀಡಿದ ಆದೇಶಕ್ಕೆ ವಿರುದ್ಧವಾಗಿದೆ.

**ಸಿಂಧ್ಯಾರವರ ಚಿಂತನೆಗಳು**

ಮಾಜಿ ಸಚಿವ ಪಿ.ಜಿ.ಆರ್.ಸಿಂಧ್ಯಾರವರ ಹೇಳಿಕೆ ಈ ಕೆಳಗಿನಂತಿದೆ : ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷಾ ಮಾಧ್ಯಮದಲ್ಲಿ ಮಕ್ಕಳಿಗೆ ಶಿಕ್ಷಣ ಕೊಡುವುದರಿಂದ ಗ್ರಾಮೀಣ ಭಾಗದ ಮಕ್ಕಳಿಗೆ ಅಗತ್ಯಕ್ಕೆ ಪ್ರಯೋಜನ ಹಾಗೂ ಇತರ ಸಾಧಕಬಾಧಕಗಳ ಬಗ್ಗೆ ಶಿಕ್ಷಣ ತಜ್ಞರು ಹಾಗೂ ಸಾಹಿತಿಗಳೊಂದಿಗೆ ಸರ್ಕಾರ ಮೊದಲು ಚರ್ಚೆ ನಡೆಸಬೇಕು. ಇತರ ರಾಜ್ಯಗಳಲ್ಲಿ ಅಲ್ಲಿನ ಮಾತೃಭಾಷೆಗೆ ನೀಡುತ್ತಿರುವ ಸ್ಥಾನಮಾನತೆಯನ್ನು ಗಣನೆಗೆ ತೆಗೆದುಕೊಂಡು ನಂತರ ಸರ್ಕಾರ ಮುಂದಿನ ಕ್ರಮ ಕೈಗೊಳ್ಳಬೇಕು.

**ಟಿ.ಎ. ನಾರಾಯನಗೌಡರವರ ಚಿಂತನೆಗಳು**

ಟಿ.ಎ.ನಾರಾಯನಗೌಡ, ರಾಜ್ಯ ಘಟಕದ ಅಧ್ಯಕ್ಷರು, 'ಕರ್ನಾಟಕ ರಕ್ಷಣಾ ವೇದಿಕೆ' ರವರ ಹೇಳಿಕೆ ಈ ಕೆಳಗಿನಂತಿದೆ : ಹೈಕೋರ್ಟ್ ನೀಡಿರುವ ತೀರ್ಪು ಕನ್ನಡ ಭಾಷೆಯ ಉಳಿವಿಗೆ ಪೂರಕವಾಗಿದೆ. ಸರ್ಕಾರ ಕೂಡಲೆ ಕಾನೂನು ತಜ್ಞರ ನೆರವನ್ನು ಪಡೆದು ಸುಪ್ರೀಂ ಕೋರ್ಟ್‌ನಲ್ಲಿ ಈ ಆದೇಶಕ್ಕೆ ತಡೆಯಾಜ್ಞೆ ತರಬೇಕು.

**ಜಿ.ಆಶ್ವತ್ ನಾರಾಯಣ ರವರ ಚಿಂತನೆಗಳು**

ಜಿ.ಅಶ್ವತ್ ನಾರಾಯಣ, ಅಧ್ಯಕ್ಷರು, 'ಕನ್ನಡ ನಾಡು-ನುಡಿ ರಕ್ಷಣಾ ಸಮಿತಿ' ರವರ ಅಭಿಪ್ರಾಯ ಈ ಕೆಳಗಿನಂತಿದೆ : ಭಾಷಾ ನೀತಿಯ ವಿರುದ್ಧವಾಗಿ ಹೈಕೋರ್ಟ್ ತೀರ್ಪು ನೀಡಿದೆ. ಸಮಾನ ಶಿಕ್ಷಣ ನೀತಿಗೂ ವಿರುದ್ಧವಾದ ತೀರ್ಪು ಅಲ್ಲದೆ ಕನ್ನಡಪರ ಸಂಘಟನೆಗಳಿಗೆ ಹೋರಾಟಕ್ಕೆ ಹಿನ್ನಡೆಯಾಗಿದೆ. ರಾಜ್ಯ ಸರ್ಕಾರ ಕೂಡಲೆ ಸುಪ್ರೀಂ ಕೋರ್ಟ್‌ಗೆ ಅರ್ಜಿ ಸಲ್ಲಿಸಿ, ಹೈಕೋರ್ಟ್ ತೀರ್ಪಿಗೆ ತಡೆಯಾಜ್ಞೆ ತರಬೇಕು.

**ಕೆ.ಸಿ.ಜಗನ್ನಾಥ ರೆಡ್ಡಿ ಚಿಂತನೆಗಳು**

ಕೆ.ಸಿ.ಜಗನ್ನಾಥ ರೆಡ್ಡಿ, ಅಧ್ಯಕ್ಷರು, ದುಂಡು ಪ್ರದೇಶದ ಕನ್ನಡ ಸಂಘಟನೆಗಳ ಒಕ್ಕೂಟ

ರವರ ಹೇಳಿಕೆ ಈ ಕೆಳಗಿನಂತಿದೆ : ಹೈಕೋರ್ಟ್ ತೀರ್ಪು ಕನ್ನಡಕ್ಕೆ ಬರೆದ ಮರಣಶಾಸನವಾಗಿದೆ. ಇದರಿಂದ ಇಂಗ್ಲೀಷ್ ಪ್ರಾಬಲ್ಯ ಹೆಚ್ಚಲು ಸಹಾಯಕವಾಗುತ್ತದೆ. ಈ ತೀರ್ಪಿನ ವಿರುದ್ಧ ಸರ್ಕಾರ ಸುಪ್ರೀಂ ಕೋರ್ಟ್‌ಗೆ ಮೇಲ್ಮನವಿ ಸಲ್ಲಿಸಬೇಕು ಹಾಗೂ ಕನ್ನಡಕ್ಕೆ ಆಗುತ್ತಿರುವ ಅನ್ಯಾಯದ ಬಗ್ಗೆ ಪ್ರಬಲ ವಾದ ಮಂಡಿಸಬೇಕು ಎಂದು ಹೇಳಿದ್ದಾರೆ.

**ಮಲ್ಲೇಶರವರ ಚಿಂತನೆಗಳು**

ಮಲ್ಲೇಶ್ ಕನ್ನಡ ಕ್ರಿಯಾ ಸಮಿತಿಯ ಅಧ್ಯಕ್ಷರು ಈ ರೀತಿ ಹೇಳಿದ್ದಾರೆ : "ಮೊದಲ ನೋಟಕ್ಕೆ ಭಾಷಾ ಮಾಧ್ಯಮದ ಬಗೆ ಉಚ್ಛನ್ಯಾಯಾಲಯದ ತೀರ್ಪು ಕನ್ನಡಕ್ಕೆ ಮತ್ತೊಮ್ಮೆ ಪೂರಕವಾದುದಲ್ಲ. ಮುಂದಿನ ಪೀಳಿಗೆಯು ನಿರ್ಮಾಣಕ್ಕೆ ಕೊಟ್ಟಿರುವ ಮಾರಣಾಂತಕ ಆಘಾತ" ಎಂದು ಹೇಳಿದ್ದಾರೆ.

**ಜಿ.ಎಸ್.ಶರ್ಮಾ ಶುಷ್ಮಾರವರ ಚಿಂತನೆಗಳು**

ಜಿ.ಎಸ್.ಶರ್ಮಾ ಶುಷ್ಮಾ, ಅಧ್ಯಕ್ಷರವರ ಅಭಿಪ್ರಾಯ ಈ ರೀತಿಯಾಗಿದೆ : "ಭಾಷಾ ನೀತಿ ಸಂಬಂಧ ಹೈಕೋರ್ಟ್ ನೀಡಿರುವ ತೀರ್ಪು ಸ್ವಾಗತಾರ್ಹ. ರಾಜ್ಯ ಸರ್ಕಾರ ಇದುವರೆಗೂ ಒಂದು ಕಣ್ಣಿಗೆ ಸುಣ್ಣ, ಒಂದು ಕಣ್ಣಿಗೆ ಬೆಣ್ಣೆ ಎಂಬ ನೀತಿಯನ್ನು ಅನುಸರಿಸುತ್ತಿತ್ತು. ಧರ್ಮ, ಭಾಷೆ, ಸಂಸ್ಕೃತಿ ವಿಚಾರದಲ್ಲಿ ಪೋಷಕರಿಗೆ ತಮಗೆ ಬೇಕಾದ ಹಾಗೆ ನಡೆದುಕೊಳ್ಳುವ ಹಕ್ಕನ್ನು ನೀಡಿದೆ. ತಮ್ಮ ಮಗು ಯಾವ ಭಾಷೆಯಲ್ಲಿ ಕಲಿಯಬೇಕು ಎಂಬ ಹಕ್ಕನ್ನು ನಿರ್ಧರಿಸುವ ಹಕ್ಕು ಪ್ರತಿಯೊಬ್ಬ ತಂದೆತಾಯಿಗೂ ಇದೆ. ಆದರೆ ಆ ಹಕ್ಕನ್ನು ಸರ್ಕಾರ ಕಿತ್ತುಕೊಂಡಿತು. ನ್ಯಾಯಾಲಯದ ತೀರ್ಪಿನಿಂದಾಗಿ ಮರಳಿ ಆ ಹಕ್ಕು ದೊರೆತಂತಾಗಿದೆ" ಎಂದಿದ್ದಾರೆ.

**ಕೃಷ್ಣಯ್ಯರ್‌ರವರ ಚಿಂತನೆಗಳು**

ಕೃಷ್ಣಯ್ಯರ್, ಕೆ.ಎಂ.ಎಂ.ಎಸ್. ಪ್ರಧಾನ ಕಾರ್ಯದರ್ಶಿಯವರ ಅಭಿಪ್ರಾಯ : ಹೈಕೋರ್ಟ್ ನೀಡಿರುವ ತೀರ್ಪು ೧೯೯೪ಳಕ್ಕು ಮುನ್ನ ಇದ್ದ ೧೧೦೦ ಅನುದಾನ ರಹಿತ ಶಾಲೆಗಳಿಗೆ ಅನ್ವಯವಾಗುತ್ತದೆ. ಈ ಶಾಲೆಗಳು ಇಂಗ್ಲೀಷ್ ಮಾಧ್ಯಮದಲ್ಲಿ ಮುಂದುವರೆಸಲು ಈ ಮೂಲಕ ಅನುಮತಿ ದೊರೆತಿದೆ. ೧೯೯೪ಳರ ಭಾಷಾ ನೀತಿ ಕಾಯ್ದೆಯ ರಚನೆಯ ನಂತರ ಪ್ರಾರಂಭವಾದ ಅನುದಾನ ರಹಿತ ಶಾಲೆಗಳಲ್ಲಿ ಪೋಷಕರ ಪರವಾಗಿ ಸರ್ಕಾರಕ್ಕೆ ಮನವಿ ಸಲ್ಲಿಸಿ ಇಂಗ್ಲೀಷ್ ಮಾಧ್ಯಮದಲ್ಲೇ ಶಾಲೆ ಪ್ರಾರಂಭಿಸಲು ಅನುಮತಿಯನ್ನು ಕೋರಲು ಅವಕಾಶವಿದೆ ಎಂದಿದ್ದಾರೆ.

**ತಿರುಮಲ ರಾಮಚಂದ್ರರವರ ಚಿಂತನೆಗಳು**

ಇವರು ತೆಲುಗಿನ ದೊಡ್ಡ ವಿದ್ವಾಂಸರು. ಈಗ ಏಳೆಂಟು ವರ್ಷಗಳ ಹಿಂದೆ ತೀರಿಕೊಂಡರು.

ಇವರು ತಮ್ಮ ಆತ್ಮಕಥೆಯಲ್ಲಿ ಹಂಪಿ ಬಳಿಯ ಕಮಲಾಪುರ ಪಂಚಾಯತಿ ನಡೆಸುತ್ತಿದ್ದ ಏಕೈಕ ಶಾಲೆಯಲ್ಲಿ ನಡೆಸುತ್ತಿದ್ದ ಪಾಠ ಪ್ರವಚನೆ ಹಾಗೂ ಮಾಧ್ಯಮದ ಬಗ್ಗೆ ಈ ರೀತಿ ಹೇಳಿದ್ದಾರೆ. "ಪಂಚಾಯಿತಿಗೆ ಏಕೈಕ ಮುಖ್ಯಸ್ಥನಾಗಿ ಆಯ್ಕೆಯಾದರೆ ಶಾಲೆಯಲ್ಲಿ ಕನ್ನಡ ಮೀಡಿಯಂ ! ತೆಲುಗಿನವ ಆಯ್ಕೆಯಾದರೆ ಶಾಲೆಯಲ್ಲಿ ಕನ್ನಡ ತೆಲುಗು ಮೀಡಿಯಂ!! ಹಾಗಾಗಿ ಆ ಶಾಲೆಯಲ್ಲಿ ಯಾವಾಗ ಯಾವ ಮಾಧ್ಯಮದಲ್ಲಿ ಶಿಕ್ಷಣ ನಡೆಸುತ್ತಿದ್ದುತಂಬುದು ಚುನಾವಣೆಯ ಮೇಲೆ ಅವಲಂಬಿಸಿತು ಎಂದು ಅಭಿಪ್ರಾಯ ಪಟ್ಟಿದ್ದಾರೆ. (೦೭.೦೮.೨೦೦೮; ಪ್ರಜಾವಾಣಿ)

ಇದುವರೆಗೂ ಭಾಷಾ ಮಾಧ್ಯಮ ಕುರಿತು ಚರ್ಚೆಗಳನ್ನು ನೋಡಿದರೆ ಸ್ವತಂತ್ರ ನಂತರದ ಆಯೋಗಗಳು, ಗೋಕಾಕ್ ವರದಿ ಹಾಗೂ ಭಾಷಾತಜ್ಞರ, ಶಿಕ್ಷಣತಜ್ಞರ, ಕನ್ನಡಪರ ವ್ಯಕ್ತಿಗಳ ಚಿಂತನೆಗಳು ಮಗುವಿನ ಪ್ರಾಥಮಿಕ ಶಾಲೆಯ ಆ ಮಗುವಿನ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಲ್ಲಿಯೆ ನಡೆಯಬೇಕು ಎಂಬ ಧೋರಣೆಯನ್ನು ಒಳಗೊಂಡಿವೆ.

ಆದರೂ ನಮ್ಮ ಕರ್ನಾಟಕ ರಾಜ್ಯದಲ್ಲಿ ಶಿಕ್ಷಣದಲ್ಲಿ ಭಾಷಾ ಮಾಧ್ಯಮ ಕುರಿತ ವಿಷಯವು ಮತ್ತೆ ಬಿಕ್ಕಟ್ಟಿಗೆ ಸಿಲುಕಿದೆ. ಅನುದಾನರಹಿತ ಪ್ರಾಥಮಿಕ ಖಾಸಗಿ ಶಾಲೆಗಳು ಇಂಗ್ಲೀಷ್ ಮಾಧ್ಯಮದಲ್ಲಿ ಬೋಧಿಸಲು ಅವಕಾಶ ನೀಡುವಂತೆ ಹೈಕೋರ್ಟ್ ಪೂರ್ಣಪಾಠ ತೀರ್ಪಿತ್ತು. ಒಂದು ವರ್ಷವಾಗಿದ್ದರೂ ಅದನ್ನು ಪಾಲನೆ ಮಾಡದ ರಾಜ್ಯ ಸರ್ಕಾರವು ನ್ಯಾಯಾಲಯದಿಂದ ತೀವ್ರ ಮುಖಭಂಗ ಅನುಭವಿಸುವಂತಾಗಿದೆ. ಜುಲೈ ೮, ೨೦೦೯ರ ವೇಳೆಗೆ ಆದೇಶ ಪಾಲನೆ ಮಾಡದೇ ಹೋದರೆ ಸರ್ಕಾರ ಮತ್ತು ಅಧಿಕಾರಿಗಳ ವಿರುದ್ಧ ಆರೋಪ ನಿಗಧಿಮಾಡಬೇಕಾಗುತ್ತದೆಂದು ನ್ಯಾಯಮೂರ್ತಿಗಳು ಎಚ್ಚರಿಸಿದ್ದಾರೆ. ಹಾಗಾಗಿ ಸರ್ಕಾರಕ್ಕೆ ಸಂದಿಗ್ಧ ಸ್ಥಿತಿ ಉಂಟಾಗಿದೆ. ಕಾರಣ ನ್ಯಾಯಾಲಯದ ಆದೇಶವನ್ನು ಉಲ್ಲಂಘಿಸುವಂತಿಲ್ಲ ಹಾಗೂ ಕನ್ನಡ ಭಾಷಾಭಿಮಾನವನ್ನು ತೋರಬೇಕಾಗುತ್ತದೆ. ಇಂತಹ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಮಾತೃಭಾಷೆಯಲ್ಲಿಯೇ ಪ್ರಾಥಮಿಕ ಶಿಕ್ಷಣ ನೀಡಬೇಕು ಎಂಬ ನಿಲುವಿಗೆ ಸರ್ಕಾರ ಬದ್ಧವಾಗಿದೆ. ಸರ್ಕಾರ್ಕಕೆ ಬೆಂಬಲವಾಗಿ ಕನ್ನಡಪರ ಸಾಹಿತಿಗಳು, ವಿದ್ವಾಂಸರು, ಕರ್ನಾಟಕದ ಜನತೆ ಮುಂದಾಗಿದೆ. ಇದರಿಂದ ಸರ್ಕಾರ ಹೈಕೋರ್ಟ್‌ನ ಆದೇಶವನ್ನು ಪ್ರಶ್ನಿಸಿ ಸುಪ್ರೀಂ ಕೋರ್ಟ್‌ಗೆ ವಿಶೇಷ ಮೇಲ್ಮನವಿ ಸಲ್ಲಿಸಿದೆ. ಸುಪ್ರೀಂ ಕೋರ್ಟ್‌ನ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಚರ್ಚೆ ನಡೆಸುತ್ತಿದೆ.

ಈ ಚರ್ಚೆಯ ಹಿನ್ನಲೆಯಲ್ಲಿ ಒಂದು ನಿರ್ಧಾರಕ್ಕೆ ಬರಬಹುದು. ಅದು ಏನೆಂದರೆ, ಈ ವಿಚಾರದಲ್ಲಿ ಪೋಷಕರ ಮನೋಭಾವನೆ ಬದಲಾಗಬೇಕು. ಪೋಷಕರು ತಮ್ಮ ಮಕ್ಕಳಿಗೆ ಮನೆಮಾತಿನಲ್ಲಿ ಮಾತೃಭಾಷೆಯ ಮೂಲಕ ಶಿಕ್ಷಣ ಕೊಡಿಸಲು ಮುಂದಾಗಬೇಕು. ಬೇಕಾದರೆ ತಮ್ಮ ಮಕ್ಕಳಿಗೆ

ಒಂದು ವಿಷಯವಾಗಿ ಇಂಗ್ಲೀಷನ್ನು ಕಲಿಸಿ ಆ ಮೂಲಕ ಮಕ್ಕಳಲ್ಲಿ ಇಂಗ್ಲೀಷ್ ಭಾಷೆಯನ್ನು ಕಲಿಸಲು ಮುಂದಾದರೆ ಮಾತ್ರ ಮಕ್ಕಳ ಅಭಿವೃದ್ಧಿ ಸಾಧ್ಯವೆನ್ನಬಹುದು

ಈಗಾಗಲೇ ನೋಡಿದಂತೆ ಮಾತೃಭಾಷೆಯಿಂದ ಗ್ರಹಣಶಕ್ತಿ ತೀವ್ರವಾಗುತ್ತದೆ. ಅಭಿವ್ಯಕ್ತಿ ಶಕ್ತಿ ಪ್ರಖಾರವಾಗುತ್ತದೆ. ಆತ್ಮವಿಶ್ವಾಸ ಹೆಚ್ಚುತ್ತದೆ. ಆಲೋಚನಾ ಶಕ್ತಿ ಮತ್ತು ಪ್ರತಿಭಾ ಸಾಮರ್ಥ್ಯ ಅರಳುತ್ತದೆಂದು ಜಗತ್ತಿನ ಎಲ್ಲಾ ಮನೋವಿಜ್ಞಾನಿಗಳು, ಶಿಕ್ಷಣಾ ತಜ್ಞರು, ರಾಜಕಾರಣಿಗಳು, ಸಾಹಿತಿಗಳು ಒಪ್ಪಿಕೊಂಡಿದ್ದಾರೆ. ಅಲ್ಲದೆ ಶಿಕ್ಷಣ ಪರಿಣಾಮಕಾರಿಯಾಗಲು ಮಾತೃಭಾಷೆ ಅನಿವಾರ್ಯವಾಗಿದೆ.

**ಅಡಿಟಿಪ್ಪಣಿಗಳು**

೦೧. ಟಿ.ಎಂ.ಕುಮಾರ್, ಪ್ರಾಥಮಿಕ ಶಿಕ್ಷಣ ಒಂದು ಚರ್ಚೆ, ಪುಟ-೯೫
೦೨. ಡಾ. ಎಸ್.ವಿ.ಯಾದವಾಡ್, ಶಿಕ್ಷಣ, ಪುಟ-೨೦೧
೦೩. ಕರ್ನಾಟಕ ಸರ್ಕಾರ, ಓದುವೆ ನಾನು ಶಿಕ್ಷಕರ ಮಾರ್ಗದರ್ಶಿ, ಪುಟ-೬
೦೪. ಅದೆ ಪುಟ-೮
೦೫. ಅದೆ, ಪುಟ-೯
೦೬. ಹೊಳೆಯಣ್ಣನವರು, ಕನ್ನಡ ವಿಷಯಾಧಾರಿತ ಬೋಧನಾ ಪದ್ಧತಿ, ಪುಟ-೩೫೨
೦೭. ಅದೆ, ಪುಟ-೩೫೫
೦೮. ಡಾ. ಎಸ್.ವಿ.ಯಾದವಾಡ್, ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ಪುಟ-೩೪೯
೦೯. ಅದೆ, ಪುಟ-೩೪೯
೧೦. ಅದೆ, ಪುಟ-೩೪೯
೧೧. ಡಾ. ಎಸ್.ವಿ.ಯಾದವಾಡ್, ಶಿಕ್ಷಣ, ಪುಟ-೨೩೮
೧೨. ಅದೆ, ಪುಟ-೨೪೧
೧೩. ಅದೆ, ಪುಟ-೨೪೨
೧೪. ಡಾ. ಎಸ್.ವಿ.ಯಾದವಾಡ್, ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ಪುಟ-೧೩೭
೧೫. ಅದೆ, ಪುಟ-೧೪೧
೧೬. ಡಿ.ಎಸ್.ಇ.ಆರ್.ಟಿ., ಶಿಕ್ಷಣದ ಪರಿಕಲ್ಪನಾತ್ಮಕ ಬುನಾದಿಗಳು, ಪುಟ - ೧೨
೧೭. ಡಾ. ಎಸ್.ವಿ.ಯಾದವಾಡ್, ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ಪುಟ-೧೫೩
೧೮. ಅದೆ, ಪುಟ-೧೫೫
೧೯. ಸಿ.ವಿ.ಜಯಣ್ಣ, ಶಿಕ್ಷಣದ ಪರಿಕಲ್ಪನಾತ್ಮಕ ಬುನಾದಿಗಳು, ಪುಟ - ೨೫
೨೦. ಡಿ.ಎಸ್.ಇ.ಆರ್.ಟಿ., ಶಿಕ್ಷಣದ ಪರಿಕಲ್ಪನಾತ್ಮಕ ಬುನಾದಿಗಳು, ಪುಟ - ೧೪
೨೧. ಡಾ. ಎಸ್.ವಿ.ಯಾದವಾಡ್, ಶಿಕ್ಷಣ, ಪುಟ-೧೬೪
೨೨. ಅದೆ, ಪುಟ-೧೬೯
೨೩. ಅದೆ, ಪುಟ-೧೭೧
೨೪. ಸಿ.ವಿ.ಜಯಣ್ಣ, ಶಿಕ್ಷಣದ ಪರಿಕಲ್ಪನಾತ್ಮಕ ಬುನಾದಿಗಳು, ಪುಟ - ೨೫
೨೫. ಡಾ. ಎಸ್.ವಿ.ಯಾದವಾಡ್, ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ಪುಟ-೧೯೬

೨೬. ಅದೆ, ಪುಟ-೧೯೭

೨೭. ಸಿ.ವಿ.ಜಯಣ್ಣ, ಶಿಕ್ಷಣದ ಪರಿಕಲ್ಪನಾತ್ಮಕ ಬುನಾದಿಗಳು, ಪುಟ-೧೫

೨೮. ಕರ್ನಾಟಕ ಸಾಹಿತ್ಯ ಪರಿಷತ್, ಶಿಕ್ಷಣಾ ಮಾಧ್ಯಮ ಕನ್ನಡಪರ ಆಂದೋಲನಾ ಮತ್ತು ವರದಿಗಳು, ಪುಟ-೯

೨೯. ಡಾ. ಎಸ್.ವಿ.ಯಾದವಾಡ್, ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ಪುಟ-೨೦೯

೩೦. ಕನ್ನಡ, ಕನ್ನಡಿಗ, ಕರ್ನಾಟಕ, ಪುಟ-೭೨

೩೧. ಅದೆ, ಪುಟ-೭೩

೩೨. ಅನಸೂಯ ವಿ.ಪರಗಿ, ಮಾತೃಭಾಷೆ ತತ್ವ ಮತ್ತು ಬೋಧನಾ ಮಾರ್ಗ, ಪುಟ-೪೨,೪೩,೪೪,೪೬

೩೩. ಡಿ.ಎಸ್.ಇ.ಆರ್.ಟಿ., ಕನ್ನಡ ವಿಷಯಾಧಾರಿತ ಬೋಧನಾ ಪದ್ಧತಿ, ಪುಟ-೧೭

೩೪. ಓಬಳೇಶ್ ಗಟ್ಟಿ, ಕನ್ನಡ ವಿಷಯಾಧಾರಿತ ಬೋಧನಾ ಪದ್ಧತಿ, ಪುಟ-೨೪, ೨೫

ಅಧ್ಯಾಯ ೪

# ಭಾಷಾ ಬೋಧನೆ ಹಾಗೂ ಕಲಿಕೆಗಿರುವ ಸಮಸ್ಯೆಗಳು

ಶೈಕ್ಷಣಿಕ ಪ್ರಕ್ರಿಯೆಯಲ್ಲಿ ಬೋಧನೆ ಹಾಗೂ ಕಲಿಕೆಯು ಮಹತ್ವಪೂರ್ಣವಾದ ಅಂಶಗಳಾಗಿವೆ. ಇವು ಎರಡು ಪರಸ್ಪರ ಒಂದೇ ಬಂಡಿಯ ಎರಡು ಗಾಲಿಗಳಂತೆ ಕಾರ್ಯನಿರ್ವಹಿಸಬೇಕು. ಇಲ್ಲದಿದ್ದರೆ ಶೈಕ್ಷಣಿಕ ಸ್ಥಿತಿಗತಿಯು ಕುಂಠಿತವಾಗುತ್ತದೆ. ಇಂತಹ ಬೋಧನೆ ಹಾಗೂ ಕಲಿಕೆಗೆ ಹಲವಾರು ಸಮಸ್ಯೆಗಳಿವೆ. ಅವುಗಳನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

## ಪಠ್ಯಮೂಲ ಸಮಸ್ಯೆಗಳು

ಮಕ್ಕಳು ಓದುವಾಗ ಮತ್ತು ಬರೆಯುವಾಗ ಮಾಡುವ ಸಮಸ್ಯೆಗಳು/ವ್ಯತ್ಯಾಸಗಳಿಗೆ ಪಠ್ಯಕ್ರಮವು ಕೂಡ ಕಾರಣವಾಗಬಹುದು ಎಂದು ಹೇಳಲಾಗುತ್ತದೆ. ಪಠ್ಯಕ್ರಮವು ಮನೋವೈಜ್ಞಾನಿಕ ಹಿನ್ನಲೆಯಲ್ಲಿ ರಚನೆಯಾಗಿದ್ದರು ಅದರಲ್ಲಿ ಅನೇಕ ದೋಷಗಳಿರುವುದು ಕಂಡು ಬರುತ್ತದೆ. ಮುಖ್ಯವಾಗಿ ಪಠ್ಯಕ್ರಮವು ಸ್ಥಳೀಯ ಅಗತ್ಯತೆಗೆ ಅನುಗುಣವಾಗಿ ಇಲ್ಲದಿರುವುದು, ಪಠ್ಯಕ್ರಮದಲ್ಲಿರುವ ದೋಷಗಳು ಹಾಗೂ ಅನಾವಶ್ಯಕ ಅಂಶಗಳನ್ನು ತೆಗೆದುಹಾಕದಿರುವುದು. ಪದೇಪದೇ ಪಠ್ಯ ಬದಲಾಯಿಸುವುದು, ಪಠ್ಯಕ್ರಮವನ್ನು ರಚಿಸುವಾಗ ಸ್ಥಳೀಯ ಸಂಪನ್ಮೂಲ ವ್ಯಕ್ತಿಗಳು, ಭಾಷಾ ಶಿಕ್ಷಕರು ಸಮಿತಿಯಲ್ಲಿ ಇಲ್ಲದೇ ಇರುವುದು, ಯಾರೋ ರಚಿಸಿದ ಪಠ್ಯಕ್ರಮವನ್ನು ಯಾರೋ ಬೋಧಿಸುವುದು, ಭಾಷಾ ಚಟುವಟಿಕೆಗಳು ಸಮರ್ಪಕವಾಗಿ ಇಲ್ಲದಿರುವುದು, ಸಾಹಿತ್ಯದ ಎಲ್ಲಾ ಪ್ರಕಾರಗಳಿಗೆ ಅವಕಾಶ ಇಲ್ಲದಿರುವುದು ಸಹ ಪರಿಣಾಮಕಾರಿ ಕಲಿಕೆಗೆ ಅಡ್ಡಿಯುಂಟಾಗುತ್ತದೆ ಎನ್ನಬಹುದು. ಆದ್ದರಿಂದ ಪಠ್ಯಕ್ರಮ ಸ್ಥಳೀಯ ಸಂಪನ್ಮೂಲಗಳಿಗೆ ಅನುಗುಣವಾಗಿ ಸ್ಥಳೀಯರಿಂದ ಭಾಷಾ ಚಟುವಟಿಕಗಳು

ಹಾಗೂ ಸಾಹಿತ್ಯದ ಪ್ರಕಾರಗಳನ್ನು ಒಳಗೊಂಡಂತೆ ವ್ಯವಸ್ಥಿತವಾಗಿ ರಚನೆಮಾಡಿದಾಗ ತಪ್ಪುಗಳನ್ನು ತಡೆಯಲು ಸಾಧ್ಯವಾಗಬಹುದು.

**ಬೋಧನಾ ವಿಧಾನದ ಸಮಸ್ಯೆಗಳು**

ಮಕ್ಕಳು ಓದುವಾಗ ಬರೆಯುವಾಗ ಮಾಡುವ ವ್ಯತ್ಯಾಗಳಿಗೆ ಬೋಧನಾ ಕ್ರಮವು ಒಂದು ಪ್ರಮುಖ ಕಾರಣವಾಗಿದೆ. ನಮ್ಮ ಶಿಕ್ಷಣ ಪದ್ಧತಿಯಲ್ಲಿ ಇಂದಿಗೂ ಸಾಂಪ್ರದಾಯಕ ಬೋಧನಾ ವಿಧಾನಗಳನ್ನು ಅನುಸರಿತ್ತಿರುವುದು ಶೋಚನೀಯವಾಗಿದೆ. ಶಿಕ್ಷಕರು ಮಕ್ಕಳ ಆಸಕ್ತಿ, ಅಭಿರುಚಿಗೆ ತಕ್ಕಂತೆ ಬೋಧಿಸಬೇಕು. ಸರಿಯಾದ ಸಮಯಕ್ಕೆ ಪಾಠವನ್ನು ಬೋಧಿಸದೇ ಇಡೀ ಪಾಠವನ್ನು ವರ್ಷದ ಕೊನೆಯಲ್ಲಿ ಬೋಧಿಸುವುದು, ಬೋಧಿಸುವುದರಲ್ಲಿ ಆಸಕ್ತಿ ಇಲ್ಲದಿರುವುದು, ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿ ಬೋಧಿಸದಿರುವುದು, ಬೋಧನೋಪಕರಣಗಳ ಬಳಕೆ ಮಾಡದೆ ಬೋಧಿಸುವುದು, ವಿಷಯಕ್ಕನುಗುಣವಾಗಿ ಬೋಧನಾ ವಿಧಾನಗಳನ್ನು ಅಳವಡಿಸಿಕೊಳ್ಳದೆ ಬೋಧಿಸಿವುದು, ಬೋಧನಾ ಸಿದ್ದತೆ ಮಾಡಿಕೊಳ್ಳದಿರುವುದು, ಬೋಧಿಸುವ ವಿಷಯಕ್ಕೆ ಸಂಬಂಧಿಸಿದಂತೆ ಪ್ರಶ್ನೆಗಳನ್ನು ಕೇಳದಿರುವುದು, ಮೌಲ್ಯಮಾಪನ, ಗೃಹಪಾಠ ಕೊಡದಿರುವುದು, ಬೋಧಿಸುವ ಗೃಹಪಾಠವನ್ನು ವೀಕ್ಷಿಸದಿರುವುದು, ಬೋಧಕ ಮಕ್ಕಳ ಕಡೆಗೆ ಗಮನ ಹರಿಸದಿರುವುದು, ಬೋಧಕನ ಉಚ್ಚಾರಣೆ ಬರವಣಿಗೆ ಸರಿಯಿಲ್ಲದಿರುವುದು, ಪಾಠ ಟಿಪ್ಪಣೆ ಮಾಡದೇ ಬೋಧಿಸುವುದು, ಪಾಠದಲ್ಲಿ ಮಕ್ಕಳಿಗೆ ಚಟುವಟಿಕೆಗೆ ನೀಡದಿರುವುದು, ಕಪ್ಪುಹಲಗೆನ್ನು ಬಳಸದೆ ಬೋಧಿಸುವುದು, ವೈಜ್ಞಾನಿಕ ಉಪಕರಣಗಳನ್ನು, ವೈಜ್ಞಾನಿಕ ಬೋಧನಾ ವಿಧಾನ ಹಾಗೂ ತಂತ್ರಗಳನ್ನು ಅಳವಡಿಸದೆ ಬೋಧಿಸುವುದರಿಂದ ಮಕ್ಕಳು ಮುಂದಿನ ಅಧ್ಯಾಯದಲ್ಲಿ ತಿಳಿಸಲಾದ ಸಮಸ್ಯೆಗಳನ್ನು/ವ್ಯತ್ಯಾಸ ಮಾಡುತ್ತಾರೆ.

ಹಾಗಾಗಿ ಬೋಧಕ ಬೋಧನೆಯಲ್ಲಿ ನೈಪುಣ್ಯತೆ ಪಡೆದು ವ್ಯವಸ್ಥಿತವಾಗಿ ಕ್ರಮಬದ್ಧವಾಗಿ ಅಲ್ಲದೇ ಮೇಲೆ ತಿಳಿಸಿದ ಅಂಶಗಳನ್ನು ತಿಳಿದು ಅವುಗಳನ್ನು ಸರಿಪಡಿಸಿಕೊಂಡು ಬೋಧನೆ ಮಾಡಿದರೆ ಸಮಸ್ಯೆಗಳ ಪ್ರಮಾಣ ಕಡಿಮೆ ಮಾಡಬಹುದು. ಪರಿಣಾಮಕಾರಿ ಬೋಧನೆಯಿಂದ ಪರಿಣಾಮಕಾರಿ ಕಲಿಕೆಯನ್ನುಂಟು ಮಾಡಲು ಸಾಧ್ಯ.

**ಪರೀಕ್ಷೆ ಹಾಗೂ ಮೌಲ್ಯಮಾಪನದ ಸಮಸ್ಯೆಗಳು**

ಮಗುವಿನ ಕಲಿಕೆಯಲ್ಲಿ ಉಂಟಾಗುವ ಸಮಸ್ಯೆಗಳಿಗೆ ಈ ಪರೀಕ್ಷಾ ವಿಧಾನಗಳು ಕಾರಣವಾಗಿವೆ. ಭಾಷಾ ಬೋಧನೆ ಹಾಗೂ ಕಲಿಕೆಯ ಮೌಲ್ಯಮಾಪನವು ಇತರೆ ವಿಷಯಗಳ ಕಲಿಕೆಯ ಮೌಲ್ಯಮಾಪನಕ್ಕಿಂತ ಭಿನ್ನವಾಗಿರಬೇಕು. ಮಕ್ಕಳ ಭಾಷಾ ಕಲಿಕಾ ಸಾಮರ್ಥ್ಯವನ್ನು ಪರೀಕ್ಷಿಸುವಾಗ

ಭಾಷಾ ಪ್ರಭುತ್ವದ ಪರೀಕ್ಷೆಗೆ ಹೆಚ್ಚು ಗಮನ ನೀಡಬೇಕು. ಮಕ್ಕಳ ಭಾಷೆಯನ್ನು ಪರೀಕ್ಷೆ ಮಾಡುವಾಗ ವಿಷಯದ ಪರೀಕ್ಷೆಗಿಂತ ಮಗು ಭಾಷಾ ಬಳಕೆಯಲ್ಲಿ ಅಂದರೆ ಬರೆಯುವಾಗ ಓದುವಾಗ ಯಾವ ತೆರನಾದ ವ್ಯತ್ಯಾಸ ಮಾಡುತ್ತದೆ ಎಂಬುದನ್ನು ಪರೀಕ್ಷೆ ಮಾಡಬೇಕು. ಈ ರೀತಿಯ ಪರೀಕ್ಷೆ ಮಾಡಲು ವಿವಿಧ ರೀತಿಯ ಭಾಷಾ ಚಟುವಟಿಕೆಗಳನ್ನು ಏರ್ಪಡಿಸಿ ಮಗುವಿನ ತಪ್ಪುಗಳನ್ನು ಗುರುತಿಸಿ ಆ ತಪ್ಪುಗಳು ಆಗದಂತೆ ಶಿಕ್ಷಕ ಕ್ರಮ ಕೈಗೊಳ್ಳಬೇಕು. ಆಗ ಮಾತ್ರ ಮಕ್ಕಳ ಭಾಷಾ ಕಲಿಕೆಯಲ್ಲಿ ಆಗುವ ತಪ್ಪುಗಳನ್ನು ತಡೆಯಲು ಸಾಧ್ಯ. ಸರ್ಕಾರ ಇಂತಹ ಪರೀಕ್ಷಾ ವಿಧಾನಗಳನ್ನು ಜಾರಿಗೆ ತಂದರು ಅವು ಪರಿಣಾಮಕಾರಿಯಾಗಿ ಜಾರಿಯಾಗದೆ ವಿಫಲತೆ ಹೊಂದುತ್ತಿವೆ. ಉದಾಹರಣೆಗೆ ಕ್ರಿಯಾ ಸಂಶೋಧನೆ, ನೈಧಾನಿಕ ಪರೀಕ್ಷೆ, ಕಲಿಕೆಯ ಕನಿಷ್ಠ ಮಟ್ಟಗಳನ್ನು ಪರೀಕ್ಷಿಸುವುದು ಇತ್ಯಾದಿ ಯೋಜನೆಗಳಿದ್ದರೂ ಪರಿಣಾಮಕಾರಿ ಆಸಕ್ತಿಯುತವಾದ ಬೋಧಕರಿಲ್ಲದೆ ಕಡೆಗೆ ಈ ಯೋಜನೆ ವಿಫಲತೆ ಗೊಳ್ಳುತ್ತವೆ. ಇಂದಿನ ಎಸ್.ಎಸ್.ಎಲ್.ಸಿ. ಪರೀಕ್ಷಾ ಕ್ರಮವನ್ನು ತೆಗೆದುಕೊಂಡು ನೋಡಿದಾಗ ಅಲ್ಲಿರುವ ಪರೀಕ್ಷಾ ಕ್ರಮದಿಂದ ಪಿ.ಯು.ಸಿ. ಫಲಿತಾಂಶ ಕಡಿಮೆಯಾಗುತ್ತದೆ. ಏಕೆಂದರೆ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಶೇಕಡ ೬೦ರಷ್ಟು ಅಂಶಗಳು ವಸ್ತುನಿಷ್ಠ ವಾಗಿರುವುದರಿಂದ ಮಕ್ಕಳಲ್ಲಿ ಓದುವ ಬರೆಯುವ ಸಾಮರ್ಥ್ಯ ಕಡಿಮೆಯಾಗುತ್ತದೆ. ಇದರಿಂದ ಪಿ.ಯು.ಸಿ.ಪರೀಕ್ಷಾ ಮಾದರಿಯಲ್ಲಿ ಬರವಣಿಗೆಗೆ ಹೆಚ್ಚಿನ ಆದ್ಯತೆ ಇರುವುದರಿಂದ ಅಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಕ್ಕಳು ಅನುತ್ತೀರ್ಣರಾಗುತ್ತಾರೆ ಎಂಬುದನ್ನು ಇಂದಿನ ಫಲಿತಾಂಶ ತಿಳಿಸುತ್ತದೆ. ಇದರಿಂದ ರಾಜ್ಯಸರ್ಕಾರ ಪುನಃ ಎಸ್.ಎಸ್.ಎಲ್.ಸಿ. ಪರೀಕ್ಷೆಯ ಮಾದರಿಯಲ್ಲಿ ಮಾರ್ಪಾಡುಮಾಡಲು ಮುಂದಾಗಿದೆ. ಇದನ್ನು ಗಮನಿಸಿದಾಗ ಪ್ರಾಥಮಿಕ ಶಾಲಾ ಮಕ್ಕಳಿಗೆ ಭಾಷಾ ಸಾಮರ್ಥ್ಯವನ್ನು ಉಂಟುಮಾಡುವ ಹಲವಾರು ಭಾಷಾ ಚಟುವಟಿಕೆಗಳನ್ನು ಮಕ್ಕಳಿಗೆ ಕಲಿಸಿದಾಗ ಮಕ್ಕಳ ಓದುಗಾರಿಕೆ ಹಾಗೂ ಬರವಣಿಗೆಯಲ್ಲಿನ ತಪ್ಪುಗಳನ್ನು ತಡೆಗಟ್ಟಲು ಸಾಧ್ಯವಾಗಬಹುದು

**ಮಕ್ಕಳ ಭಾಷಿಕ ಹಾಗೂ ಸಾಮಾಜಿಕ ಹಿನ್ನೆಲೆಯ ಸಮಸ್ಯೆಗಳು:**

ಮಕ್ಕಳ ಕಲಿಕೆಯಲ್ಲಿ ಉಂಟಾಗುವ ಸಮಸ್ಯೆಗಳಿಗೆ ಮಗುವಿನ ಭಾಷಿಕ ಹಾಗೂ ಸಾಮಾಜಿಕ ಹಿನ್ನೆಲೆಯು ಸಹ ಪ್ರಮುಖ ಕಾರಣವಾಗುತ್ತದೆ. ವಿವಿಧ ಭಾಷಿಕ ಸಮುದಾಯದಿಂದ ಬಂದ ಮಕ್ಕಳು ಕನ್ನಡವನ್ನು ಕಲಿಯುವಾಗ ಮಾತೃಭಾಷೆಯ ಪ್ರಭಾವದಿಂದ ಹಲವಾರು ತಪ್ಪುಗಳನ್ನು ಮಾಡುತ್ತದೆ. ಅಲ್ಲದೆ ಕನ್ನಡ ಕಲಿಯುವ ಅನ್ಯಭಾಷಿಕ ಮಕ್ಕಳಿಗೆ ಕನ್ನಡ ಭಾಷಿಕ ಪರಿಸರ ದೊರೆಯದಿದ್ದಾಗಲೂ ಸಹ ಹಲವು ತೆರನಾದ ಸಮಸ್ಯೆಗಳನ್ನು ಮಾಡುತ್ತವೆ. ಹಾಗೆಯೇ ಮಕ್ಕಳ ಸಾಮಾಜಿಕ ಹಿನ್ನೆಲೆಯು ಸಹ ಕಲಿಕೆಯಲ್ಲಿ ಹಲವು ರೀತಿಯ ಸಮಸ್ಯೆಗಳನ್ನು ಉಂಟು ಮಾಡುತ್ತದೆ.

ಅಂದರೆ ವಿವಿಧ ಸಾಮಾಜಿಕ ಹಿನ್ನೆಲೆಯಿಂದ ಬಂದ ಮಕ್ಕಳು ಆ ಸಮಾಜದ ಗ್ರಾಮ್ಯ ಭಾಷೆಯನ್ನು ಬಳಕೆ ಮಾಡುವುದರಿಂದ ಸಮುದಾಯದ ಮಕ್ಕಳು ತಮ್ಮ ಭಾಷೆಯ ಪ್ರಭಾವವನ್ನು ಕನ್ನಡ ಕಲಿಕೆಯಲ್ಲಿ ಬಳಸುವುದರಿಂದ ಅನೇಕ ಸಮಸ್ಯೆಗಳಾಗುತ್ತವೆ.

**ಸರ್ಕಾರದ ಧೋರಣೆಗಳು**

ಮಗುವಿನ ಓದುಗಾರಿಕೆ ಹಾಗೂ ಬರವಣಿಗೆಯಲ್ಲಿ ಕಂಡುಬರುವ ಸಮಸ್ಯೆಗಳಿಗೆ ಮತ್ತೊಂದು ಪ್ರಮುಖ ಕಾರಣವೆಂದರೆ ಸರ್ಕಾರದ ಧೋರಣೆಗಳು. ಸರ್ಕಾರವು ಜಾರಿಗೆ ತಂದಿರುವ ಹೊಸ ಹೊಸ ಯೋಜನೆಗಳು ಸರಿಯಾಗಿ ಜಾರಿಯಾಗದೇ ಅವು ವಿಫಲತೆಯನ್ನು ಹೊಂದಿದೆ. ಉದಾ : ಯಾವುದೋ ಒಂದು ಮುಂದುವರೆದ ದೇಶದಲ್ಲಿ, ಯಾವುದೋ ವ್ಯಕ್ತಿಯಿಂದ ಒಂದು ಮೂಲೆಯಲ್ಲಿ ರೂಪುಗೊಂಡ ಯೋಜನೆಯು ಅದು ಅಲ್ಲಿ ಯಶಸ್ವಿ ಯಾಗಿರಬಹುದು. ಆದರೆ ಅದೇ ಯೋಜನೆ ನಮ್ಮ ದೇಶದ ಎಲ್ಲಾ ರಾಜ್ಯಗಳಲ್ಲಿ ಯಶಸ್ವಿಯಾಗುತ್ತದೆ ಎಂಬುದು ವಿಷಾದಕರ ಸಂಗತಿಯಾಗಿದೆ. ಅಲ್ಲದೆ ಅಧಿಕಾರಿಗಳ ಹಾಗೂ ಶಿಕ್ಷಕರ ಧೋರಣೆಯಿಂದ ಉತ್ತಮವಾದ ಯೋಜನೆಯೂ ಸಹ ಸರಿಯಾಗಿ ಫಲಕಾರಿಯಾಗದಿರಬಹುದು.

ಇನ್ನು ಸರ್ಕಾರವು ಶಿಕ್ಷಕರನ್ನು ಹೆಚ್ಚು ಬೋಧಕೇತರ ಕೆಲಸದಲ್ಲಿ ತೊಡಗಿಸಿಕೊಳ್ಳುವುದರಿಂದ ಅಂದರೆ ಚುನಾವಣೆ ಗಣತಿ, ಬಿಸಿಯೂಟ, ಇತರೆ ಹಲವಾರು ಕೆಲಸಗಳ ಜವಾಬ್ದಾರಿಯನ್ನು ಶಿಕ್ಷಕರಿಗೆ ಕೊಟ್ಟಿರುವುದರಿಂದ ಶಿಕ್ಷಕರು ಬೋಧನಾ ಕಾರ್ಯದಲ್ಲಿ ಹೆಚ್ಚು ತೊಡಗಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಸರ್ಕಾರದ ಅಧಿಕಾರಿಗಳು ದಾಖಲೆಗಳಿಗೆ ಹೆಚ್ಚು ಮನ್ನಣೆ ನೀಡುವುದರಿಂದ ಸರ್ಕಾರದ ಯೋಜನೆಗಳೆಲ್ಲವು ದಾಖಲೆಗಳಲ್ಲಿ ಮಾತ್ರ ಅನುಷ್ಠಾನಗೊಳ್ಳುವ ಸ್ಥಿತಿ ಉಂಟಾಗಿದೆ ಎಂದರೆ ತಪ್ಪಾಗಲಾರದು.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ಸರ್ಕಾರವು ತನ್ನ ಯೋಜನೆಗಳನ್ನು ರೂಪಿಸುವಾಗ ತನ್ನ ಪ್ರಾದೇಶೀಕತೆಗೆ ಅನುಕೂಲವಾಗುವಂತಹ, ಸಂಪನ್ಮೂಲಗಳು ದೊರೆಯುವಂತಹ, ಯಶಸ್ವಿಯಾಗುವಂತಹ ಯೋಜನೆಗಳನ್ನು ಇಲ್ಲಿಯೇ ಇರುವ ಸಂಪನ್ಮೂಲ ವ್ಯಕ್ತಿಗಳಿಂದ ತಯಾರಿಸಬೇಕು. ಅವುಗಳ ಅನುಷ್ಠಾನಗೊಳಿಸುವಲ್ಲಿ ಉಂಟಾಗುವ ಸಮಸ್ಯೆಗಳನ್ನು ಗುರುತಿಸಿ, ಪರಿಹರಿಸಬೇಕು. ಅಲ್ಲದೇ ಶಿಕ್ಷಕರು ಕೆಲಸದ ಹೊರೆಯನ್ನು ಕಡಿಮೆ ಮಾಡಿ ಬೋಧನೆಯಲ್ಲಿ ಅವರನ್ನು ಹೆಚ್ಚು ತೊಡಗುವಂತೆ ಮಾಡಬೇಕು. ಯೋಜನೆ ದಾಖಲೆಗಳಿಗಿಂತ ಅದು ನಿಜವಾಗಿ ಕಾರ್ಯರೂಪಕ್ಕೆ ಬರುವಂತೆ ನೋಡಿಕೊಳ್ಳಬೇಕಾಗುತ್ತದೆ. ಉದಾ : ಪರಿಹಾರ ಬೋಧನೆ, ಓದುವ ನಾನು, ಕಲಿಕೆಯ ಕನಿಷ್ಠ ಮಟ್ಟ, ಇಂತಹ ಉತ್ತಮ ಯೋಜನೆಗಳನ್ನು ಅನುಷ್ಠಾನಗೊಳ್ಳುವಲ್ಲಿ ಅನೇಕ ಕಾರಣಗಳಿಂದ ವಿಫಲತೆ ಗೊಳ್ಳುವುದೇ ಹೆಚ್ಚಾಗಿದೆ.

## ಬೋಧನೆ ಹಾಗೂ ಕಲಿಕಾ ಸಾಮಗ್ರಿಗಳ ಕೊರತೆ

ಮಕ್ಕಳ ಪರಿಣಾಮಕಾರಿ ಕಲಿಕೆಯನ್ನುಂಟು ಮಾಡಲು ಹಾಗೂ ಕಲಿಕಾ ದೋಷಗಳನ್ನು ಕಡಿಮೆ ಮಾಡಲು ಉತ್ತಮವಾದ ಬೋಧನೆ ಹಾಗೂ ಕಲಿಕಾ ಸಾಮಾಗ್ರಿಗಳು ಸಹಕಾರಿಯಾಗಿವೆ. ಹಾಗಾಗಿ ಸರ್ಕಾರ ಭಾಷಾ ಬೋಧನೆ ಹಾಗೂ ಕಲಿಕೆಯಲ್ಲಿ ಪರಿಣಾಮಕಾರಿ ಹಾಗೂ ಗುಣಾತ್ಮಕತೆಯನ್ನು ತರಲು ಉತ್ತಮ ಬೋಧನಾ ಕಲಿಕಾ ಸಾಮಾಗ್ರಿಗಳನ್ನು ತಯಾರಿಸಿ ಶಾಲೆಗಳಿಗೆ ಸರಿಯಾದ ಸಮಯಕ್ಕೆ ಒದಗಿಸುವ ಕಾರ್ಯವನ್ನು ಮಾಡಬೇಕು. ಸರ್ಕಾರ ಒದಗಿಸಿರುವ ಹಲವಾರು ಕಲಿಕಾ ಸಾಮಾಗ್ರಿಗಳನ್ನು ಶಿಕ್ಷಕ ಸಮರ್ಪಕವಾಗಿ ಬಳಸಿಕೊಳ್ಳಬೇಕು. ಅಲ್ಲದೆ ಭಾಷಾ ಪ್ರಯೋಗ ಶಾಲೆಯನ್ನು ವ್ಯವಸ್ಥಿತಿವಾಗಿ ಶಾಲೆಗಳಿಗೆ ದೊರಕುವಂತೆ, ಅದರ ಗರಿಷ್ಠ ಪ್ರಮಾಣದ ಬಳಕೆಯನ್ನು ಮಕ್ಕಳಿಗೆ ಮಾಡುವಂತೆ ಆದಾಗ ಮಾತ್ರ ಕಲಿಕೆಯ ದೋಷಗಳನ್ನು ಕಡಿಮೆ ಮಾಡಲು ಸಾಧ್ಯವಾಗುವುದು.

## ಶಿಕ್ಷಕರ ಧೋರಣೆ

ಮಕ್ಕಳ ಓದುವಿಕೆ ಹಾಗೂ ಬರವಣಿಗೆಯಲ್ಲಿ ಕಂಡು ಬರುವ ದೋಷಗಳಿಗೆ ಪ್ರಮುಖ ಹಾಗೂ ಮಹತ್ವದ ಕಾರಣವೆಂದರೆ ಶಿಕ್ಷಕ. ಶಿಕ್ಷಕ ಬೋಧನಾ ಕಲಿಕಾ ಪ್ರಕ್ರಿಯೆಯಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿದ್ದಾನೆ. ಅಷ್ಟೇ ಅಲ್ಲದೇ ಮಗುವಿನ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕನ ಜವಾಬ್ದಾರಿ ಪೋಷಕರಿಗಿಂತ ಮಹತ್ವವಾಗಿದೆ. ಇಂತಹ ಶಿಕ್ಷಕ ತನ್ನ ಕರ್ತವ್ಯವನ್ನು ನಿಷ್ಠೆಯಿಂದ ನಿರ್ವಹಿಸಿದಾಗ ಮಾತ್ರ ಮಕ್ಕಳ ಸರ್ವಾಂಗೀಣ ಅಭಿವೃದ್ಧಿ ಸಾಧ್ಯ.

"ಒಬ್ಬ ವೈದ್ಯನ ಬೇಜವಾಬ್ದಾರಿಯಿಂದ ಒಬ್ಬ ರೋಗಿ ಸಾಯಬಹುದು
ಒಬ್ಬ ವಕೀಲನ ಬೇಜವಾಬ್ದಾರಿಯಿಂದ ಒಬ್ಬ ನಿರಪರಾಧಿಗೆ ಶಿಕ್ಷೆ ಆಗಬಹುದು
ಒಬ್ಬ ಇಂಜಿನಿಯರ್‌ನ ಬೇಜವಾಬ್ದಾರಿಯಿಂದ ಒಂದು ಕಟ್ಟಡ ಬೀಳಬಹುದು
ಒಬ್ಬ ಶಿಕ್ಷಕನ ಬೇಜವಾಬ್ದಾರಿಯಿಂದ ಇಡೀ ಒಂದು ಯುವ ಪೀಳಿಗೆಯು ನಾಶವಾಗುವುದು"

ಎಂಬ ಉಕ್ತಿಯು ನೂರಕ್ಕೆ ನೂರರಷ್ಟು ಸತ್ಯ ಎನಿಸುತ್ತದೆ. ದೇಶದ ಭವಿಷ್ಯವನ್ನು ರೂಪಿಸುವ ಶಕ್ತಿ ಶಿಕ್ಷಕನಿಗಿರುವುದರಿಂದ ಉತ್ತಮ ಆದರ್ಶಯುತವಾದ ಶಿಕ್ಷಕರ ಅವಶ್ಯಕತೆ ಇದೆ. ಆದರೆ ಇಂದಿನ ಶಿಕ್ಷಕರ ಸ್ಥಾನಮಾನ, ಗುಣಮಟ್ಟ ಕುಸಿಯುತ್ತಲಿದೆ ಎಂಬ ಕೂಗೂ ಬಹಳಷ್ಟು ಕಡೆ ಕೇಳಿಬರುತ್ತದೆ. ಅಷ್ಟೇ ಏಕೆ ಇತ್ತೀಚಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯು ಶಿಕ್ಷಕರು ಶಾಲೆಗೆ ಸರಿಯಾಗಿ ಬರುವುದಿಲ್ಲ, ಬಂದರೂ ಸರಿಯಾಗಿ ಪಾಠಗಳನ್ನು ಮಾಡುತ್ತಿಲ್ಲ. ಇವರು ಬಡ್ಡಿ ವ್ಯವಹಾರದಲ್ಲಿ, ಇತರೆ ವೈಯಕ್ತಿಕ ಕೆಲಸಗಳಲ್ಲಿ ಹೆಚ್ಚು ತೊಡಗಿರುತ್ತಾರೆ. ಅಂತಹ ಶಿಕ್ಷಕರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವುದಲ್ಲದೆ ಅದಕ್ಕಾಗಿಯೇ ಕೆಲವು ಕಠಿಣ ಶಿಕ್ಷೆ ಹಾಗೂ ನಿಯಮಗಳನ್ನು

ರೂಪಿಸಿದೆ. ಈ ರೀತಿಯ ಶಿಕ್ಷೆ ಮತ್ತು ನಿಯಮಗಳು ರೂಪುಗೊಳ್ಳಲು ಕಾರಣ ಯಾವುದೇ ಕೆಲವು ಶಿಕ್ಷಕರು ಮಾಡುವ ತಪ್ಪಿಗಾಗಿ ಎಲ್ಲಾ ಶಿಕ್ಷಕರು ಇದಕ್ಕೆ ಹೊಣೆಯಾಗಿರಬೇಕಾಗುತ್ತದೆ. ಹೀಗಾಗಿ ಶಿಕ್ಷಕನು ತನ್ನ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸಬೇಕಾಗಿರುವುದು ಅಗತ್ಯವಾಗಿದೆ.

ಭಾಷಾ ಶಿಕ್ಷಕನಿಗೆ ಇತರೆ ಶಿಕ್ಷಕರಿಗಿಂತಲೂ ಹೆಚ್ಚಿನ ಜವಾಬ್ದಾರಿ ಇರುತ್ತದೆ. ಏಕೆಂದರೆ ಮಗು ಮೊದಲು ಭಾಷೆಯನ್ನು ಕಲಿತನಂತರ ಇತರೆ ವಿಷಯಗಳನ್ನು ಕಲಿಯುವುದರಿಂದ ಭಾಷಾ ಶಿಕ್ಷಕನು ಭಾಷಾ ಪ್ರಭುತ್ವವನ್ನು ಪಡೆದುಕೊಳ್ಳುವುದರ ಜೊತೆಗೆ ಸಾಹಿತ್ಯದ ವಿವಿಧ ಪ್ರಕಾರಗಳ ಬಗ್ಗೆ ಜ್ಞಾನ ಪಡೆದಿರಬೇಕು. ಭಾಷಾ ಚಟುವಟಿಕೆಗಳನ್ನು ಸಮರ್ಪಕವಾಗಿ ಬಲ್ಲವನಾಗಿರಬೇಕು. ಹಾಡುಗಾರಿಕೆ, ಸಂಗೀತ ಜ್ಞಾನ, ಅಭಿನಯ ಕಲೆ ಗೊತ್ತಿರಬೇಕು. ಭಾಷಾ ಕೌಶಲ್ಯಗಳಲ್ಲಿ ಪ್ರಾವೀಣ್ಯತೆ ಪಡೆದಿರಬೇಕು. ಭಾಷಾ ಶಿಕ್ಷಕನು ಉತ್ತಮವಾಗಿ, ಸ್ಪಷ್ಟವಾಗಿ, ನಿರರ್ಗಳವಾಗಿ ಓದುವ ಸಾಮರ್ಥ್ಯವನ್ನು ಪಡೆದುಕೊಂಡಿರಬೇಕು. ಭಾಷಾ ಶಿಕ್ಷಕನ ಬರವಣಿಗೆ ಅಂದವಾಗಿ, ಸ್ಪಷ್ಟವಾಗಿ, ಸ್ಫುಟವಾಗಿ ಎಲ್ಲರಿಗೂ ತಿಳಿಯುವಂತೆ ಇರಬೇಕು. ಏಕೆಂದರೆ ಪ್ರಾಥಮಿಕ ಶಾಲಾ ಮಕ್ಕಳು ಶಿಕ್ಷಕರನ್ನು ಅನುಸರಿಸಿ ಕಲಿಯುವುದರಿಂದ ಶಿಕ್ಷಕ ಎಲ್ಲಾ ವಿಷಯಗಳಲ್ಲಿ ಆದರ್ಶನಾಗಿದ್ದಾಗ ಮಾತ್ರ ಮಕ್ಕಳು ಉತ್ತಮ ವ್ಯಕ್ತಿತ್ವ ರೂಪಿಸಿಕೊಳ್ಳುವುದರ ಜೊತೆಗೆ ಓದುವಿಕೆಯ ಹಾಗೂ ಬರೆಯುವಿಕೆಯಲ್ಲಿ ಯಾವ ದೋಷಗಳಿಲ್ಲದೆ ಕಲಿತು ಉತ್ತಮ ಶಿಕ್ಷಣ ಪಡೆಯಲು ಸಾಧ್ಯ. ಹೀಗಾಗಿ ಭಾಷಾ ಶಿಕ್ಷಕನು ಮಕ್ಕಳು ಓದುವಾಗ ಬರೆಯುವಾಗ ಕಂಡು ಬರುವ ದೋಷಗಳನ್ನು ಸರಿ ಪಡಿಸಬೇಕು. ಮಕ್ಕಳಿಗೆ ಶಿಕ್ಷಕ ಎಲ್ಲಾ ರಂಗದಲ್ಲಿಯು ಮಾದರಿಯಾಗಿರಬೇಕು.

**ಅನ್ಯಭಾಷೆಯ ಪ್ರಭಾವ.**

ಒಂದು ಭಾಷೆಯು ಅನ್ಯ ಭಾಷೆಯ ಪ್ರಭಾವ ಪ್ರೇರಣೆಯಿಂದ ಅಭಿವೃದ್ಧಿ ಹೊಂದುತ್ತದೆ. ಈ ಪ್ರಭಾವವು ಹೇಗಿರಬೇಕು ಎಂದರೆ ಊಟಕ್ಕೆ ಉಪ್ಪಿನಕಾಯಿ ಇದ್ದಂತೆ ಇರಬೇಕೆ ಹೊರತು ಉಪ್ಪಿನಕಾಯಿಯೇ ಊಟವಾಗಬಾರದು. ಉಪ್ಪಿನಕಾಯಿಯೇ ಊಟವಾದರೆ ಏನೆಲ್ಲಾ ಸಮಸ್ಯೆಗಳು ಉಂಟಾಗುತ್ತವೆಯೋ ಅದೇ ರೀತಿ ಭಾಷೆಯಲ್ಲಿ ಅನ್ಯ ಭಾಷೆಯ ಪ್ರಭಾವ ಹೆಚ್ಚಾದರೆ ಹಲವಾರು ಸಮಸ್ಯೆಗಳು ಕಂಡುಬರುತ್ತವೆ. ನಮ್ಮ ಕನ್ನಡ ಭಾಷೆಯ ಮೇಲೆ ಆರಂಭದಿಂದ ಸಂಸ್ಕೃತದ ಪ್ರಭಾವ, ಪ್ರೇರಣೆ ಕಂಡುಬರುತ್ತದೆ. ಇತ್ತೀಚಿಗೆ ಇಂಗ್ಲಿಷ್ ಹಾಗೂ ಇತರೆ ಭಾರತೀಯ ಭಾಷೆಗಳ ಪ್ರಭಾವವು ಕಂಡುಬರುತ್ತದೆ. ಹೀಗಾಗಿ ಅನ್ಯ ಭಾಷೆಯ ಪದಗಳು ನಮ್ಮ ಭಾಷೆಯಲ್ಲಿ ಬಂದಾಗ ಅವುಗಳ ಉಚ್ಚಾರಣೆ ಹಾಗೂ ಬರವಣಿಗೆ ಕಷ್ಟವಾಗುತ್ತದೆ. ಇದರಿಂದ ಮಕ್ಕಳು ಪದಗಳನ್ನು ಓದುವಾಗ ಮತ್ತು ಬರೆಯುವಾಗ ಹಲವು ರೀತಿಯ ಸಮಸ್ಯೆಗಳನ್ನು ಮಾಡುವುದು ಕಂಡುಬರುತ್ತದೆ.

ಇದರಿಂದ ಅನ್ಯ ಭಾಷೆಯ ಪ್ರಭಾವವನ್ನು ಆದಷ್ಟು ಕಡಿಮೆ ಮಾಡಿ ನಮ್ಮ ಭಾಷೆಯನ್ನು ಅಭಿವೃದ್ಧಿಯ ಕಡೆಗೆ ಕೊಂಡೊಯ್ಯಬೇಕು. ಹೀಗೆ ಮಾಡಿದಾಗ ಮಕ್ಕಳ ಭಾಷಾ ಕಲಿಕೆಯಲ್ಲಿನ ಸಮಸ್ಯೆಗಳನ್ನು ಕಡಿಮೆ ಮಾಡಬಹುದು.

**ಮೂಲಭೂತ ಸೌಲಭ್ಯಗಳ ಕೊರತೆ**

ಮಗುವಿನ ಓದುವಿಕೆ ಮತ್ತು ಬರೆಯುವಿಕೆಯಲ್ಲಿ ಉಂಟಾಗುವ ವ್ಯತ್ಯಾಸಗಳಿಗೆ ಮೂಲಭೂತ ಸೌಲಭ್ಯಗಳ ಕೊರತೆಯು ಕಾರಣವಾಗಿದೆ. ಶಾಲೆಯ ಪರಿಸರ ಪ್ರಶಾಂತವಾಗಿಲ್ಲದಿರುವುದು, ಕೊಠಡಿಯಲ್ಲಿ ಸರಿಯಾದ ಬೆಳಕು, ಗಾಳಿಯ ವ್ಯವಸ್ಥೆ ಇಲ್ಲದಿರುವುದು, ಆಸನ ವ್ಯವಸ್ಥೆ ಇಲ್ಲದಿರುವುದು, ಶೌಚಾಲಯ ಕೊರತೆ, ಕುಡಿಯುವ ನೀರಿನ ವ್ಯವಸ್ಥೆ, ಶಿಕ್ಷಕರ ಕೊರತೆ, ಸಮರ್ಪಕ ಕೊಠಡಿಗಳ ತೊಂದರೆ, ಪಠ್ಯಪುಸ್ತಕ ಇಲ್ಲದಿರುವುದು, ಕಲಿಕಾ ಸಾಮಾಗ್ರಿಗಳಿಲ್ಲದೇ ಇರುವುದು ಇತ್ಯಾದಿ ಮೂಲಭೂತ ಸೌಲಭ್ಯಗಳ ಕೊರತೆಯಿಂದ ಮಕ್ಕಳು ಸರಿಯಾಗಿ ಓದುವುದನ್ನು ಬರೆಯುವುದನ್ನು ಮಾಡದೆ ಬರೀ ಸಮಸ್ಯೆಗಳಲ್ಲಿ ಹೆಚ್ಚು ಕಾಲ ಕಳೆಯುತ್ತವೆ. ಹಾಗಾಗಿ ಈ ಮೂಲಭೂತ ಸೌಲಭ್ಯಗಳ ಕೊರತೆಯನ್ನು ಮೊದಲು ಹೋಗಲಾಡಿಸಿ ಬೋಧನೆಯನ್ನು ಸಮರ್ಪಪಕವಾಗಿ ಮಾಡಿದಾಗ ಮಕ್ಕಳ ಕಲಿಕೆಯಲ್ಲಿನ ದೋಷಗಳನ್ನು ಕಡಿಮೆ ಮಾಡಲು ಸಾಧ್ಯವಾಗಬಹುದು.

**ಮಗುವಿನ ವೈಯಕ್ತಿಕ ಅಂಶಗಳು**

ಓದುವಾಗ ಬರೆಯುವಾಗ ಉಂಟಾಗುವ ಸಮಸ್ಯೆಗಳಿಗೆ ಮಗುವಿನ ವೈಯಕ್ತಿಕ ಅಂಶಗಳು ಕಾರಣವಾಗಿವೆ. ಮಗುವಿನ ಕಲಿಕೆಯ ಮೇಲೆ ಆ ಮಗುವಿನ ವೈಯಕ್ತಿಕ ಅಂಶಗಳು ಪ್ರಭಾವ ಬೀರುತ್ತವೆ ಎಂಬುದನ್ನು ಮನೋವಿಜ್ಞಾನಿಗಳು, ಭಾಷ ತಜ್ಞರು ತಿಳಿಸಿದ್ದಾರೆ. ಅಂತಹ ವೈಯಕ್ತಿಕ ಅಂಶಗಳಲ್ಲಿ ಮಗುವಿನ ದೈಹಿಕ ಆರೋಗ್ಯ, ಧ್ವನ್ಯಾಂಗಗಳ ನ್ಯೂನತೆ, ಅಂಗವೈಕಲ್ಯಗಳು, ವಯಸ್ಸು, ಆಸಕ್ತಿ, ಅವಧಾನ, ಆಯಾಸ, ಪ್ರೇರಣೆ, ಸ್ಮೃತಿ, ಪರಿಸರ, ಆಹಾರ ಪಾನೀಯ ಇತ್ಯಾದಿ. ಬೋಧಕನು ಅದರಲ್ಲಿಯೂ ಪ್ರಾಥಮಿಕ ಶಾಲಾ ಶಿಕ್ಷಕನು ಮಗುವಿನ ವೈಯಕ್ತಿಕ ಅಂಶಗಳಲ್ಲಿರುವ ತೊಂದರೆಗಳನ್ನು ಗುರುತಿಸಿ ಅವುಗಳಿಗೆ ಸರಿಯಾದ ಪರಿಹಾರ ನೀಡಿ ಮಗುವಿಗೆ ಕಲಿಸಿದಾಗ ಮಗು ತನ್ನ ಕಲಿಕೆಯಲ್ಲಿ ಅಭಿವೃದ್ಧಿ ಕಂಡುಕೊಳ್ಳಲು ಸಾಧ್ಯ.

**ಮಗುವಿನ ಸಾಮಾಜಿಕ ಹಾಗೂ ಕೌಟಂಬಿಕ ಪರಿಸರ**

ಮಗುವಿನ ಕಲಿಕೆಯಲ್ಲಿ ಕಂಡುಬರುವ ಓದುವ ಮತ್ತು ಬರೆಯುವ ಸಮಸ್ಯೆಗಳಿಗೆ ಮತ್ತೊಂದು ಪ್ರಮುಖ ಕಾರಣವೆಂದರೆ ಆ ಮಗುವಿನ ಕೌಟುಂಬಿಕ ಹಾಗೂ ಸಾಮಾಜಿಕ ಪರಿಸರವಾಗಿದೆ. ಉತ್ತಮವಾದ ಕೌಟಂಬಿಕ ಪರಿಸರದಲ್ಲಿ ಬೆಳೆದ ಮಗು ಉತ್ತಮ ಕಲಿಕೆಯನ್ನು ರೂಡಿಸಿಕೊಳ್ಳುತ್ತದೆ.

## ಆರ್ಥಿಕ ಸ್ಥಿತಿಗತಿ

ಮಗುವಿನ ಭಾಷಾ ಕಲಿಕೆಯ ಮೇಲೆ ಸಾಮಾಜಿಕ ಪರಿಸರವು ಬೀರುವ ಪ್ರಭಾವ ಪ್ರಮುಖ ಅಥವಾ ಮಹತ್ವವೆನಿಸಿಕೊಂಡರೂ ಸಹ ಅದರ ಜೊತೆಗೆ ಆರ್ಥಿಕ ಸ್ಥಿತಿಗತಿಯು ಸಹ ಉತ್ತಮವಾಗಿರಬೇಕು. ಅಂದರೆ ಮಗುವಿನ ಮೂಲಭೂತ ಕಲಿಕೆಗೆ ಬೇಕಾಗುವ ಸೌಲಭ್ಯಗಳನ್ನಾದರೂ ಪೂರೈಸುವಂತಿರಬೇಕು. ಅತಿಯಾದ ಆರ್ಥಿಕ ಸ್ಥಿತಿಗತಿಯೂ ಸಹ ಮಗುವಿನ ಕಲಿಕೆಗೆ ಪೂರಕವಾಗಬಹುದು. ಆಗಾಗಿ ಆರ್ಥಿಕ ಸ್ಥಿತಿ ಕೆಲವು ಸಲ ಪೂರಕವಾದರೆ ಇನ್ನು ಕೆಲವು ಸಂದರ್ಭದಲ್ಲಿ ಮಾರಕವಾಗಬಹುದು. ಅದು ಮಗುವಿನ ಕೌಟುಂಬಿಕ, ಶೈಕ್ಷಣಿಕ, ಸಾಮಾಜಿಕ ಪರಿಸರದ ಮೇಲೆ ಅವಲಂಬಿತವಾಗಿರುತ್ತದೆ.

ಈ ಅಧ್ಯಾಯಕ್ಕೆ ಆಯ್ದುಕೊಳ್ಳಲಾದ ಬಳ್ಳಾರಿ ಜಿಲ್ಲೆಯ ಆರ್ಥಿಕ ಪರಿಸರವು ಭಿನ್ನವಾಗಿರುವುದನ್ನು ಕಾಣಬಹುದಾಗಿದೆ. ಇಲ್ಲಿ ನಡೆಸುತ್ತಿರುವ ಗಣಿಗಾರಿಕೆ ಹಾಗೂ ಮೈನಿಂಗ್‌ನಂತಹ ವ್ಯಾಪಾರದಿಂದ ಭಾರತದ ಶ್ರೀಮಂತ ವ್ಯಕ್ತಿಗಳನ್ನು ಇಲ್ಲಿ ಕಾಣಬಹುದು. ಅಲ್ಲದೆ ಇನ್ನೊಂದು ಕಡೆ ಮೂಲಭೂತ ಸೌಲಭ್ಯಗಳಿಲ್ಲದಂತಹ ಕಡುಬಡವರನ್ನು ಸಹ ಇಲ್ಲಿ ಕಾಣಬಹುದು. ಆರ್ಥಿಕವಾಗಿ ಸುಸ್ಥಿತಿಯಲ್ಲಿ ಇರುವ ಮಕ್ಕಳು ಹಾಗೂ ಕಡುಬಡುತನದಲ್ಲಿರುವ ಮಕ್ಕಳು ಕಲಿಕೆಯಲ್ಲಿ ವಿಭಿನ್ನವಾದ ಸಮಸ್ಯೆಗಳನ್ನು ಎದುರಿಸುತ್ತಿರುವುದು ಕಂಡುಬರುತ್ತದೆ. ಅಂತಹ ಸಮಸ್ಯೆಗಳನ್ನು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

## ಸರ್ಕಾರಿ ಶಾಲೆಯಲ್ಲಿ ಕನ್ನಡ ಕಲಿಯಲು ಇರುವ ಸಮಸ್ಯೆಗಳು:

ಸರ್ಕಾರಿ ಶಾಲೆ ಎಂದ ಕೂಡಲೇ ನಮ್ಮ ಕಲ್ಪನೆಗೆ ಬರುವುದು ಇಲ್ಲಿಗೆ ಬರುವ ಮಕ್ಕಳು ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಹಿಂದೂಳಿದವರಾಗಿರುತ್ತಾರೆ ಎಂಬುದ ಸಾಮಾನ್ಯವಾದ ಸಂಗತಿ. ಇನ್ನೊಂದು ಕಡೆ ಹಲವಾರು ಸೌಲಭ್ಯಗಳ ಕೊರತೆ ಅಂದರೆ ಕೊಠಡಿ, ಕಪ್ಪು ಹಲಗೆ, ಶಿಕ್ಷಕರ ಕೊರತೆ, ಮೂಲಭೂತ ಸೌಲಭ್ಯಗಳು, ಬೋಧನೆ ಹಾಗೂ ಕಲಿಕಾ ಸಾಮಗ್ರಿಗಳ ಕೊರತೆ ಇತ್ಯಾದಿ. ಈ ಎಲ್ಲಾ ಸಮಸ್ಯೆಗಳು ಕಲಿಕೆಯ ಸಾಮಾನ್ಯ ಸಮಸ್ಯೆಗಳಾಗಿವೆ. ಇನ್ನೂ ಈ ಶಾಲೆಯಲ್ಲಿ ಕನ್ನಡ ಭಾಷೆಯನ್ನು ಕಲಿಯಲು ಸಹ ಹಲವಾರು ಸಮಸ್ಯೆಗಳಿವೆ. ಅವುಗಳಲ್ಲಿ ಮುಖ್ಯವಾಗಿ ಕನ್ನಡ ಭಾಷೆಯನ್ನು ಕಲಿಸುವ ಶಿಕ್ಷಕ ಕನ್ನಡ ಭಾಷಿಕನಾಗದಿರುವುದು. ಇಂದು ರಾಜ್ಯದ ಅನೇಕ ಶಾಲೆಗಳಲ್ಲಿ ಅನ್ಯ ಭಾಷೆಯ ಶಿಕ್ಷಕರು ಕನ್ನಡ ಭಾಷಾ ಶಿಕ್ಷಕರಾಗಿದ್ದು, ಅವರು ಕನ್ನಡ ಭಾಷಾ ಕಲಿಕೆಯಲ್ಲಿ ನಿರ್ಲಕ್ಷ್ಯ ಧೋರಣೆ, ಸರಿಯಾದ ಹಿಡಿತವಿಲ್ಲದಿರುವುದು, ಅವರ ಮಾತೃಭಾಷೆಯ ದಾಟಿಯಲ್ಲಿಯೇ ಕಲಿಸುವುದು ಇತ್ಯಾದಿ ಕಾರಣದಿಂದ ಕನ್ನಡ ಕಲಿಕೆಯಲ್ಲಿ ಹಲವಾರು ಸಮಸ್ಯೆಗಳಾಗುತ್ತವೆ.

ಕನ್ನಡ ಭಾಷೆಯನ್ನು ಕಲಿಸುವ ರೀತಿ–ನೀತಿಗಳ ಬಗ್ಗೆ ತಿಳುವಳಿಕೆಯಿಲ್ಲದಿರುವುದು, ಭಾಷೆಯ ಮೇಲೆ ಹಿಡಿತವಿಲ್ಲದಿರುವುದು ಕನ್ನಡ ಭಾಷಾಶಿಕ್ಷಕನ ಉಚ್ಚರಣೆ ಹಾಗೂ ಬರವಣಿಗೆ ಸರಿ ಇಲ್ಲದಿರುವುದು ಇತ್ಯಾದಿ.

ಈ ಮೇಲೆ ಚರ್ಚಿಸಲಾಗಿರುವ ಬೋಧನೆ ಹಾಗೂ ಕಲಿಕೆಯಲ್ಲಿನ ಸಮಸ್ಯೆಗಳನ್ನು ಗುರುತಿಸಿ ಅವುಗಳಿಗೆ ಶೀಘ್ರ ಪರಿಹಾರವನ್ನು ಕಂಡುಕೊಂಡಾಗ ಮಾತ್ರ ಬೋಧನೆ ಹಾಗೂ ಕಲಿಕೆಯು ಪರಿಣಾಮಕಾರಿಯಾಗಲು ಸಾಧ್ಯ. ಬೋಧನೆ ಹಾಗೂ ಕಲಿಕೆಯು ಪರಿಣಾಮಕಾರಿಯಾದರೆ ಮಾನವ ಸಂಪನ್ಮೂಲ ಅಭಿವೃದ್ಧಿಯಾಗಿ ದೇಶ ಪ್ರಗತಿಯನ್ನು ಹೊಂದಲು ಸಾಧ್ಯವಾಗಬಹುದು. ಜೊತೆಗೆ ಮಕ್ಕಳ ಭಾಷಾ ಕಲಿಕೆಯಲ್ಲಿ ಉಂಟಾಗುವ ಸಮಸ್ಯೆಗಳನ್ನು ನಿವಾರಿಸಲು ಸಾಧ್ಯವಾಗಬಹುದು.

ಅಧ್ಯಾಯ ೫

# ಓದು ಕಲಿಕೆಯ ಸಮಸ್ಯೆಯ ಸ್ವರೂಪ

## ಓದಿನ ಸಮಸ್ಯೆಗಳು

ಭಾಷಾ ಸಾಮರ್ಥ್ಯದ ಸಿದ್ಧಿಯನ್ನು ನಾಲ್ಕು ಆಯಾಮಗಳಲ್ಲಿ ಗುರುತಿಸಲಾಗುತ್ತದೆ. ಆಲಿಸುವುದು, ಮಾತನಾಡುವುದು, ಓದುವುದು ಮತ್ತು ಬರೆಯುವುದು. ಆಲಿಸುವ ಮತ್ತು ಮಾತನಾಡುವ ಕೌಶಲಗಳನ್ನು ಮಗು ತನ್ನ ಸಾಮಾಜಿಕ ವಲಯದೊಂದಿಗೆ ಮಾಡುವ ಸಹಜ ಪ್ರತಿ ವರ್ತನೆಯಿಂದ ಲಭ್ಯವಾಗುತ್ತವೆ. ಆದರೆ ಓದುವ ಮತ್ತು ಬರೆಯುವ ಸಾಮರ್ಥ್ಯಗಳನ್ನು ಗಳಿಸಲು ಮಗು ಉದ್ದೇಶ ಪೂರ್ವಕ ಕಲಿಯುವ ಚಟುವಟಿಕೆಯಲ್ಲಿ ಪಾಲ್ಗೊಳ್ಳಬೇಕಾದುದು ಅಗತ್ಯವಾಗುತ್ತದೆ. ಬರೆಯುವ ಕೌಶಲ ಓದುವ ಕೌಶಲಕ್ಕಿಂತ ಸಂಕೀರ್ಣವಾದುದು.

ಓದುವ ಸಾಮರ್ಥ್ಯವು ಯಾವುದೇ ಪಠ್ಯವಿಷಯದ ಕಲಿಕೆಯ ಆರಂಭದ ಸೋಪಾನವಾಗಿದೆ. ಓದುವುದನ್ನು ಕಲಿತರೆ ಇನ್ನಾವುದೇ ವಿಷಯದ ಕಲಿಕೆಯಲ್ಲಿ ಪಾಲ್ಗೊಳ್ಳಲು ಮತ್ತು ಉತ್ತಮ ಸಾಧನೆಯನ್ನು ತೋರುವಲ್ಲಿ ಸಂಶಯವಿಲ್ಲ. ಈ ಸಾಮರ್ಥ್ಯವನ್ನು ಗಳಿಸುವಲ್ಲಿ ವಿಫಲವಾದರೆ ತಾನೇನನ್ನು ಕಲಿತಿಲ್ಲವೆಂಬ ಕೀಳರಿಮೆ ಬಾದಿಸಿ ಶಾಲೆಯನ್ನು ಅರ್ಧದಲ್ಲಿಯೇ ಬಿಡುವ ಸನ್ನಿವೇಶಗಳು ಹೆಚ್ಚು, ಹಾಗಾಗಿ ಓದುವ ಕೌಶಲವನ್ನು ಮಕ್ಕಳಲ್ಲಿ ಬೆಳಸುವುದಕ್ಕೆ ಗಮನ ನೀಡುವುದು ಶಾಲೆಗಳ ಪ್ರಥಮ ಆದ್ಯತೆಯಾಗಬೇಕಾಗಿದೆ.

## ಓದುವಿಕೆಯ ಅರ್ಥ

ಭಾಷಾ ಕೌಶಲಗಳಲ್ಲಿ ಓದುವುದು ಪ್ರಮುಖವಾಗಿರುತ್ತದೆ. ಇದನ್ನು ಆಲೋಚನಾ

ಕ್ರಿಯೆಯಂತಲೂ ಕರೆಯುವರು. ಸಾಮಾನ್ಯವಾಗಿ ಓದುವುದು ಎಂದರೆ ಅಭ್ಯಾಸ ಮಾಡುವುದು ಹಾಗೂ ಕಲಿಯುವುದು ಎಂದರ್ಥ. ಓದುವುದು ಒಂದು ಮಾನಸಿಕ ಹಾಗೂ ಶಾಬ್ದಿಕ ಪ್ರಕ್ರಿಯೆಯಾಗಿರುತ್ತದೆ. ಮುದ್ರಿತ ಪದ, ವಾಕ್ಯಗಳನ್ನು ನೋಡಿ ಗಮನಿಸಿ ಅರ್ಥಮಾಡಿಕೊಳ್ಳುವುದು ಅಥವಾ ಲಿಪಿಯನ್ನು ಶಬ್ದರೂಪದಲ್ಲಿ ಅರ್ಥಬದ್ಧವಾಗಿ ಹೊರ ಹೊಮ್ಮಿಸುವ ಕ್ರಿಯೆಯನ್ನು ಓದುವಿಕೆ ಎಂದು ಕರೆಯುವರು. ಸಂಕ್ಷಿಪ್ತವಾಗಿ ಹೇಳುವುದಾದರೆ "ಲಿಪಿ ಸಂಕೇತಗಳನ್ನು ಗುರುತಿಸಿ ಅವುಗಳನ್ನು ಧ್ವನಿ ಮತ್ತು ಅರ್ಥದಲ್ಲಿ ಪರಿವರ್ತನೆಗೊಳಿಸುವುದೇ ಓದು" ಎನಿಸುತ್ತದೆ. ಲಿಪಿಗಳು ಯಾಂತ್ರಿಕವಾಗಿ ಕಣ್ಣುಗಳನ್ನು ಪ್ರವೇಶಿಸಿ ಬಾಯಿಯ ಮುಖಾಂತರ ಧ್ವನಿಯಾಗಿ ಅಭಿವ್ಯಕ್ತಿ ಹೊಂದುವುದೇ ಓದುವುದಾಗಿರುತ್ತದೆ. ಓದುವ ಕ್ರಿಯೆಯಲ್ಲಿ ಮಾನಸಿಕ ಸಿದ್ಧತೆ, ಆಸಕ್ತಿ, ಪ್ರಚೋದನೆ, ಏಕಾಗ್ರತೆ, ಕಲ್ಪನೆ, ಅರ್ಥಗ್ರಹಿಕೆ, ಸ್ಮರಣೆ ಹಾಗೂ ಯೋಚನಾ ಕೌಶಲಗಳು ಸಮನ್ವಯಗೊಂಡು ಕಾರ್ಯ ನಿರ್ವಹಿಸುತ್ತವೆ.

ಓದುವಿಕೆಯು ಒಂದು ಸ್ವೀಕೃತ ಕ್ರಿಯೆಯಾಗಿರುತ್ತದೆ. ಅಲ್ಲದೆ ಉತ್ಪಾದಕ ಕೌಶಲವಾಗಿಯೂ ಕೆಲಸ ಮಾಡುತ್ತದೆ. ಅಧುನಿಕ ಪ್ರಪಂಚದಲ್ಲಿ ಮಾನವ ನೆಮ್ಮದಿಯಿಂದ ಮತ್ತು ಸುಖ ಸಂತೋಷದಿಂದ ಬಾಳಲು ಓದು ಅಗತ್ಯವಾಗಿರುತ್ತದೆ. ಓದು ಬಲ್ಲವನು ತನ್ನ ಅಶೋತ್ತರಗಳನ್ನು ಸುಲಭವಾಗಿ ಈಡೇರಿಸಿಕೊಳ್ಳಬಲ್ಲನು ಹಾಗೂ ಓದಿನಿಂದ ಜ್ಞಾನಾರ್ಜನೆಯ ಬುನಾದಿ ಅಪೂರ್ಣ ಮಾನವನನ್ನು ಪೂರ್ಣ ಮಾನವನನ್ನಾಗಿ ಮಾಡುತ್ತದೆ. ಒಟ್ಟಾರೆ ವ್ಯಕ್ತಿ ಮತ್ತು ಸಮಾಜದ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ, ಆಡಳಿತಾತ್ಮಕ, ಭಾವನಾತ್ಮಕ ಉನ್ನತಿಗಾಗಿ ಓದುವುದು ಮಹತ್ವ ಎನಿಸಿದೆ.

**ಅಧ್ಯಾಯದ ವಿಶ್ಲೇಷಣೆ**

ಓದಿನ ಸಮಸ್ಯೆಗಳು ಎಂಬ ಅಧ್ಯಾಯದಲ್ಲಿ ಕನ್ನಡ ಮನೆ ಮಾತುಯುಳ್ಳ ಅಥವಾ ಕನ್ನಡ ಭಾಷಿಕ ಪರಿಸರದಲ್ಲಿ ಇರುವ ಮಕ್ಕಳು ಕನ್ನಡ ಓದುವಾಗ ಪದಾದಿ, ಪದಮಧ್ಯ ಹಾಗೂ ಪದಾಂತ್ಯ ಪರಿಸರದಲ್ಲಿ ಯಾವ ತರಹದ ವ್ಯತ್ಯಾಸಗಳನ್ನು ಮಾಡುತ್ತಾರೆ ಎಂಬುದನ್ನು ಕುರಿತು ವಿಶ್ಲೇಷಿಸಲಾಗಿದೆ. ಮಕ್ಕಳು ಕನ್ನಡ ಓದುವಾಗ ಮಾಡುವ ವ್ಯತ್ಯಾಸಗಳಿಗೆ ಕಾರಣಗಳು ಹಾಗೂ ಅವುಗಳನ್ನು ಸರಿಪಡಿಸಲು ತೆಗೆದುಕೊಳ್ಳಬಹುದಾದ ಕ್ರಮದ ಬಗ್ಗೆ ಚರ್ಚಿಸಲಾಗಿದೆ.

ಕನ್ನಡ ಮನೆ ಮಾತಾಗಿರುವ ಮಕ್ಕಳು ಕನ್ನಡವನ್ನು ಓದುವಾಗ ಯಾವ ತರಹದ ಸಮಸ್ಯೆಗಳನ್ನು ಎದುರಿಸುತ್ತಾರೆ ಅಥವಾ ಯಾವ ತರಹದ ವ್ಯತ್ಯಾಸಗಳನ್ನು ಮಾಡುತ್ತಾರೆ ಎಂಬುದನ್ನು ಶೋಧಿಸಲು ಮೊದಲನೆಯದಾಗಿ ೫, ೬, ೭ನೇ ತರಗತಿಯ ಪಠ್ಯಪುಸ್ತಕದಲ್ಲಿನ ಅಕಾರಾದಿಯಾಗಿ ಪದಗಳ ಪಟ್ಟಿಯನ್ನು ತಯಾರಿಸಿಕೊಳ್ಳಲಾಗಿದೆ. ಅಲ್ಲದೆ ಆಯಾ ತರಗತಿಯ ಪಠ್ಯಪುಸ್ತಕಗಳಲ್ಲಿನ

ಪಾಠಗಳನ್ನು ಓದಿಸಿ ಧ್ವನಿಮುದ್ರಿತ ಯಂತ್ರದಲ್ಲಿ ಮುದ್ರಣ ಮಾಡಿಸಿಕೊಳ್ಳಲಾಗಿದೆ. ಜೊತೆಗೆ "ಓದುವೆ ನಾನು" ಕಾರ್ಡುಗಳನ್ನು ಕೊಟ್ಟು ಓದಿಸಿ ಧ್ವನಿಮುದ್ರಿತ ಯಂತ್ರದಲ್ಲಿ ಮುದ್ರಣ ಮಾಡಿಕೊಳ್ಳಲಾಗಿದೆ. ನಂತರ ಮುದ್ರಿತ ಧ್ವನಿಯನ್ನು ಕೇಳಿ ಮಕ್ಕಳು ಯಾವ ತೆರನಾಗಿ ವ್ಯತ್ಯಾಸವನ್ನು ಮಾಡಿ ಓದುತ್ತಾರೆ ಎಂಬುದನ್ನು ತಿಳಿದು ಅದಕ್ಕೆ ಕಾರಣಗಳನ್ನು ಹುಡುಕಿ ವಿಶ್ಲೇಷಿಸಲಾಗಿದೆ. ಮಕ್ಕಳಲ್ಲಿ ಓದುವಾಗ ಕಂಡುಬರುವ ಪ್ರಮುಖ ಸಮಸ್ಯೆಗಳನ್ನು ಈ ಕೆಳಗಿನಂತೆ ವಿಂಗಡನೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

೫.೧. ಸ್ವರಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು

೫.೨. ವ್ಯಂಜನಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು

೫.೩. ಗುಣಿತಾಕ್ಷರಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು

೫.೪. ಒತ್ತಕ್ಷರಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು

**೫.೧. ಸ್ವರಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು.**

ಮಕ್ಕಳು ಸ್ವರಗಳನ್ನು ಓದುವಾಗ ಪದಾದಿ, ಪದಮಧ್ಯ ಹಾಗೂ ಪದಾಂತ್ಯದಲ್ಲಿ ಹಲವು ತೆರನಾದ ಸಮಸ್ಯೆಗಳನ್ನು ಮಾಡುತ್ತಾರೆ. ಅಂತಹ ಸಮಸ್ಯೆಗಳಲ್ಲಿ ಪ್ರಮುಖವಾಗಿ ದೀರ್ಘಸ್ವರಗಳಿಗೆ ಹ್ರಸ್ವಸ್ವರಗಳನ್ನು ಬಳಕೆ ಮಾಡಿ ಓದುವುದು ಕಂಡುಬರುತ್ತದೆ. ಕೆಲ ಸ್ವರಗಳಿಗೆ ವ್ಯಂಜ್ಯನಗಳನ್ನು ಬಳಕೆ ಮಾಡಿ ಓದುವುದು, ಅನುಸ್ವರ, ವಿಸರ್ಗಗಳನ್ನು ಲೋಪಮಾಡುವುದು ಹಾಗೂ ಸಂಧ್ಯಕ್ಷರಗಳ ಬಳಕೆಯಲ್ಲಿಯೂ ಹಲವಾರು ಸಮಸ್ಯೆಗಳನ್ನು ಮಾಡುತ್ತವೆ. ಅಂತಹ ಸಮಸ್ಯೆಗಳನ್ನು ಕ್ರಮವಾಗಿ ಈ ಕೆಳಗಿನಂತೆ ಗುರುತಿಸಲಾಗಿದೆ.

- **ದೀರ್ಘ ಸ್ವರಗಳಿಗೆ ಹ್ರಸ್ವಸ್ವರಗಳನ್ನು ಬಳಕೆಮಾಡಿ ಓದುತ್ತಾರೆ.**

ಮಕ್ಕಳು ಪದಾದಿ ಪದಮಧ್ಯ ಹಾಗೂ ಪದಾಂತ್ಯ ಪರಿಸರದಲ್ಲಿ ಬರುವ ದೀರ್ಘ ಸ್ವರಗಳಿಗೆ ಹ್ರಸ್ವಸ್ವರಗಳನ್ನು ಬಳಕೆ ಮಾಡಿ ಓದುತ್ತಾರೆ. ಅಂತಹ ಕೆಲವು ವ್ಯತ್ಯಾಸಗಳನ್ನು ಈ ಕೆಳಗಿನಂತೆ ಗುರುತಿಸಬಹುದು. ಉದಾಹರಣೆಗೆ

**ಪದಾದಿ ಪರಿಸರ:**

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಆ>ಅ | ಆಟ | ಅಟ |
| | ಆಗಸ | ಅಗಸ |
| | ಆಳ | ಅಳ |

| | | |
|---|---|---|
| | ಆಗಮನ | ಅಗಮನ |
| | ಆವರಣ | ಅವರಣ |
| | ಆಲಯ | ಅಲಯ |
| ಈ>ಇ | ಈಶ | ಇಶ |
| | ಈಗ | ಇಗ |
| | ಈಚಲ | ಇಚಲ |
| | ಈಜು | ಇಜು |
| ಊ>ಉ | ಊಟ | ಉಟ |
| | ಊರು | ಉರು |
| | ಊರಜನ | ಉರಜನ |
| | ಊನ | ಉನ |
| | ಊತ | ಉತ |
| ಏ>ಎ | ಏತ | ಎತ |
| | ಏಳು | ಎಳು |
| | ಏನು | ಎನು |
| | ಏರು | ಎರು |
| | ಏಕೆ | ಎಕೆ |
| | ಏಕದಳ | ಎಕದಳ |
| ಓ>ಒ | ಓಟ | ಒಟ |
| | ಓಲಗ | ಒಲಗ |
| | ಓಜ | ಒಜ |
| | ಓರಣ | ಒರಣ |
| | ಓಲೆ | ಒಲೆ |
| | ಓದುವುದು | ಒದುವುದು |
| | ಓಡು | ಒಡು |

• **ಪದಮಧ್ಯ ಪರಿಸರ**

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಆ>ಅ | ಒತ್ತಾಯ | ಒತಯ |
| | ತಪಾಸಣೆ | ತಪಸನೆ |
| | ಫಲಹಾರ | ಪಲಹರ |
| | ದೇವಾಲಯ | ದೇವಲಯ |
| | ಅನುರೂಪ | ಅನುರುಪ |
| | ಅನುಸಾರ | ಅನುಸರ |
| ಈ>ಇ | ತೀರ | ತಿರ |
| | ಚೀಲ | ಚಿಲ |
| | ಮೀರಾ | ಮಿರ |
| | ಜೀವ | ಜಿವ |
| | ನೀರು | ನಿರು |
| | ಕೀಟ | ಕಿಟ |
| ಊ>ಉ | ಮೂರು | ಮುರು |
| | ಕೂಟ | ಕುಟ |
| | ಗೂಡು | ಗುಡು |
| | ನಿಗೂಢ | ನಿಗುಡ |
| | ಸಮೂಹ | ಸಮುಹ |
| ಏ>ಎ | ಕೇರಿ | ಕೆರಿ |
| | ಬೇಳೆ | ಬೆಳೆ |
| | ಕೇಡು | ಕೆಡು |
| | ತೇರು | ತೆರು |
| | ಮೇಕೆ | ಮೆಕೆ |
| | ಸೇಬು | ಸೆಬು |

| | | |
|---|---|---|
| ಓ>ಒ | ಕೋತಿ | ಕೊತಿ |
| | ಕೋಗಿಲೆ | ಕೊಗಿಲೆ |
| | ತೋಟ | ತೊಟ |
| | ಗೋಲಿ | ಗೊಲಿ |
| | ಭೋಜನ | ಬೊಜನ |

• ಪದಾಂತ್ಯ ಪರಿಸರ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಆ>ಅ | ತುಂಬಾ | ತುಬ |
| | ಮಾಲಾ | ಮಲ |
| | ಶಾಲಾ | ಶಲ |
| | ಜಟಕಾ | ಜಟಕ |
| ಈ>ಇ | ಫೀ | ಪಿ |
| | ಕರೀ | ಕರಿ |
| | ಮೀ | ಮಿ |
| ಊ>ಉ | ಹಾಗೂ | ಹಾಗು |
| | ಜಂಬೂ | ಜಬು |
| | ಎಂದೂ | ಎಂದು |
| | ಹಿಂದೂ | ಹಿದು |

**ವಿಶ್ಲೇಷಣೆ**

ಮಕ್ಕಳು ಪದಾದಿ, ಪದಮದ್ಯ ಹಾಗೂ ಪದಾಂತ್ಯ ಪರಿಸರದಲ್ಲಿ ಬರುವ ದೀರ್ಘ ಸ್ವರಗಳಿಗೆ ಹ್ರಸ್ವಸ್ವರಗಳನ್ನು ಬಳಕೆ ಮಾಡಿ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸಕ್ಕೆ ಕಾರಣಗಳೆಂದರೆ;

* ಆಡುಮಾತಿನಲ್ಲಿ ದೀರ್ಘಸ್ವರಗಳ ಬಳಕೆ ಕಡಿಮೆಯಾಗಿರುವುದು.
* ಸ್ವರಗಳ ಉಚ್ಚಾರಣೆಯಲ್ಲಿನ ಅಲ್ಪಧ್ವನಿ ಸಾಮ್ಯತೆಯನ್ನು ಗಮನಿಸದಿರುವುದು.
* ಸ್ವರಗಳಲ್ಲಿನ ರೂಪ ಸಾಮ್ಯತೆ.
* ಶಿಕ್ಷಕನಲ್ಲಿನ ಉಚ್ಚಾರಣ ದೋಷ
* ವಿದ್ಯಾರ್ಥಿಗಳಲ್ಲಿನ ಆಲಿಸುವಿಕೆಯ ದೋಷ

* ಮಕ್ಕಳಿಗೆ ಹ್ರಸ್ವಸ್ವರ ಹಾಗೂ ದೀರ್ಘ ಸ್ವರಗಳ ಬಗ್ಗೆ ಸ್ಪಷ್ಟ ಪರಿಕಲ್ಪನೆ ಮೂಡಿಸದಿರುವುದು.

ಇತ್ಯಾದಿ ಕಾರಣಗಳಿಂದ ಈ ತೆರನಾದ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

▪ ಪದಾದಿ ಪರಿಸರದಲ್ಲಿ ಹ್ರಸ್ವಸ್ವರ 'ಒ' ಧ್ವನಿಯ ಬದಲು ಹ್ರಸ್ವಸ್ವರ 'ಅ' ಧ್ವನಿಯನ್ನು ಓದುತ್ತಾರೆ. ಈ ರೀತಿಯ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಒ>ಅ | ಮೊಲ | ಮಲ |
| | ಮೊಸಳೆ | ಮಸಳಿ |
| | ಮೋಡ | ಮಾಡ |
| | ಮೊನ್ನೆ | ಮನ್ನೆ |

**ವಿಶ್ಲೇಷಣೆ:**

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಈ ಧ್ವನಿಗಳ ವ್ಯತ್ಯಾಸಕ್ಕೆ ಕಾರಣವನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದು. ಬಳ್ಳಾರಿ ಜಿಲ್ಲೆಯ ವ್ಯವಹಾರಿಕ ಕನ್ನಡದಲ್ಲಿ ತೆಲುಗು ಭಾಷೆಯ ಪ್ರಭಾವ ಇರುವುದರಿಂದ ಮಕ್ಕಳು ಈ ರೀತಿಯ ವ್ಯತ್ಯಾಸ ಮಾಡಿ ಓದುತ್ತಾರೆ. ಎನ್ನಲಾಗಿದೆ.

▪ ಪದಾದಿ ಪರಿಸರದಲ್ಲಿ ಹ್ರಸ್ವಸ್ವರ 'ಅ' ಧ್ವನಿಯ ಬದಲು ಹ್ರಸ್ವಸ್ವರ 'ಒ' ಧ್ವನಿಯನ್ನು ಓದುತ್ತಾರೆ. ಈ ರೀತಿಯ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಅ>ಒ | ಕಲ್ಲು | ಕೊಲ್ಲು |
| | ಕಣ್ಣು | ಕೊಣ್ಣು |
| | ಕಪ್ಪೆ | ಕೊಪ್ಪೆ |
| | ಕಬ್ಬು | ಕೊಬ್ಬು |
| | ಕತ್ತಿ | ಕೊತ್ತಿ |

**ವಿಶ್ಲೇಷಣೆ:**

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಈ ಧ್ವನಿಗಳ ವ್ಯತ್ಯಾಸಕ್ಕೆ ಕಾರಣವನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದು. ಬಳ್ಳಾರಿ ಜಿಲ್ಲೆಯ ವ್ಯವಹಾರಿಕ ಕನ್ನಡದಲ್ಲಿ ತೆಲುಗು ಭಾಷೆಯ ಪ್ರಭಾವ ಇರುವುದರಿಂದ ಮಕ್ಕಳು ಈ ರೀತಿಯ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

- ಸ್ವರಗಳಿಗೆ ಬದಲಾಗಿ ವ್ಯಂಜನಗಳನ್ನು ಬಳಕೆ ಮಾಡಿ ಓದುತ್ತಾರೆ.

ಪದಾದಿ ಪರಿಸರದಲ್ಲಿ 'ಅ, ಈ, ಋ' ಸ್ವರಗಳಿಗೆ ಬದಲಾಗಿ 'ಹಾ, ಹಿ, ರು', ವ್ಯಂಜನ ಧ್ವನಿಗಳನ್ನು ಬಳಕೆ ಮಾಡಿ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಅ>ಹಾ | ಆಲ | ಹಾಲ |
| | ಆಸೆ | ಹಾಸೆ |
| | ಆಳು | ಹಾಳು |
| | ಆಕರ | ಹಾಕರ |
| | ಆಚರಿಸು | ಹಾಚರಿಸು |
| ಈ>ಹಿ | ಈಟಿ | ಹಿಟಿ |
| | ಈಗ | ಹಿಗ |
| | ಈಶ್ವರ | ಹಿಶವರ |
| | ಈಜು | ಹಿಜು |
| | ಈಡೇರು | ಹಿಡೇರು |
| ಋ>ರು | ಋಣ | ರುಣ |
| | ಋತು | ರುತು |
| | ಋಜು | ರುಜು |
| | ಋಜುವಾತು | ರುಜುವಾತ |

**ವಿಶ್ಲೇಷಣೆ**

ಮಕ್ಕಳು ಪದಾದಿ, ಪದಮದ್ಯ ಮತ್ತು ಪದಾಂತ್ಯ ಪರಿಸರದಲ್ಲಿ ಕೆಲವು ಸ್ವರಗಳಿಗೆ ವ್ಯಂಜನಗಳನ್ನು ಬಳಕೆ ಮಾಡಿ ಓದುತ್ತಾರೆ. ಈ ತೆರನಾದ ವ್ಯತ್ಯಾಸ ಮಾಡಿ ಓದುವುದನ್ನು ತಪ್ಪು ಎನ್ನುವುದಕ್ಕಿಂತ ಅದು ಕನ್ನಡ ಭಾಷೆಯ ಸಹಜ ರೂಪವೆನ್ನಬಹುದು. ಏಕೆಂದರೆ ವಿಶೇಷ ವಲಯವಾದ ಶಿಕ್ಷಣ ಕ್ಷೇತ್ರವನ್ನು ಬಿಟ್ಟು ಉಳಿದ ಕಡೆಯಲ್ಲಿ ಇವುಗಳ ಬಳಕೆ ಕಡಿಮೆ. ಕನ್ನಡದ ಜಾಯಮಾನ, ಆಡು ನುಡಿಯ ಪ್ರಭಾವ, ಉಚ್ಚಾರಣೆಯ ರೀತಿ ನೀತಿಯಿಂದಾಗಿ ಅವುಗಳ ವಿಕಲ್ಪ ರೂಪಗಳನ್ನು ಬಳಕೆ ಮಾಡಿ ಓದುವುದು ಕಂಡುಬರುತ್ತದೆ. ಅಲ್ಲದೆ 'ಅ' ಸ್ವರಧ್ವನಿಗೆ ಬದಲಾಗಿ 'ಹಾ' ವ್ಯಂಜನವನ್ನು

ಬಳಕೆ ಮಾಡಿ ಓದುವುದಕ್ಕೆ ಕಾರಣ ಈ ಎರಡು ಧ್ವನಿಗಳಲ್ಲಿನ ಉಚ್ಚಾರಣೆಯ ಭಿನ್ನತೆಯನ್ನು ಗಮನಿಸದಿರುವುದು ಹಾಗೂ ಅತಿ ವ್ಯಾಪ್ತಿಯಿಂದ ಈ ತೆರನಾಗಿ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

ಇನ್ನು 'ಈ', 'ಋ' ಸ್ವರಗಳ ಬದಲಾಗಿ ವ್ಯಂಜನ ಧ್ವನಿ 'ಹಿ', 'ರು'ಗಳನ್ನು ಬಳಕೆ ಮಾಡಿ ಓದುವುದನ್ನು ಗಮನಿಸಿದಾಗ ಈ ಧ್ವನಿಗಳಲ್ಲಿನ ಉಚ್ಚಾರಣಾ ಭಿನ್ನತೆಯನ್ನು ಗಮನಿಸದಿರುವುದು ಹಾಗೂ 'ಈ', 'ಋ' ಗಳ ಬಳಕೆ ಕನ್ನಡದಲ್ಲಿ ಕಡಿಮೆಯಿರುವುದರಿಂದ ಈ ತೆರನಾಗಿ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

- **ಅನುಸ್ವರ ಹಾಗೂ ವಿಸರ್ಗಗಳನ್ನು ಲೋಪ ಮಾಡಿ ಓದುತ್ತಾರೆ**

ಪದಮಧ್ಯ ಪರಿಸರದಲ್ಲಿ ಬರುವ ಅನುಸ್ವರ (ಂ) ಹಾಗೂ ವಿಸರ್ಗ (ಃ)ಗಳನ್ನು ಲೋಪಮಾಡಿ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಅಂಕ | ಅಕ |
| | ಅಂಗ | ಅಗ |
| | ಕಂಪನ | ಕಪನ |
| | ಮಂಚ | ಮಚ |
| | ಮಂದ | ಮದ |
| | ಬಂದ | ಬದ |
| | ಅಂತ | ಅತ |
| | ದುಃಖ | ದುಕ |
| | ಅಂತಃಪುರ | ಅತಪುರ |
| | ಅಂತಃಕಲಹ | ಅತಕಲಹ |
| | ಅಂತಃಕರಣ | ಅತಕರಣ |

**ವಿಶ್ಲೇಷಣೆ**

ಪದಮಧ್ಯ ಪರಿಸರದಲ್ಲಿನ ಅನುಸ್ವರ ಮತ್ತು ವಿಸರ್ಗಗಳನ್ನು ಲೋಪ ಮಾಡಿ ಓದುತ್ತಾರೆ. ಈ ತೆರನಾದ ವ್ಯತ್ಯಾಸ ಮಾಡಿ ಓದಲು ಅನುಸ್ವರ ಮತ್ತು ವಿಸರ್ಗಗಳ ಉಚ್ಚಾರಣೆಯ ಬಗ್ಗೆ

ಸ್ಪಷ್ಟವಾಗಿ ತಿಳಿಸದಿರುವುದು, ವಿಸರ್ಗದ ಬಳಕೆ ಕನ್ನಡದಲ್ಲಿ ಇಲ್ಲದಿರುವುದು, ಅನ್ಯ ಭಾಷಾ ಶಬ್ದಗಳ ಬಳಕೆಯಿಂದಾಗಿ ಈ ತೆರನಾಗಿ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

### ▪ ಸಂಧ್ಯಕ್ಷರಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು

ಸಂಧ್ಯಕ್ಷರಗಳಾದ 'ಐ', 'ಔ' ಗಳನ್ನು ಪದಾದಿ, ಪದಮಧ್ಯ ಹಾಗೂ ಪದಾಂತ್ಯ ಪರಿಸರದಲ್ಲಿ 'ಐ' ಹಾಗೂ 'ಔ' ಧ್ವನಿಗಳಿಗೆ ಬದಲಿಗೆ ಕ್ರಮವಾಗಿ 'ಅಯ್' ಹಾಗೂ 'ಅವ್' ಬಳಕೆ ಮಾಡಿ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಬಹಳಷ್ಟು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

• ಪದಾದಿ ಪರಿಸರ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಐ>ಅಯ್ | ಐದು | ಅಯದು |
| | ಐಲು | ಅಯಲು |
| | ಐಡಿ | ಅಯಡಿ |
| | ಐಸಿರಿ | ಅಯಸಿರಿ |
| | ಐರಾವತ | ಅಯರವತ |
| ಔ>ಅವ್ | ಔತಣ | ಅವತಣ |
| | ಔಡಲ | ಅವಡಲ |
| | ಔಷಧ | ಅವಶದ |
| | ಔಪಚಾರಿಕ | ಅವಪಚಾರಿಕ |

• ಪದಮಧ್ಯ ಪರಿಸರ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಐ>ಯಿ | ಕೈದಿ | ಕಯದಿ |
| | ಪೈಸೆ | ಪಯಿಸೆ |
| | ಪೈಲು | ಪಯಿಲು |
| | ಮೈದಾನ | ಮಯಿದಾನ |
| | ರೈಲು | ರಯಿಲು |
| | ಮೈಲು | ಮಯಿಲು |

| | | |
|---|---|---|
| ಔ>ಅವ್ | ಕೌತುಕ | ಕವತುಕ |
| | ಗೌಡ | ಗಾವಡ |
| | ಕೌಶಲ | ಕವಸಲ |
| | ಪೌರುಷ | ಪವರುಷ |
| | ಸೌರಭ | ಸವರಬ |

• ಪದಾಂತ್ಯ ಪರಿಸರ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಐ>ಅಯ್ | ಮೈ | ಮಯ್ |
| | ಪೈ | ಪಯ್ |
| | ಕೈ | ಕಯ್ |
| | ಬೈ | ಬಯ್ |

**ವಿಶ್ಲೇಷಣೆ**

ಸಂಧ್ಯಕ್ಷರಗಳಾದ 'ಐ' ಹಾಗೂ 'ಔ' ಗಳನ್ನು ಮಕ್ಕಳು ಪದಾದಿ, ಪದಮಧ್ಯ ಮತ್ತು ಪದಾಂತ್ಯ ಪರಿಸರದಲ್ಲಿ ಓದುವಾಗ ಹಲವು ತೆರನಾದ ಸಮಸ್ಯೆಗಳನ್ನು ಮಾಡುತ್ತಾರೆ. ಈ ತೆರನಾಗಿ ವ್ಯತ್ಯಾಸ ಮಾಡಿ ಓದುವುದನ್ನು ತಪ್ಪು ಎನ್ನುವುದಕ್ಕಿಂತ ಅದು ಕನ್ನಡ ಭಾಷೆಯ ಸಹಜ ರೂಪವೆನ್ನಬಹುದು. ಏಕೆಂದರೆ ವಿಶೇಷ ವಲಯವಾದ ಶಿಕ್ಷಣ ಕ್ಷೇತ್ರವನ್ನು ಬಿಟ್ಟು ಉಳಿದ ಕಡೆಯಲ್ಲಿ ಇವುಗಳ ಬಳಕೆ ಕಡಿಮೆ. ಕನ್ನಡದ ಜಾಯಮಾನ, ಆಡು ನುಡಿಯ ಪ್ರಭಾವ, ಉಚ್ಚಾರಣೆಯ ರೀತಿ ನೀತಿಯಿಂದಾಗಿ ಅವುಗಳ ವಿಕಲ್ಪ ರೂಪಗಳನ್ನು ಬಳಕೆ ಮಾಡಿ ಓದುವುದು ಕಂಡುಬರುತ್ತದೆ. ಅಲ್ಲದೆ ಸಂಧ್ಯಕ್ಷರಗಳ ಉಚ್ಚಾರಣೆ ಹಾಗೂ ಬರಹಕ್ಕೂ ಇರುವ ಭಿನ್ನತೆಯನ್ನು ಗಮನಿಸದೆ ಇರುವುದು, ಕನ್ನಡದಲ್ಲಿ ಸಂಧ್ಯಕ್ಷರಗಳ ಬಳಕೆ ಕಡಿಮೆ ಇರುವುದು/ಇಲ್ಲದಿರುವುದು, ಶಿಕ್ಷಕರ ಉಚ್ಚಾರಣೆಯಲ್ಲಿನ ದೋಷ, ವಿದ್ಯಾರ್ಥಿಗಳ ಆಲಿಸುವಿಕೆಯಲ್ಲಿನ ದೋಷ, ಪರಭಾಷೆಯ ಪ್ರಭಾವ ಇತ್ಯಾದಿ ಕಾರಣಗಳಿಂದ ಈ ತೆರನಾಗಿ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

**೫.೨. ವ್ಯಂಜನಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು**

ಪದಾದಿ ಹಾಗೂ ಪದಮಧ್ಯ ಪರಿಸರದಲ್ಲಿ ವ್ಯಂಜನಗಳನ್ನು ಓದುವಾಗ ಮಹಾಪ್ರಾಣಕ್ಕೆ ಅಲ್ಪಪ್ರಾಣ, ಘೋಷತ್ವಕ್ಕೆ ಅಘೋಷ, ಅಘೋಷತ್ವಕ್ಕೆ ಘೋಷತ್ವ ಧ್ವನಿಗಳ ಬಳಕೆ ಮಾಡುವುದು, ಅನುನಾಸಿಕಗಳು, ಊಷ್ಮ ಧ್ವನಿಗಳು, ಪಾರ್ಶ್ವಿಕ ಧ್ವನಿಗಳ ಬಳಕೆಯಲ್ಲಿ ಹಾಗೂ ಅರ್ಧ ಸ್ವರಗಳ

ಬಳಕೆಯಲ್ಲಿ ಹಲವು ರೀತಿಯ ವ್ಯತ್ಯಾಸಗಳನ್ನು ಮಾಡಿ ಓದುವುದು ಕಂಡುಬರುತ್ತದೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದು.

- **ಮಹಾಪ್ರಾಣಕ್ಕೆ ಅಲ್ಪಪ್ರಾಣ ಧ್ವನಿಗಳನ್ನು ಬಳಕೆ ಮಾಡಿ ಓದುವುದು**

ಪದಾದಿ, ಪದಮಧ್ಯ ಹಾಗೂ ಪದಾಂತ್ಯ ಪರಿಸರದಲ್ಲಿ ಮಹಾಪ್ರಾಣಕ್ಕೆ ಬದಲಾಗಿ ಅಲ್ಪಪ್ರಾಣ ಧ್ವನಿಗಳನ್ನು ಬಳಕೆ ಮಾಡಿ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

- ಪದಾದಿ ಪರಿಸರ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಖ>ಕ | ಖಗ | ಕಗ |
| | ಖಣ | ಕನ |
| | ಖಚರ | ಕಚರ |
| | ಖಾರಿ | ಕಾರಿ |
| | ಖಂಡ | ಕಡ |
| ಘ>ಗ | ಘಟ | ಗಟ |
| | ಘಟಕ | ಗಟಕ |
| | ಘನತೆ | ಗನತೆ |
| | ಘಂಟೆ | ಗಟೆ |
| | ಘಮಘಮ | ಗಮಗಮ |
| ಛ>ಚ | ಛಲ | ಚಲ |
| | ಛಾಪ | ಚಾಪ |
| | ಛಗ | ಚಗ |
| | ಛಲಗಾರ | ಚಲಗರ |
| | ಛೇಧ | ಚೆದ |
| | ಛೀಮಾರಿ | ಚಿಮರಿ |
| ಝ>ಜ | ಝರಿ | ಜರಿ |
| | ಝಣಝಣ | ಜನಜನ |

| | | |
|---|---|---|
| | ಝುಂಡಾ | ಜಂಡಾ |
| | ಝೇಂಕಾರ | ಜಿಕಾರ |
| ಠ>ಟ | ಠೇವಣಿ | ಟೆವನಿ |
| | ಠಕ್ಕ | ಟಕ್ಕ |
| | ಠೀವಿ | ಟಿವಿ |
| | ಠೇಂಕಾರ | ಟೇಂಕಾರ |
| | ಠಸ್ಸೆ | ಟಸೆ |
| ಢ>ಡ | ಢಗೆ | ಡಗೆ |
| | ಢಾಲು | ಡಾಲು |
| | ಢಣಢಣ | ಡನಡನ |
| | ಢಕ್ಕೆ | ಡಕೆ |
| ಥ>ತ | ಥಳಕು | ತಳಕು |
| | ಥಳಥಳ | ತಲತಲ |
| | ಥಳಿಸಿ | ತಳಿಸು |
| ಧ>ದ | ಧನ | ದನ |
| | ಧವಳ | ದವಲ |
| | ಧಗಧಗ | ದಗದಗ |
| | ಧರೆ | ದರೆ |
| | ಧನಿಕ | ದನಿಕ |
| | ಧಮಕ | ದಮಕ |
| | ಧರಣಿ | ದರನಿ |
| ಫ>ಪ | ಫಲ | ಪಲ |
| | ಫಣ | ಪನ |
| | ಫಲಕ | ಪಲಕ |
| | ಫಣಿ | ಪನಿ |
| | ಫಸಲು | ಪಸಲು |
| | ಫಲಹಾರ | ಪಲಹರ |

| | | |
|---|---|---|
| ಭ>ಬ | ಭಯ | ಬಯ |
| | ಭರತ | ಬರತ |
| | ಭವನ | ಬವನ |
| | ಭಾವನೆ | ಬಾವಾನೆ |
| | ಭಜನೆ | ಬಜನೆ |
| | ಭಾವಿಸು | ಬಾವಿಸು |

• ಪದಮಧ್ಯ ಪರಿಸರ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಖ>ಕ | ದಾಖಲೆ | ದಾಕಲೆ |
| | ದವಾಖಾನೆ | ದವಕಾನೆ |
| | ಅಖಂಡ | ಅಕಂಡ |
| | ಮುಖ | ಮುಕ |
| ಘ>ಗ | ಲಘು | ಲಗು |
| | ಮೇಘ | ಮೆಗ |
| | ಶೀಘ್ರ | ಸೀಗರ |
| | ಸಂಘಜೀವಿ | ಸಂಗಜೀವಿ |
| | ಸಂಘಟನೆ | ಸಂಗಟನೆ |
| ಛ>ಚ | ಮೂರ್ಛೆ | ಮೂರ್ಚೆ |
| | ಊಂಛಾ | ಊಚ |
| ಠ>ಟ | ಕಠೋರ | ಕಟೋರ |
| | ಪಾಠ | ಪಾಟ |
| | ಪೀಠಿಕೆ | ಪಿಟಿಕೆ |
| | ಕಂಠಾಭರಣ | ಕಂಟಬರನ |
| | ಹಠಮಾರಿ | ಹಟಮಾರಿ |
| ಥ>ತ | ಕಥನ | ಕತನ |
| | ರಥ | ರತ |

| | | |
|---|---|---|
| | ಪಥ | ಪತ |
| | ಸಾರಥಿ | ಸರತಿ |
| | ಅಥಣಿ | ಅತನಿ |
| ಧ>ದ | ಅಧಿಕಾರ | ಅದಿಕಾರ |
| | ಅಧಿಕ | ಅದಿಕ |
| | ಆಧುನಿಕ | ಅದುನಿಕ |
| | ಅಧಮ | ಅದಮ |
| | ಅಧಿನಿಯಮ | ಅದಿನಿಯಮ |
| | ಅಧಿವೇಶನ | ಅದಿವೆಸನ |
| ಫ>ಪ | ಸಫಲ | ಸಪಲ |
| | ಪಲಾಫಲ | ಪಲಪಲ |
| | ಫಳಫಳ | ಪಳಪಳ |
| | ರೇಫೆ | ರೆಪೆ |
| ಭ>ಬ | ಅಭಯ | ಅಬಯ |
| | ವಿಭಾಗ | ವಿಬಾಗ |
| | ಸಂಭವ | ಸಬವ |
| | ಅನುಭವ | ಅನುಬವ |
| | ಅಭಿನಂದನೆ | ಅಬಿನಂದನೆ |
| | ಗಂಭೀರ | ಗಂಬಿರ |

**ವಿಶ್ಲೇಷಣೆ**

ಮಕ್ಕಳು ಮಹಾಪ್ರಾಣಕ್ಕೆ ಬದಲಾಗಿ ಅಲ್ಪಪ್ರಾಣ ಧ್ವನಿಗಳನ್ನು ಬಳಕೆ ಮಾಡಿ ಓದಲು ಕಾರಣಗಳೆಂದರೆ

* ಕೇಶಿರಾಜನೆ ಹೇಳಿರುವ ಪ್ರಕಾರ ಕನ್ನಡದಲ್ಲಿ ಮಹಾಪ್ರಾಣ ಧ್ವನಿಗಳ ಬಳಕೆ ಇಲ್ಲದಿರುವುದು ಅಥವಾ ಕಡಿಮೆ ಇರುವುದು.
* ಆಡು ಮಾತಿನಲ್ಲಿ ಮಹಾಪ್ರಾಣ ಧ್ವನಿಗಳ ಬಳಕೆ ಇಲ್ಲದಿರುವುದು.
* ಮಹಾಪ್ರಾಣ ಮತ್ತು ಅಲ್ಪಪ್ರಾಣ ಧ್ವನಿಗಳ ನಡುವೆ ಇರುವ ಅಲ್ಪಧ್ವನಿ ಸಾಮ್ಯತೆಯನ್ನು ಗಮನಿಸದಿರುವುದು.

* ಕೆಲ ಧ್ವನಿಗಳಲ್ಲಿನ ರೂಪ ಸಾಮ್ಯತೆ
* ಈ ಧ್ವನಿಗಳ ಉಚ್ಚಾರಣೆಯ ಬಗ್ಗೆ ಶಿಕ್ಷಕರು ಮಕ್ಕಳಿಗೆ ಸರಿಯಾದ ಪರಿಕಲ್ಪನೆ ಮೂಡಿಸದಿರುವುದು.
* ಉಚ್ಚಾರಣೆಯ ದೋಷ
* ಆಲಿಸುವಿಕೆಯಲ್ಲಿನ ದೋಷ
* ಅನ್ಯ ಭಾಷೆಯ ಪ್ರಭಾವ ಇತ್ಯಾದಿ ಕಾರಣದಿಂದಾಗಿ ಈ ತೆರನಾದ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

■ **ಅನುನಾಸಿಕ ಧ್ವನಿಗಳನ್ನು ವ್ಯತ್ಯಾಸಮಾಡಿ ಓದುತ್ತಾರೆ.**

ಅನುನಾಸಿಕ ಧ್ವನಿಗಳನ್ನು ಮುಖ್ಯವಾಗಿ ಪದಮದ್ಯ ಹಾಗೂ ಪದಾಂತ್ಯದಲ್ಲಿ ಮೂರ್ಧನ್ಯ ಅನುನಾಸಿಕ 'ಣ' ಕಾರಕ್ಕೆ ಬದಲಾಗಿ ದಂತ್ಯ ಅನುನಾಸಿಕ 'ನ' ಧ್ವನಿಯನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆ

**ಪದಮದ್ಯ ಹಾಗೂ ಪದಾಂತ್ಯ ಪರಿಸರ**

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಣ>ನ | ಗಣತಿ | ಗನತಿ |
| | ಢಣಢಣ | ಡನಡನ |
| | ಗಣಿ | ಗನಿ |
| | ಚರಣ | ಚರನ |
| | ತಪಾಸಣೆ | ತಪಸನೆ |
| | ಗೋಣಿ | ಗೊನಿ |
| | ಫಣಿ | ಪನಿ |

**ವಿಶ್ಲೇಷಣೆ**

ಮಕ್ಕಳು ಅನುನಾಸಿಕ ಧ್ವನಿಗಳನ್ನು ವ್ಯತ್ಯಾಸ ಮಾಡಿ ಓದಲು ಕಾರಣಗಳೆಂದರೆ

* ಅನುನಾಸಿಕ ಧ್ವನಿಗಳ ಉಚ್ಚಾರಣೆಯಲ್ಲಿನ ಧ್ವನಿ ಸಾಮ್ಯತೆ.
* ಅನುನಾಸಿಕ ಧ್ವನಿಗಳ ಪರಿಕಲ್ಪನೆ ಸ್ಪಷ್ಟವಾಗಿ ಮೂಡಿಸದಿರುವುದು
* ಶಿಷ್ಟ ನುಡಿಗಳ ಅಂತರ
* ಮನೆಮಾತು–ಶಾಲೆ ಮಾತುಗಳ ನಡುವಿನ ವ್ಯತ್ಯಾಸ.
* ನಾಸಿಕದ ದೋಷ ಹಾಗೂ ನಾಲಿಗೆ ಹೊರಳದೆ ಇರುವುದು.

ಇತ್ಯಾದಿ ಕಾರಣಗಳಿಂದಾಗಿ ಈ ತೆರನಾದ ವ್ಯತ್ಯಾಸ ಮಾಡಿ ಓದುವುದು ಕಂಡುಬಂದಿದೆ.

■ **ಪಾರ್ಶ್ವಿಕ ಧ್ವನಿಗಳಲ್ಲಿನ ವ್ಯತ್ಯಾಸಗಳು**

ಪದಮದ್ಯ ಹಾಗೂ ಪದಾಂತ್ಯ ಪರಿಸರದಲ್ಲಿ ಮೂರ್ಧನ್ಯ ಪಾರ್ಶ್ವಿಕ ವ್ಯಂಜನ 'ಳ' ಧ್ವನಿಗೆ ಬದಲಾಗಿ ದಂತ್ಯ ಪಾರ್ಶ್ವಿಕ ವ್ಯಂಜನ 'ಲ' ಧ್ವನಿಯನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

- **ಪದಮದ್ಯ ಹಾಗೂ ಪದಾಂತ್ಯ ಪರಿಸರ**

| ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|
| ಗಳಿಗೆ | ಗಲಿಗೆ |
| ಗುಳಿಗೆ | ಗುಲಿಗೆ |
| ಸುಳಾದಿ | ಸೂಲಾದಿ |
| ಕೊಳವೆ | ಕೊಲವಿ |
| ಕಟ್ಟಳೆ | ಕಟಲೆ |
| ಕಳೆ | ಕಲೆ |
| ಕಾಳು | ಕಾಲು |
| ನಳ | ನಲ |
| ಕಂಬಳ | ಕಂಬಲ |

**ವಿಶ್ಲೇಷಣೆ**

ಮಕ್ಕಳು ಪಾರ್ಶ್ವಿಕ ಧ್ವನಿಗಳನ್ನು ವ್ಯತ್ಯಾಸ ಮಾಡಿ ಓದಲು ಕಾರಣವೆಂದರೆ ಪಾರ್ಶ್ವಿಕ ಧ್ವನಿಗಳಲ್ಲಿನ ಉಚ್ಚಾರಣೆಯ ಭಿನ್ನತೆಯನ್ನು ಗಮನಿಸದೆ ಈ ತೆರನಾಗಿ ವ್ಯತ್ಯಾಸ ಮಾಡಿ ಓದುವುದು ಕಂಡುಬಂದಿದೆ.

■ **ಊಷ್ಮ ಧ್ವನಿಗಳಲ್ಲಿನ ವ್ಯತ್ಯಾಸಗಳು**

ಪದಾದಿ ಮತ್ತು ಪದಮದ್ಯ ಪರಿಸರದಲ್ಲಿ ತಾಲವ್ಯ ಅಘೋಷ ಘರ್ಷ ವ್ಯಂಜನ 'ಶ' ಧ್ವನಿ ಹಾಗೂ ಮೂರ್ಧನ್ಯ ಅಘೋಷ ಘರ್ಷ ವ್ಯಂಜನ 'ಷ' ಧ್ವನಿಗಳ ಬದಲಿಗೆ ವರ್ತ್ಸ್ಯ ಅಘೋಷ ಘರ್ಷ ವ್ಯಂಜನ 'ಸ' ಧ್ವನಿಯನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

• ಪದಾದಿ ಪರಿಸರ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಶ>ಸ | ಶಪಥ | ಸಪತ |
| | ಶಯನ | ಸಯನ |
| | ಶರ | ಸರ |
| | ಶತಕ | ಸತಕ |
| | ಶಂಕರ | ಸಂಕರ |
| | ಶಿಕ್ಷಕ | ಸಿಕ್ಷಕ |
| | ಶಾಲೆ | ಸಾಲೆ |
| | ಶರಣ | ಸರಣ |
| | ಶಕ್ತಿ | ಸಕಿತಿ |
| | ಶಿಬಿರ | ಸಿಬಿರ |
| ಷ>ಸ | ಷಟ್ಪದಿ | ಸಟ್ಪದಿ |
| | ಷಂಡ | ಸಂಡ |
| | ಷರಾ | ಸರಾ |
| | ಷರಾಯಿ | ಸರಾಯಿ |
| | ಷಷ್ಠಿ | ಸಸ್ಠಿ |

• ಪದಮಧ್ಯ ಪರಿಸರ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಶ>ಸ | ವಿಶೇಷ | ವಿಸೇಸ |
| | ದಶಮುಖ | ದಸಮುಕ |
| | ದೇಶ | ದೆಸ |
| | ಮಶಣ | ಮಸನ |
| | ಕಾಶಿ | ಕಾಸಿ |
| | ಶಿಸು | ಸಿಸು |
| | ದೇಶಿ | ದೆಸಿ |

| | | |
|---|---|---|
| ಷ>ಸ | ವಿಷಯ | ವಿಸಯ |
| | ವಿಷಮ | ವಿಸಮ |
| | ಕಷಾಯ | ಕಸಾಯ |
| | ಭಾಷೆ | ಬಾಸೆ |
| | ಔಷಧಿ | ಅವಸದಿ |
| | ಋಷಿ | ರುಸಿ |

**ವಿಶ್ಲೇಷಣೆ**

ಮಕ್ಕಳು ಊಷ್ಮ ಧ್ವನಿಗಳನ್ನು ವ್ಯತ್ಯಾಸ ಮಾಡಿ ಓದಲು ಕಾರಣಗಳೆಂದರೆ

* ಊಷ್ಮ ಧ್ವನಿಗಳಾದ ಶ, ಷ ಧ್ವನಿಗಳ ಬಳಕೆ ಕನ್ನಡದಲ್ಲಿ ಇಲ್ಲದಿರುವುದು ಅಥವಾ ಕಡಿಮೆ ಇರುವುದು.
* ಊಷ್ಮ ಧ್ವನಿಗಳ ಉಚ್ಚಾರಣೆಯಲ್ಲಿನ ಅಲ್ಪಧ್ವನಿ ಸಾಮ್ಯತೆಯನ್ನು ಸರಿಯಾಗಿ ಗ್ರಹಿಸದಿರುವುದು.
* ಊಷ್ಮ ಧ್ವನಿಗಳ ಬಗ್ಗೆ ಸ್ಪಷ್ಟವಾದ ಪರಿಕಲ್ಪನೆಯನ್ನು ಮೂಡಿಸದಿರುವುದು.
* ಉಚ್ಚಾರಣೆಯಲ್ಲಿನ ದೋಷ
* ಆಲಿಸುವಿಕೆಯಲ್ಲಿನ ದೋಷ
* ಪರಭಾಷೆಗಳ ಪ್ರಭಾವ
* ಆಡುಮಾತಿನಲ್ಲಿ ಶ, ಷ, ಕಾರಗಳಿಗಿಂತ 'ಸ' ಕಾರದ ಬಳಕೆ ಹೆಚ್ಚಾಗಿರುವುದು
* ದೋಷ ಪೂರಿತ ಬೋಧನೆ

ಇತ್ಯಾದಿ ಕಾರಣದಿಂದಾಗಿ ಈ ತೆರನಾಗಿ ವ್ಯತ್ಯಾಸ ಮಾಡಿ ಓದಬಹುದು ಎನ್ನಲಾಗಿದೆ.

■ **ಅರ್ಧ ಸ್ವರಗಳನ್ನು ಓದುವಲ್ಲಿನ ಸಮಸ್ಯೆಗಳು**

ಪದಾದಿ ಪರಿಸರದಲ್ಲಿ ಅರ್ಧಸ್ವರ 'ಯ' ಹಾಗೂ 'ವ' ಧ್ವನಿಗಳ ಬದಲಿಗೆ ಸ್ವರಗಳಾದ 'ಎ' ಹಾಗೂ 'ಒ' ಧ್ವನಿಗಳನ್ನು ಬಳಕೆ ಮಾಡಿ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಬಹಳಷ್ಟು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

• ಪದಾದಿ ಪರಿಸರ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಯ>ಎ | ಯಮ | ಎಮ |
| | ಯವನ | ಎವನ |

| | | |
|---|---|---|
| | ಯಮತ | ಎಮತ |
| | ಯಾತನೆ | ಎತನೆ |
| | ಯತನ | ಎತನ |
| | ಯಮಕ | ಎಮಕ |
| | ಯಕ್ಷ | ಎಕ್ಷ |
| ವ>ಒ | ವಂದನೆ | ಒಂದನೆ |
| | ವಧು | ಒದು |
| | ವಂಚನೆ | ಒಂಚನೆ |
| | ವರ್ಷ | ಒರುಷ |
| | ವರದಿ | ಒರದಿ |

**ವಿಶ್ಲೇಷಣೆ:**

ಕನ್ನಡದ ಅರ್ಧ ಸ್ವರಗಳಲ್ಲಿ ಉಂಟಾಗುವ ವ್ಯತ್ಯಾಸಗಳನ್ನು ಸಮಸ್ಯೆಗಳೆಂದು ಪರಿಗಣಿಸದೆ ಅದು ಕನ್ನಡದ ಸಹಜ ರೂಪವೆಂದೆ ಪರಿಗಣಿಸಬೇಕು. ಹಾಗೂ ವಿಕಲ್ಪದಿಂದ ಈ ತೆರನಾದ ವ್ಯತ್ಯಾಸವನ್ನು ಮಾಡುತ್ತವೆ ಎಂಬುದನ್ನು ನಮ್ಮ ಭಾಷಾವಿಜ್ಞಾನಿಗಳು ಹೇಳಿದ್ದಾರೆ. (ಡಿ.ಎನ್. ಶಂಕರಭಟ್‌ರು 'ನಮ್ಮ ಬರಹವನ್ನು ಸರಿಪಡಿಸೋಣ' ಎಂಬ ಪುಸ್ತಕದಲ್ಲಿ ಹೇಳಿದ್ದಾರೆ) ಅಲ್ಲದೆ ಅರ್ಧಸ್ವರಗಳಲ್ಲಿನ ವ್ಯತ್ಯಾಸಕ್ಕೆ ಕಾರಣಗಳೆಂದರೆ

* ಧ್ವನಿಗಳ ಉಚ್ಚಾರಣೆಯಲ್ಲಿನ ಅಲ್ಪಧ್ವನಿ ಸಾಮ್ಯತೆ
* ವ್ಯವಹಾರಿಕ ಕನ್ನಡದ ಪ್ರಭಾವ
* ಅರ್ಧಸ್ವರಗಳ ಬಗ್ಗೆ ಸ್ಪಷ್ಟ ಪರಿಕಲ್ಪನೆ ಇಲ್ಲದಿರುವುದು
* ಆತುರ, ಉತ್ಸಾಹದ ಅತಿರೇಕ ಇತ್ಯಾದಿ ಕಾರಣದಿಂದಾಗಿ ಈ ತೆರನಾದ ವ್ಯತ್ಯಾಸವನ್ನು ಮಾಡಿ ಓದಿರುವುದು ಕಂಡುಬರುತ್ತದೆ.

■ **ಹ>ಅ ಬಳಕೆಯಲ್ಲಿನ ದೋಷಗಳಿಗೆ ಕಾರಣಗಳು**

ಪದಾದಿ ಪದಮಧ್ಯ ಪರಿಸರದಲ್ಲಿ ವ್ಯಂಜನ 'ಹ' ಧ್ವನಿಗೆ ಬದಲಾಗಿ ಸ್ವರಧ್ವನಿಯಾದ 'ಅ' ಕಾರವನ್ನು ಬಳಕೆ ಮಾಡಿ ಓದುತ್ತಾರೆ. ಈ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

• ಪದಾದಿ ಪರಿಸರ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಹ>ಅ | ಹಳದಿ | ಅಲದಿ |
| | ಹವಳ | ಅವಲ |
| | ಹಳೆಯ | ಅಲೆಯ |
| | ಹಕ್ಕಿ | ಅಕ್ಕಿ |
| | ಹತ್ತು | ಅತ್ತು |
| | ಹಸು | ಅಸು |
| | ಹಣತೆ | ಅನತೆ |
| | ಹನುಮಂತ | ಅನುಮಂತ |
| | ಹದ್ದು | ಅದು |
| | ಹಲಸು | ಅಲಸು |

• ಪದಮದ್ಯ ಪರಿಸರ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಹ>ಅ | ಬಹಳ | ಬಅಳ |
| | ಮಹಾವೀರ | ಮಅವೀರ |
| | ಸಹಕಾರ | ಸಅಕಾರ |
| | ಕಹಳೆ | ಕಅಲೆ |
| | ವಿಹಾರ | ವಿಅರ |
| | ವಿಹಂಗಮ | ವಿಅಗಮ |

**ವಿಶ್ಲೇಷಣೆ**

ಮಕ್ಕಳು ಪದಾದಿ ಮತ್ತು ಪದಮದ್ಯ ಪರಿಸರದಲ್ಲಿ ವ್ಯಂಜನ 'ಹ' ಧ್ವನಿಗೆ ಬದಲಾಗಿ ಸ್ವರಧ್ವನಿಯಾದ 'ಅ' ಕಾರವನ್ನು ಬಳಕೆ ಮಾಡಿ ಓದಲು ಕಾರಣವೆಂದರೆ

* ಬರಹ ಹಾಗೂ ಆಡುನುಡಿಗಳಲ್ಲಿ 'ಹ' ಕಾರದ ಬಳಕೆ ಕಡಿಮೆ ಇರುವುದರಿಂದ.
* ಆತುರ ಹಾಗೂ ಉತ್ಸಾಹದ ಅತಿರೇಕದಿಂದ
* ಎರಡು ಧ್ವನಿಗಳಲ್ಲಿನ ಅಲ್ಪಧ್ವನಿ ಸಾಮ್ಯತೆಯಿಂದ

* ಕಡಿಮೆ ವ್ಯಾಪ್ತಿಯಿಂದ ಇತ್ಯಾದಿ ಕಾರಣದಿಂದಾಗಿ ಈ ತೆರನಾಗಿ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

## ೫.೩. ಗುಣಿತಾಕ್ಷರಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು

• ' ಾ > ''

ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ (' ಾ') ತಲಕಟ್ಟಿನಿಳಿಯನ್ನು ಬಳಕೆ ಮಾಡದೆ ಬರೆದಿರುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಕಡಿಮೆ ಮಕ್ಕಳಲ್ಲಿ ಮಾತ್ರ ನೋಡಬಹುದು. ಉದಾಹರಣೆಗೆ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ: | ಮಾರು | ಮರು |
| | ಕಾಲು | ಕಲು |
| | ವಾರ | ವರ |
| | ಮಹಾದಾಸೆ | ಮಅದಸೆ |
| | ಭಾನುವಾರ | ಬನುವಾರ |
| | ಸಹಕಾರ | ಸಹಕರ |
| | ಯಾತನೆ | ಯತನೆ |

• 'ೀ > ೦'

ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ (ೀ) ಇಳಿಯನ್ನು ಬಳಕೆ ಮಾಡದೆ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಕೆಲವು ಮಕ್ಕಳಲ್ಲಿ ಮಾತ್ರ ಕಂಡುಬರುತ್ತದೆ. ಉದಾಹರಣೆಗೆ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಚೀಲ | ಚಿಲ |
| | ಮೀನು | ಮಿನು |
| | ಕೀಳು | ಕಿಳು |
| | ದೀನ | ದಿನ |
| | ತೀರಾ | ತಿರ |
| | ಸಮೀಪ | ಸಮಿಪ |

• ‘ ೂ > ು’

ಪದಾದಿ ಹಾಗೂ ಪದಮಧ್ಯ ಪರಿಸರದಲ್ಲಿ (ೂ) ಕೊಂಬಿನಿಳಿಯನ್ನು ಬಳಕೆ ಮಾಡದೆ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಕೆಲವು ಮಕ್ಕಳಲ್ಲಿ ಮಾತ್ರ ಕಂಡುಬರುತ್ತದೆ. ಉದಾಹರಣೆಗೆ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಕೂಟ | ಕುಟ |
| | ಗೂಡು | ಗುಡು |
| | ಮೂರು | ಮುರು |
| | ಕುತೂಹಲ | ಕುತುಹಲ |
| | ಚೂರು | ಚುರು |
| | ದೂರ | ದುರ |

• ‘ ೃ > ್ರು’

ಪದಾದಿ ಮತ್ತು ಪದಾಂತ್ಯ ಪರಿಸರದಲ್ಲಿ ವಟ್ಟಸುಳಿ ( ೃ ) ಬದಲಿಗೆ ವ್ಯಂಜನಕ್ಕೆ ಗುಡಿಸಿ ಅಥವಾ ಕೊಂಬು (ಿ, ು) ನೀಡಿ ‘ರ’ ಕಾರದ ಒತ್ತಕ್ಷರವನ್ನು ಬಳಕೆ ಮಾಡಿ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಬಹಳಷ್ಟು ಮಕ್ಕಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಗೃಹ | ಗ್ರುಹ |
| | ಕೃಷಿ | ಕ್ರುಸಿ |
| | ಕೃಷ್ಣ | ಕ್ರಿಸ್ಣ |
| | ನೃತ್ಯ | ನ್ರತಯ |
| | ಪಿತೃ | ಪಿತ್ರು |
| | ಮಾತೃ | ಮಾತ್ರು |
| | ಪೃಥ್ವಿ | ಪ್ರುತಿವಿ |

• ‘ ೀ > ಿ’

ಪದಮಧ್ಯ ಪರಿಸರದಲ್ಲಿ ಐತ್ವದೀರ್ಘ(ೀ)ವನ್ನು ಬಳಕೆ ಮಾಡದೆ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಮಾತ್ರ ಕಂಡುಬರುತ್ತದೆ. ಉದಾಹರಣೆಗೆ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಕೇರಿ | ಕೆರಿ |
| | ಬೇಗ | ಬೆಗ |
| | ಬೇಳೆ | ಬೆಳೆ |
| | ಮೇಲೆ | ಮೆಲೆ |
| | ಉದ್ದೇಶ | ಉದೆಸ |
| | ಅಪೇಕ್ಷೆ | ಅಪೆಕ್ಷೆ |

• 'ೋ> ೊ'

ಪದಮಧ್ಯ ಪರಿಸರದಲ್ಲಿ ಓತ್ವದೀರ್ಘ(ೋ)ವನ್ನು ಬಳಕೆ ಮಾಡದೆ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಮಾತ್ರ ಕಂಡುಬರುತ್ತದೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಕೋಗಿಲೆ | ಕೊಗಿಲೆ |
| | ಭೋಜನ | ಬೊಜನ |
| | ಕೋಪ | ಕೊಪ |
| | ನೋಟ | ನೊಟ |
| | ದೋಸೆ | ದೊಸೆ |
| | ಪೋಲಿ | ಪೊಲಿ |
| | ಯೋಚನೆ | ಯೊಚನೆ |
| | ತೋರಣ | ತೊರಣ |

• 'ೌ > ಅವ್'

ಪದಾದಿ ಪರಿಸರದಲ್ಲಿ ಔತ್ವದೀರ್ಘ( ೌ )ವನ್ನು ಬಳಕೆ ಮಾಡದೆ ಆಯಾ ವ್ಯಂಜನದ ಮುಂದೆ 'ಅವ' ಕಾರವನ್ನು ಬಳಕೆ ಮಾಡಿ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಮಾತ್ರ ಕಂಡುಬರುತ್ತದೆ. ಉದಾಹರಣೆಗೆ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಕೌತುಕ | ಕವತುಕ |
| | ಔತಣ | ಅವತನ |

| | |
|---|---|
| ಗೌರವ | ಗವರವ |
| ನೌಕರ | ನವಕರ |
| ಮೌಳಿ | ಮವಳಿ |

• ಪದಾದಿ ಹಾಗೂ ಪದಮಧ್ಯ ಪರಿಸರದಲ್ಲಿ ಬರುವ ಗುಣಿತಾಕ್ಷರ ಧ್ವನಿ ಖಾ, ಖಿ, ಖೆ, ಖೇ, ಧ್ವನಿ ಬದಲು ಕಾ, ಕಿ, ಕೆ, ಕೇ ಧ್ವನಿಗಳನ್ನು ಬಳಕೆ ಮಾಡಿ ಓದುತ್ತಾರೆ. ಈ ತೆರನಾದ ವ್ಯತ್ಯಾಸಗಳನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಖರೀದಿ | ಕರದಿ |
| | ಖಿನ್ನ | ಕಿನ್ನ |
| | ಖರ್ಚು | ಕರ್ಚು |
| | ಖಡಾಖಂಡಿತ | ಕಡಕಡಿತ |
| | ದವಾಖಾನೆ | ದವಕನೆ |
| | ಸುಖಿ | ಸುಕಿ |
| | ಖೇದ | ಕೆದ |
| | ಗೋಖಲೆ | ಗೊಕಲೆ |
| | ಖೇದ | ಕೆದ |
| | ಖೈದಿ | ಕಯಿದಿ |
| | ಖಜಾನೆ | ಕಜನೆ |

• ಪದಾದಿ ಪರಿಸರದಲ್ಲಿ ಛಾ, ಛೀ, ಛೇ ಧ್ವನಿಗಳ ಬದಲು ಚಾ, ಚಿ, ಚೆ, ಧ್ವನಿ ಬಳಕೆ ಮಾಡಿ ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಛಾಯೆ | ಚಾಯ |
| | ಛಂದಸ್ಸು | ಚಂದಸ್ಸು |
| | ಛೇದ | ಚೆದ |
| | ಛೀಮಾರಿ | ಚಿಮರಿ |
| | ಛೇದಿಸು | ಚೆದಿಸು |

• ಪದಾದಿ ಪರಿಸರದಲ್ಲಿ ಢ, ಢೀ, ಢೋ ಬದಲು ಡ, ಡಿ, ಡೊ ಬಳಕೆ ಮಾಡಿ ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಂಡುಬರುತ್ತದೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಢಾಣೆ | ಡಾನೆ |
| | ಢಾಳಿಸು | ಡಾಳಿಸು |
| | ಢೀಗು | ಡಿಗು |
| | ಢೋಂಗಿ | ಡೊಂಗಿ |

• ಪದಾದಿ ಪರಿಸರದಲ್ಲಿ ಗುಣಿತಾಕ್ಷರ ಘಾ, ಘೀ, ಘೋ, ಧ್ವನಿಗಳ ಬದಲಿಗೆ ಗಾ, ಗಿ, ಗೊ ಧ್ವನಿಗಳನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ೫, ೬ ಮತ್ತು ೭ನೆಯ ತರಗತಿಯ ಎಲ್ಲಾ ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಘೀಳಿಡು | ಗಿಳಿಡು |
| | ಘಾಸಿ | ಗಾಸಿ |
| | ಘೋಷಣೆ | ಗೊಸನೆ |
| | ಅಘಾತ | ಅಗಾತ |
| | ಘೋರ್ಪಡೆ | ಗೊರಪಡೆ |

• ಪದಮದ್ಯ ಪರಿಸರದಲ್ಲಿ ಗುಣಿತಾಕ್ಷರ ಠ, ಠೀ, ಠೇ ಧ್ವನಿಗಳ ಬದಲಿಗೆ 'ಟ', 'ಟಿ', 'ಟೆ' ಧ್ವನಿಗಳನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಠೀವಿ | ಟಿವಿ |
| | ಠಾಣೆ | ಟಾನೆ |
| | ಠೇವಣಿ | ಟೆವಣಿ |
| | ಠೇಂಕಾರ | ಟೆಕಾರ |
| | ಠಿಕಾಣಿ | ಟಿಕಾಣಿ |
| | ಠಾಕೂರ್ | ಟಾಕುರ |

• ಪದಾದಿ ಪರಿಸರದಲ್ಲಿ ಗುಣಿತಾಕ್ಷರ 'ಹಾ', 'ಹೈ' ಧ್ವನಿಗಳ ಬದಲಾಗಿ ಹ್ರಸ್ವಸ್ವರ 'ಆ', 'ಐ' ಧ್ವನಿಗಳನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ೫, ಮತ್ತು ೭ನೆಯ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಹಾಡಿ | ಆಡಿ |
| | ಹೈದ | ಐದ |
| | ಹಾಕು | ಆಕು |

• ಪದಾದಿ ಮತ್ತು ಪದಮದ್ಯ ಪರಿಸರದಲ್ಲಿ ಧಾ, ಧೀ, ಧು, ಧೋ ಬದಲು ದಾ, ದಿ, ದು, ದೊ ಎಂದು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಧಾನ್ಯ | ದಾನ |
| | ಧಾರಕ | ದಾರಕ |
| | ಧೀರ | ದಿರ |
| | ಧೀಮಂತ | ದಿಮಂತ |
| | ಅಧೀನ | ಅದಿನ |
| | ಧುಮುಕು | ದುಮುಕು |
| | ಧೋರಣೆ | ದೊರಣೆ |
| | ಅಧೋಗತಿ | ಅದೊಗತಿ |

• ಪದಾದಿ ಪರಿಸರದಲ್ಲಿ ಫಾ, ಫಿ, ಫೇ ಬದಲು ಪಾ, ಪಿ, ಪೆ ಎಂದು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ೫ ಮತ್ತು ೬ನೇ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಫಾಶಿ | ಪಾಸಿ |
| | ಫಾಲ್ಗುಣ | ಪಾಲಗುಣ |
| | ಫಿತೂರಿ | ಪಿತೂರಿ |
| | ಫೇಣಿ | ಪೆನಿ |
| | ಫೇರಿ | ಪೆರಿ |

• ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ ಗುಣಿತಾಕ್ಷರ ಥಾ, ಥೇ, ಥೈ, ಗಳ ಬದಲು ತಾ, ತೆ, ತೈ ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ೫ ಮತ್ತು ೬ನೇ ತರಗತಿಯ ಮಕ್ಕಳು ಹೆಚ್ಚು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಥೇಟ್ | ತೆಟ್ |
| | ಥೈಲಿ | ತೈಲಿ |
| | ಥಾಲಿ | ತಾಲಿ |
| | ಥಾಟು | ತಾಟು |

• ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ ಭಾ, ಭೀ, ಭೂ, ಭೇ, ಭೋ ಧ್ವನಿಗಳ ಬದಲು ಬಾ, ಬಿ, ಬೂ, ಬೆ, ಬೊ ಎಂದು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಭಾವನೆ | ಬಾವನೆ |
| | ವಿಭಾಗ | ವಿಬಾಗ |
| | ಭೀಮ | ಬಿಮ |
| | ನಿರ್ಭೀತಿ | ನಿರಬಿತಿ |
| | ಸಹಾನುಭೂತಿ | ಸಅನುಬುತಿ |
| | ಭೇರಿ | ಬೆರಿ |
| | ಅಭೇದ | ಅಬೆದ |
| | ಭೋಗ | ಬೊಗ |
| | ಉಗಭೋಗ | ಉಗಬೊಗ |

• ಪದಾದಿ ಪರಿಸರದಲ್ಲಿ ಗುಣಿತಾಕ್ಷರ ಶಾ, ಶಿ, ಶೆ, ಶೊ, ಧ್ವನಿಯ ಬದಲು ಗುಣಿತಾಕ್ಷರ ಸಾ, ಸಿ, ಸೆ, ಸೊ ಧ್ವನಿಗಳನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಶಾಲಾ | ಸಾಲಾ |
| | ಶಾಂತಿ | ಸಾಂತಿ |

| | |
|---|---|
| ಶಿಕಾರಿ | ಸಿಕಾರಿ |
| ಶಿಖರ | ಸಿಕರ |
| ಶೀತ | ಸಿತ |
| ಶೀತಲ | ಸಿತಲ |
| ಶೋಕ | ಸೊಕ |
| ಶೂಲ | ಸೂಲ |
| ಶೇಕಡ | ಸೆಕಡ |

• ಪದಾದಿ ಪರಿಸರದಲ್ಲಿ ಗುಣಿತಾಕ್ಷರ ಷ, ಷಾ, ಷಿ ಧ್ವನಿಗಳ ಬದಲು ಗುಣಿತಾಕ್ಷರ ಸ, ಸಾ, ಸಿ ಧ್ವನಿಗಳನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಷಂಡ | ಸಂಡ |
| | ಷಟ್ಪದಿ | ಸಟ್ಪದಿ |
| | ಷಾಮೀಲು | ಸಾಮಿಲು |
| | ಷಿಕಾರಿ | ಸಿಕಾರಿ |

**ವಿಶ್ಲೇಷಣೆ:**

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಮಕ್ಕಳು ಗುಣಿತಾಕ್ಷರಗಳನ್ನು ಓದುವಾಗ ಮಾಡುವ ಪ್ರಮುಖ ವ್ಯತ್ಯಾಸ ಅಥವಾ ಸಮಸ್ಯೆಗಳಿಗೆ ಕಾರಣಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

* ಎರಡು ಗುಣಿತಾಕ್ಷರಗಳ ನಡುವೆ ಇರುವ ರಚನೆಯಲ್ಲಿನ ಅಲ್ಪ ವ್ಯತ್ಯಾಸವನ್ನು ಗಮನಿಸದೆ ಇರುವುದು.
* ಬೋಧಕರು ಗುಣಿತಾಕ್ಷರಗಳ ಬಗ್ಗೆ ಸರಿಯಾದ ಪರಿಕಲ್ಪನೆ ಮೂಡಿಸದೆ ಇರುವುದು.
* ಮಕ್ಕಳ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ ಪರಿಸರ ಸರಿ ಇಲ್ಲದೆ ಇರುವುದು.
* ಪೋಷಕರ ಅನಕ್ಷರತೆ
* ಮಕ್ಕಳು ಕಲಿಕೆಯಲ್ಲಿ ಆಸಕ್ತಿ ತೋರದೆ ಇರುವುದು.

ಇತ್ಯಾದಿ ಕಾರಣಗಳಿಂದಾಗಿ ಈ ತೆರನಾಗಿ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

## ೫.೪. ಒತ್ತಕ್ಷರ/ಸಂಯುಕ್ತಾಕ್ಷರಗಳಲ್ಲಿ ಉಂಟಾಗುವ ಸಮಸ್ಯೆಗಳು

- **ಸಜಾತಿ ಒತ್ತಕ್ಷರಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು**

ಪದಮದ್ಯ ಪರಿಸರದಲ್ಲಿ ಬರುವ ಸಜಾತಿ ಒತ್ತಕ್ಷರಗಳನ್ನು ಲೋಪ ಮಾಡಿ ಓದುತ್ತಾರೆ. ಈ ತೆರನಾದ ವ್ಯತ್ಯಾಸವು ಎಲ್ಲ ತರಗತಿಯ ಕೆಲವು ಮಕ್ಕಳಲ್ಲಿಯೂ ಕಾಣಬಹುದಾಗಿದೆ.

- ಕ್ಕ > ಕ

ಪದಮದ್ಯ ಪರಿಸರದಲ್ಲಿ 'ಕ್ಕ' ಸಂಯುಕ್ತಾಕ್ಷರ ಧ್ವನಿ ಬದಲು 'ಕ' ಕಂಠ್ಯ ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾತ್ರ ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಅಕ್ಕ | ಅಕ |
| | ಕೊಕ್ಕರೆ | ಕೊಕರೆ |
| | ಹಕ್ಕಿ | ಅಕಿ |
| | ಅಕ್ಕಿ | ಅಕಿ |
| | ಸೊಕ್ಕು | ಸೊಕು |

- ಗ್ಗ > ಗ

ಪದಮದ್ಯ ಪರಿಸರದಲ್ಲಿ 'ಗ್ಗ' ಸಂಯುಕ್ತಾಕ್ಷರ ಧ್ವನಿ ಬದಲು 'ಗ' ಕಂಠ್ಯ ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ವ್ಯತ್ಯಾಸವನ್ನು ೫ ಮತ್ತು ೬ನೇ ತರಗತಿಯ ಮಕ್ಕಳು ಹೆಚ್ಚು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಅಗ್ಗ | ಅಗ |
| | ಒಗ್ಗಟ್ಟು | ಒಗಟು |
| | ಹಗ್ಗ | ಅಗ |
| | ಅಗ್ಗಳ | ಅಗಳ |
| | ಬಗ್ಗೆ | ಬಗೆ |
| | ಬಗ್ಗು ಬಡಿ | ಬಗುಬಡಿ |
| | ತಗ್ಗು | ತಗು |

• ಚ್ಚ > ಚ

ಪದಮಧ್ಯ ಪರಿಸರದಲ್ಲಿ 'ಚ್ಚ' ದ್ವಿತ್ವ ಧ್ವನಿ ಬದಲು 'ಚ' ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾತ್ರ ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಮೆಚ್ಚು | ಮೆಚು |
| | ಹೆಚ್ಚು | ಹೆಚು |
| | ಅಚ್ಚರಿ | ಅಚರಿ |
| | ನಿಚ್ಚಲ | ನಿಚಲ |
| | ಸಚ್ಚಿದಾನಂದ | ಸಚಿದಾನಂದ |

• ಜ್ಜ > ಜ

ಪದಮಧ್ಯ ಪರಿಸರದಲ್ಲಿ 'ಜ್ಜ' ದ್ವಿತ್ವ ಧ್ವನಿ ಬದಲು 'ಜ' ತಾಲವ್ಯ ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಅಜ್ಜಿ | ಅಜಿ |
| | ಗೆಜ್ಜೆ | ಗೆಜೆ |
| | ಗಜ್ಜರಿ | ಗಜರಿ |
| | ಅಜ್ಜ | ಅಜ |
| | ಕಜ್ಜಿ | ಕಜಿ |
| | ಲಜ್ಜೆ | ಲಜೆ |

• ದ್ದ > ದ

ಪದಮಧ್ಯ ಪರಿಸರದಲ್ಲಿ 'ಟ್ಟ' ದ್ವಿತ್ವ ಧ್ವನಿ ಬದಲು 'ಟ' ಮೂರ್ಧನ್ಯ ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ದಟ್ಟ | ದಟ |
| | ಅಟ್ಟ | ಅಟ |

| | | |
|---|---|---|
| | ಕಟ್ಟಿಗೆ | ಕಟಿಗೆ |
| | ಕಟ್ಟು | ಕಟು |
| | ತಟ್ಟನೆ | ತಟನೆ |
| | ಕುಟ್ಟು | ಕುಟು |
| | ಪಟ್ಟನೆ | ಪಟನೆ |

• ಡ್ಡ > ಡ

ಪದಮಧ್ಯ ಪರಿಸರದಲ್ಲಿ 'ಡ್ಡ' ದ್ವಿತ್ವ ಧ್ವನಿ ಬದಲು 'ಡ' ಮೂರ್ಧನ್ಯ ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಅಡ್ಡ | ಅಡ |
| | ಕಡ್ಡಿ | ಕಡಿ |
| | ಲಡ್ಡು | ಲಡು |
| | ಗೊಡ್ಡಿ | ಗೊಡಿ |
| | ದುಡ್ಡು | ದುಡು |
| | ಗಿಡ್ಡ | ಗಿಡ |
| | ಬಿಡ್ಡ | ಬಿಡ |

• ಣ್ಣ > ನ್ನ

ಪದಮಧ್ಯ ಪರಿಸರದಲ್ಲಿ 'ಣ್ಣ' ದ್ವಿತ್ವ ಧ್ವನಿ ಬದಲು 'ನ್ನ' ದಂತ್ಯ ಅನುನಾಸಿಕ ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಕಣ್ಣು | ಕನ್ನು |
| | ಅಣ್ಣ | ಅನ್ನ |
| | ತಣ್ಣಗೆ | ತನ್ನಗೆ |
| | ತಣ್ಣಗಾಗು | ತನ್ನಗಾಗು |
| | ಬಣ್ಣ | ಬನ್ನ |
| | ಹಣ್ಣು | ಅನ್ನು |

• ತ್ತ > ತ

ಪದಮಧ್ಯ ಪರಿಸರದಲ್ಲಿ 'ತ್ತ' ದ್ವಿತ್ವ ಧ್ವನಿ ಬದಲು 'ತ' ದಂತ್ಯ ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಕತ್ತೆ | ಕತೆ |
| | ಅತ್ತಿಗೆ | ಅತಿಗೆ |
| | ಹತ್ತು | ಅತು |
| | ಗುತ್ತಿಗೆ | ಗುತಿಗೆ |
| | ಕತ್ತರಿ | ಕತರಿ |
| | ಸುತ್ತಿಗೆ | ಸುತಿಗೆ |

• ದ್ದ > ದ

ಪದಮಧ್ಯ ಪರಿಸರದಲ್ಲಿ 'ದ್ದ' ದ್ವಿತ್ವ ಧ್ವನಿ ಬದಲು 'ದ' ದಂತ್ಯ ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಗದ್ದೆ | ಗದೆ |
| | ಉದ್ದ | ಉದ |
| | ಇದ್ದಲಿ | ಇದಲಿ |
| | ಪೆದ್ದ | ಪೆದ |
| | ಗುದ್ದಲಿ | ಗುದಲಿ |
| | ಮದ್ದು | ಮದು |

• ನ್ನ > ನ

ಪದಮಧ್ಯ ಪರಿಸರದಲ್ಲಿ 'ನ್ನ' ದ್ವಿತ್ವ ಧ್ವನಿ ಬದಲು 'ನ' ದಂತ್ಯ ಅನುನಾಸಿಕ ಧ್ವನಿಯನ್ನು ಓದುತ್ತಾರೆ. ಈ ಒಂದು ವ್ಯತ್ಯಾಸವನ್ನು ಬಹಳಷ್ಟು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ತನ್ನ | ತನ |
| | ಅನ್ನ | ಅನ |

| | |
|---|---|
| ಚೆನ್ನಾಗಿ | ಚೆನಾಗಿ |
| ಸನ್ನದು | ಸನದು |
| ಸನ್ನಿಧಿ | ಸನಿದಿ |

• ಪ್ಪ > ಪ

ಪದಮಧ್ಯ ಪರಿಸರದಲ್ಲಿ 'ಪ್ಪ' ದ್ವಿತ್ವಧ್ವನಿ ಬದಲು 'ಪ' ಉಭಯೋಷ್ಠ್ಯ ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಅಪ್ಪಟ | ಅಪಟ |
| | ದಪ್ಪ | ದಪ |
| | ಚಪ್ಪಲಿ | ಚಪಲಿ |
| | ಅಪ್ಪಣೆ | ಅಪನೆ |
| | ಉಪ್ಪು | ಉಪು |
| | ಕಪ್ಪು | ಕಪು |
| | ಹಪ್ಪಳ | ಅಪಳ |

• ಬ್ಬ > ಬ

ಪದಮಧ್ಯ ಪರಿಸರದಲ್ಲಿ 'ಬ್ಬ' ದ್ವಿತ್ವ ಧ್ವನಿ ಬದಲು 'ಬ' ಉಭಯೋಷ್ಠ್ಯ ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಹಬ್ಬ | ಹಬ |
| | ಗುಬ್ಬಿ | ಗುಬಿ |
| | ಗೊಬ್ಬರ | ಗೊಬರ |
| | ತಬ್ಬಲಿ | ತಬಲಿ |
| | ಕಬ್ಬು | ಕಬು |
| | ಒಬ್ಬ | ಒಬ |

• ವ್ವ > ವ

ಪದಮಧ್ಯ ಪರಿಸರದಲ್ಲಿ 'ವ್ವ' ದ್ವಿತ್ವ ಧ್ವನಿ ಬದಲು 'ವ' ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾತ್ರ ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಅವ್ವ | ಅವ |
| | ದೆವ್ವ | ದೆವ |
| | ಕವ್ವ | ಕವ |
| | ಓಬವ್ವ | ಒಬವ |

• ಲ್ಲ > ಲ

ಪದಮಧ್ಯ ಪರಿಸರದಲ್ಲಿ 'ಲ್ಲ' ಸಂಯುಕ್ತ ವ್ಯಂಜನದ ಬದಲು 'ಲ' ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಬೆಲ್ಲ | ಬೆಲ |
| | ಗೆಲ್ಲು | ಗೆಲು |
| | ಕಲ್ಲು | ಕಲು |
| | ಇಲ್ಲ | ಇಲ್ಲ |
| | ಹಲ್ಲಿ | ಹಲಿ |
| | ಪಲ್ಲವಿ | ಪಲವಿ |
| | ನಲ್ಲಿ | ನಲಿ |

## ▪ ವಿಜಾತಿ ಒತ್ತಕ್ಷರಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು

### • ಪೂರ್ಣ ಪ್ರಮಾಣದಲ್ಲಿ ಓದುವ ವಿಜಾತಿ ಒತ್ತಕ್ಷರಗಳು

ವಿಜಾತಿ ಒತ್ತಕ್ಷರಗಳು ಪದಾಂತ್ಯದಲ್ಲಿ ಬಂದಾಗ ಅಂತಹ ಒತ್ತಕ್ಷರವನ್ನು ಶಿಥಿಲಗೊಳಿಸಿ ಪೂರ್ಣ ಪ್ರಮಾಣದಲ್ಲಿ ಓದುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಎಲ್ಲಾ ತರಗತಿಯ ಮಕ್ಕಳಲ್ಲಿ ಕಂಡುಬರುತ್ತದೆ. ಅಂತಹ ಕೆಲ ಉದಾಹರಣೆಗಳನ್ನು ಈ ಕೆಳಗಿನಂತೆ ನೋಡಬಹುದು.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಲಗ್ನ | ಲಗನ |
| | ಮಗ್ನ | ಮಗನ |
| | ಖಡ್ಗ | ಕಡುಗ |
| | ಭಕ್ತ | ಬಕುತ |
| | ರಕ್ತ | ರಕುತ |
| | ಜನ್ಮ | ಜನುಮ |
| | ಆತ್ಮ | ಅತಮ |
| | ಪರ್ವ | ಪರುವ |
| | ಗರ್ವ | ಗರುವ |
| | ಪತ್ರ | ಪತರ |
| | ಮಿತ್ರ | ಮಿತರ |

• **ಮಹಾಪ್ರಾಣ ಒತ್ತಕ್ಷರದ ಬದಲು ಅಲ್ಪಪ್ರಾಣ ಒತ್ತಕ್ಷರ ಬಳಕೆ ಮಾಡುವ ವಿಜಾತಿ ಒತ್ತಕ್ಷರಗಳು**

ಪದಾದಿ ಹಾಗೂ ಪದಮದ್ಯ ಪರಿಸರದಲ್ಲಿ ಬರುವ ವಿಜಾತಿ ಮಹಾಪ್ರಾಣ ಒತ್ತಕ್ಷರದ ಬದಲಿಗೆ ಅಲ್ಪಪ್ರಾಣ ಒತ್ತಕ್ಷರ ಬಳಕೆ ಮಾಡಿ ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾತ್ರ ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಸ್ಥಳ | ಸ್ತಳ |
| | ಷಷ್ಠಿ | ಸಸ್ಟಿ |
| | ದೃಷ್ಟಿ | ದ್ರುಸ್ಟಿ |

• **ಲೋಪಮಾಡಿ ಬರೆಯುವ ವಿಜಾತಿ ಒತ್ತಕ್ಷರಗಳು**

ಪದಾದಿ, ಪದಮದ್ಯ ಹಾಗೂ ಪದಾಂತ್ಯದಲ್ಲಿ ಬರುವ ವಿಜಾತಿ ಒತ್ತಕ್ಷರಗಳನ್ನು ಲೋಪಮಾಡಿ ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಉಚ್ಚರಿಸುವ ರೂಪ |
|---|---|---|
| ಉದಾ | ಗಯ್ಯಲ್ | ಗಯಲ್ |
| | ಅಯ್ಯಾ | ಅಯ |

| | |
|---|---|
| ಶ್ರವಣ | ಸವಣ |
| ಧ್ರುವ | ದುವ |
| ಶ್ರಮ | ಶಮ |
| ಶ್ಲೋಕ | ಸೊಕ |
| ಶ್ಲೇಷ | ಸೇಸ |
| ಪ್ಲೇಗು | ಪೆಗು |
| ನ್ಯಾಯ | ನಾಯ |
| ಮುಖ್ಯ | ಮುಖ |
| ಧ್ವಜ | ದಜ |
| ಸಂಗ್ರಹ | ಸಗರಹ |

**ವಿಶ್ಲೇಷಣೆ**

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಮಕ್ಕಳು ಒತ್ತಕ್ಷರ ಓದುವಾಗ ಮಾಡುವ ಪ್ರಮುಖ ವ್ಯತ್ಯಾಸ ಅಥವಾ ಸಮಸ್ಯೆಗಳಿಗೆ ಕಾರಣಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

* ಒತ್ತಕ್ಷರಗಳ ಬಗ್ಗೆ ಸರಿಯಾಗಿ ಗ್ರಹಿಕೆಯಾಗದಿರುವುದು.
* ಮೂಲಾಕ್ಷರ ಹಾಗೂ ಒತ್ತಕ್ಷರಗಳ ಬಗ್ಗೆ ಸ್ಪಷ್ಟ ಪರಿಕಲ್ಪನೆ ಮಕ್ಕಳಿಗೆ ಸರಿಯಾಗಿ ಮೂಡಿಸದಿರುವುದು.
* ಬೋಧಕರು ಮಕ್ಕಳಿಗೆ ಒತ್ತಕ್ಷರಗಳನ್ನು ಸರಿಯಾಗಿ ಕಲಿಸದಿರುವುದು.
* ಸಜಾತಿ, ವಿಜಾತಿ ಹಾಗೂ ವಿಭಿನ್ನ ಒತ್ತಕ್ಷರಗಳ ಪರಿಕಲ್ಪನೆ ಹಾಗೂ ಬಳಕೆ ಬಗ್ಗೆ ಮಕ್ಕಳು ತಿಳಿಯದಿರುವುದು.
* ಮಕ್ಕಳಿಗೆ ಇರುವ ಅನಾರೋಗ್ಯ, ಅನಾಸಕ್ತಿ, ದೈಹಿಕ ಶ್ರಮದಿಂದಾಗಿ
* ಶಾಲೆ ಮತ್ತು ಮನೆಯಲ್ಲಿ ಮಕ್ಕಳ ಗೃಹಪಾಠವನ್ನು ಸರಿಯಾಗಿ ನೋಡದಿರುವುದು ಇತ್ಯಾದಿ ಕಾರಣಗಳಿಂದಾಗಿ ಈ ತೆರನಾದ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

ಇಂದಿನ ಪ್ರಪಂಚದಲ್ಲಿ ಓದುವಿಕೆಗೆ ಹೆಚ್ಚು ಮಹತ್ವವಿದೆ. ಇಂತಹ ಓದನ್ನು ಮಕ್ಕಳು ಕಲಿಯುವಾಗ ಹಲವಾರು ಉಚ್ಚಾರ ದೋಷಗಳನ್ನು ಮಾಡುತ್ತಾರೆ. ಇದಕ್ಕೆ ಕಾರಣ ಕಲಿಯುವ, ಕಲಿಸುವ ಕ್ರಿಯೆಗಳು ಸಮರ್ಪಕವಾಗಿಲ್ಲದಿರುವುದು, ತರಬೇತಿಯ ಕೊರತೆ, ಅಭ್ಯಾಸ ಚಟುವಟಿಕೆಗಳನ್ನು ನೀಡದಿರುವುದರಿಂದ ಬರಹದಲ್ಲಿ ಖಚಿತತೆ ಮತ್ತು ನಿಖರತೆ ಇಲ್ಲದಿರುವುದು, ತಪ್ಪುರೂಪಗಳನ್ನು ಬಳಸುವುದು, ತಪ್ಪುಗಳನ್ನು ತಿದ್ದದಿರುವುದು, ಆಡುನುಡಿ–ಗ್ರಾಂಥಿಕ ನುಡಿಗಳ ನಡುವಿನ ಅಂತರ ಮೊದಲಾದವುಗಳೇ ಆಗಿವೆ. ಶಿಕ್ಷಕರು ಮಕ್ಕಳ ಉಚ್ಚಾರ ದೋಷಗಳನ್ನು ಗುರುತಿಸಬೇಕು. ಕಾರಣಗಳನ್ನು

ಹುಡುಕಿ, ನಿವಾರಣೆಗೆ ಅಭ್ಯಾಸಗಳನ್ನು ಮಾಡಿಸಬೇಕು. ಶಿಕ್ಷಕನು ಚಿಂತನಶೀಲನಾದಾಗ ಇದು ಸಾಧ್ಯವಾಗುತ್ತವೆ. ಓದಿನ ದೋಷಗಳನ್ನು ಸಮಾಧಾನದಿಂದ, ಪ್ರೀತಿಯಿಂದ ಹಂತ ಹಂತವಾಗಿ ತಿದ್ದಬೇಕು. ಮಕ್ಕಳು, ಓದುವಾಗ, ಸ್ಪಷ್ಟವಾದ ಉಚ್ಚಾರ, ಸ್ವರಭಾರ ಹಿತಮಿತ ವೇಗ, ಲೇಖನ ಚಿಹ್ನೆಗಳಿಗೆ ಅನುಸಾರವಾಗಿ ಓದುವುದು, ಸಹಜ ಹಾಗೂ ದೋಷರಹಿತವಾದ ಓದನ್ನು ಗಮನಿಸಿ ಬಳಸಲು ಉತ್ತೇಜಿಸಬೇಕು. ಸಮಸ್ಯೆಗಳನ್ನು ಧ್ವನಿಶಾಸ್ತ್ರ–ವ್ಯಾಕರಣ ಶಾಸ್ತ್ರಗಳ ನೆರವಿನಿಂದ ಪರಿಹರಿಸಬೇಕು. ಕೆಲವು ಮಕ್ಕಳು ಹುಟ್ಟಿನಿಂದಲೇ ದೋಷಗಳನ್ನು ಹೊಂದಿದ್ದಾರೆ. ಮತ್ತೆ ಕೆಲವರು ಸುತ್ತಲ ಪರಿಸರದ ಪ್ರಭಾವದಿಂದ, ಭಯದಿಂದ, ಕೀಳರಿಮೆಯಿಂದ ತಪ್ಪಾಗಿ ಓದುತ್ತಾರೆ. ಕೆಲವರು ಬಹಳ ವೇಗವಾಗಿ, ಕೆಲವು ಗೊಣಗುಟ್ಟುವಂತೆ, ಇನ್ನು ಕೆಲವರು ಹೊಂದಿಸಿಕೊಂಡು ಓದುತ್ತಾರೆ. ಹಾಗಾಗಿ ಮಕ್ಕಳು ಉಪಾಧ್ಯಾಯರನ್ನು ಅನುಸರಿಸುವಂತೆ, ಶಿಕ್ಷಕರು ಓದುವ ಮಾದರಿಯಾಗಿರಬೇಕು. ಮಕ್ಕಳು ಏನನ್ನು ತಪ್ಪಾಗಿ ಓದುತ್ತಾರೆಂಬುದನ್ನು ಗಮನಿಸಿ ಸಕಾಲಿಕವಾದ, ಸೂಕ್ತವಾದ, ಅಭ್ಯಾಸ ಚಟುವಟಿಕೆಗಳನ್ನು ನೀಡಿದರೆ ಓದಿನ ದೋಷಗಳನ್ನು ತಿದ್ದಬಹುದು.

ಮಕ್ಕಳ ಓದಿನಲ್ಲಿ ಕಂಡುಬರುವ ಪ್ರಮುಖ ದೋಷಗಳನ್ನು ನೋಡಿದಾಗ, ಕನ್ನಡ ವರ್ಣಮಾಲೆಯ ಎಲ್ಲ ಅಕ್ಷರಗಳನ್ನು ಪರಿಚಯಿಸುತ್ತಲೆ ಅಕ್ಷರದ ಉಚ್ಚಾರ ರೀತಿ ಹಾಗೂ ಧ್ವನಿಯನ್ನು ಸ್ಪಷ್ಟವಾಗಿ ತಿಳಿಸಬೇಕು. ಅಲ್ಪಪ್ರಾಣ, ಮಹಾಪ್ರಾಣ, ಒತ್ತಕ್ಷರ, ಸಂಯುಕ್ತಾಕ್ಷರ, ಹ್ರಸ್ವ–ದೀರ್ಘಗಳ ಉಚ್ಚಾರಕ್ರಮವನ್ನು ತಿಳಿಸಬೇಕು.

ಸ, ಶ, ಷ ಮತ್ತು ಅ, ಹ ಮೊದಲಾದ ಅಕ್ಷರಗಳನ್ನು ಸ್ಪಷ್ಟವಾಗಿ ಮಾದರಿಯಾಗಿ ಶಿಕ್ಷಕರು ಪದೇ ಪದೇ ಉಚ್ಚರಿಸಿ ಮಕ್ಕಳಿಗೆ ಮನದಟ್ಟು ಮಾಡಿಸಬೇಕು. ಅದನ್ನು ಮಕ್ಕಳು ಅನುಸರಿಸಬೇಕು. ಯಾವ ಅಕ್ಷರದ ಉಚ್ಚಾರಣೆ ದೋಷಯುಕ್ತವಾಗಿರುತ್ತದೆಯೋ, ಯಾವ ಉಚ್ಚಾರ ಕಷ್ಟವಾಗುತ್ತದೆಯೋ ಅಂತಹ ಅಕ್ಷರದ ನಾಲಿಗೆ ಸುರುಳಿಗಳನ್ನು ಕೊಡಬೇಕು. ಉದಾ: 'ಷ' ಕಾರ ಉಚ್ಚಾರ ಬಾರದ ಮಗುವಿಗೆ 'ಕಲುಷಿತವಲ್ಲದ ಕಷಾಯವು ವಿಷವೆಂದೆನಿಸಿದರೂ, ವಿಷಮಶೀತ ಜ್ವರಕ್ಕೆ ಪೀಯೂಷವಾಗಿದೆ' ಎಂಬ ಸುರುಳಿಯನ್ನು ಉಚ್ಚರಿಸುವ ಅಭ್ಯಾಸ ಮಾಡಿಸಬೇಕು. 'ಹುರುಳಿ ಚೀಲ ಉರುಳಿ ಹೋಯಿತು', 'ಹಕ್ಕಿಗೆ ಅಕ್ಕಿಯ ಆಸೆ', 'ಅಲ್ಲಿ ಆ ಹಲ್ಲಿ ಬಂದಿತು', 'ಅಣ್ಣನಿಗೆ ಅನ್ನವೆಂದರೆ ಇಷ್ಟ', 'ಸುರರರಾಸು', 'ಕೆಂಪು ಕುಂಕುಮ ಕಪ್ಪು ಕುಂಕುಮ', 'ತರೀಕೆರೆ ಏರಿ ಮೇಲೆ ಮೂರು ಕರಿ ಕುರಿಮರಿ', 'ಸಂಪಂಗಪ್ಪನ ಮಗ ಮರಿಸಂಪಗಪ್ಪ' ಮೊದಲಾದ ಸುರುಳಿಗಳನ್ನು ದೋಷಕ್ಕೆ ತಕ್ಕಂತೆ ಮಕ್ಕಳಿಂದ ಉಚ್ಚರಿಸಬೇಕು. ದೋಷಗಳನ್ನು ತಿದ್ದುವುದು ನಿಧಾನವಾಗಿ ಸಾಗಬೇಕು. ಆತುರು–ಒತ್ತಾಯ ಸಲ್ಲದು. ಗಟ್ಟಿ ಧ್ವನಿಯಲ್ಲಿ ಸರಿಯಾಗಿ ಓದಲು ಕಲಿಸಬೇಕು. ಓದುತ್ತಾ ಆಲಿಸುವುದನ್ನು ಅಭ್ಯಾಸ ಮಾಡಿಸಬೇಕು.

ಶಾರೀರಿಕ ಹಾಗೂ ಧ್ವನ್ಯಂಗಗಳಿಗೆ ತೊಂದರೆ ಇದ್ದಾಗ ಅದನ್ನು ವೈದ್ಯರಿಗೆ ತೋರಿಸಿ ಚಿಕಿತ್ಸೆ ನೀಡಬೇಕು. ಓದುವ ಕೌಶಲ್ಯವನ್ನು ಚೆನ್ನಾಗಿ ಮಾಡಿಸಿ, ಓದುವ ಸಲುವಾಗಿ ಪುಸ್ತಕಗಳನ್ನು ಒದಗಿಸಬೇಕು. ಸ್ವತಂತ್ರ್ಯವಾಗಿ ಪಠ್ಯೇತರ ಪುಸ್ತಕಗಳನ್ನು ಓದಲು ಅವಕಾಶ ನೀಡಬೇಕು. ಉತ್ತಮ ಪರಿಸರದಲ್ಲಿ ಉತ್ತಮವಾದ ಮಾತುಗಳನ್ನು ಆಲಿಸಲು ಅವಕಾಶ ಕಲ್ಪಿಸುವುದು, ಪರಭಾಷಾ ಪದಗಳನ್ನು ಸರಿಯಾಗಿ ಪರಿಚಯಿಸಿ, ಉಚ್ಚಾರ ಕ್ರಮ ತಿಳಿಸಿ ಕನ್ನಡದೊಡನೆ ಬಳಸುವುದನ್ನು ಕಲಿಸಬೇಕು.

ಅಧ್ಯಾಯ ೬

## ಬರಹ ಕಲಿಕೆಯ ಸಮಸ್ಯೆಯ ಸ್ವರೂಪ

ಬರವಣಿಗೆಯು ಭಾಷಾ ಕೌಶಲಗಳಲ್ಲಿ ನಾಲ್ಕುನೆಯದಾಗಿದ್ದು. ಭಾಷೆಯಲ್ಲಿ ಆಲಿಸುವುದು, ಮಾತನಾಡುವುದು, ನೋಡಿ ಗುರುತಿಸುವ ಸಾಮಾರ್ಥ್ಯವನ್ನಾಧಾರಿಸಿ ಓದುವುದನ್ನು ಕಲಿಯುವುದು ಎಷ್ಟು ಮಹತ್ವವೋ, ಹಾಗೆಯೆ ಬರವಣಿಗೆಯನ್ನು ಕಲಿಯುವುದು ಅಷ್ಟೇ ಮಹತ್ವವೆನಿಸುತ್ತದೆ. ಏಕೆಂದರೆ ಬರವಣಿಗೆಯು ಒಂದು ಸಂಪರ್ಕ ಸಾಧನವಾಗಿದೆ. ಪ್ರಾಚೀನ ಕಾಲದಿಂದಲೂ ವ್ಯವಹಾರದಲ್ಲಿ ಮಾತಿಗೆ ಹೆಚ್ಚು ಮಹತ್ವವಿದ್ದು, ಕಾಲನಂತರದಲ್ಲಿ ಮಾತಿನ ಮಹತ್ವ ಕಡಿಮೆಯಾಗಿ ಬರವಣಿಗೆಯು ಹೆಚ್ಚಿನ ಮಹತ್ವವನ್ನು ಪಡೆದಿದೆ. ಅಲ್ಲದೆ ಇಂದು ಎಲ್ಲಾ ಕ್ಷೇತ್ರಗಳ ವ್ಯವಹಾರದಲ್ಲಿ ಲಿಖಿತ ದಾಖಲಾತಿ ಅವಶ್ಯವಾಗಿವೆ. ಇಂತಹ ಬರವಣಿಗೆಯನ್ನು ಮಕ್ಕಳಿಗೆ ಕಲಿಸುವಾಗ ಸ್ಪಷ್ಟವಾಗಿ ತಪ್ಪಿಲ್ಲದಂತೆ ಹಾಗೂ ಅಂದವಾಗಿ ಬರೆಯುವಂತೆ ಮಾಡುವುದು ಶಿಕ್ಷಕನ ಕರ್ತವ್ಯವಾಗಿದೆ.

ಬರಹ ನಾಗರೀಕತೆಯ ಪ್ರತಿಬಿಂಬವಾದ್ದರಿಂದ ಭಾಷಾ ಕೌಶಲಗಳಲ್ಲಿ ಬರವಣಿಗೆಗೆ ಹೆಚ್ಚು ಮಹತ್ವವಿದೆ. ಉತ್ತಮವಾಗಿ ಬರೆಯುವ ವ್ಯಕ್ತಿಗೆ ನಾಡಿನಲ್ಲಿ ಗೌರವವಿದೆ. ಬರೆದ ಬರಹ ದುಂಡಾಗಿ, ಅಂದವಾಗಿ, ಕಣ್ಣನ್ನು ಆಕರ್ಷಿಸುವಂತೆ, ಮನಸ್ಸು ಒಪ್ಪುವಂತಿದ್ದರೆ ಅಂತಹ ಬರಹವನ್ನು ಎಲ್ಲಾರು ಒಪ್ಪುತ್ತಾರೆ. ಶಿಕ್ಷಕರು ಮಕ್ಕಳಿಗೆ ಇಂತಹ ಬರಹವನ್ನು ಕಲಿಸುವ ಕಡೆಗೆ ಹೆಚ್ಚು ಗಮನಹರಿಸಬೇಕು. ಏಕೆಂದರೆ ಬರಹವು ಮಕ್ಕಳಲ್ಲಿ ಹೆಚ್ಚು ಜ್ಞಾಪಕಶಕ್ತಿಯನ್ನು ವೃದ್ಧಿಸುತ್ತದೆ. ಅಲ್ಲದೆ ಮನಸ್ಥೈರ್ಯ, ವಿವೇಚನಾ ಕ್ರಮ, ಜಾಗುರೂಕತೆ, ತಾಳ್ಮೆಯನ್ನು ಪೋಷಿಸುತ್ತದೆ. ಅನೇಕ ವಿದ್ಯಮಾನಗಳನ್ನು, ವಿಚಾರಗಳನ್ನು ಮುಂದಿನ ಜನಾಂಗಕ್ಕೆ ವರ್ಗಾಯಿಸಲು ಬರವಣಿಗೆಯೊಂದೆ ಸಾಧನ.

**ಬರವಣಿಗೆಯ ಅರ್ಥ:**

ಬರವಣಿಗೆಯು ಓದುವುದಕ್ಕಿಂತಲು ಕಠಿಣವಾಗಿದ್ದು, ಬರವಣಿಗೆಯ ಸಮಯದಲ್ಲಿ ಕಣ್ಣು, ಮನಸ್ಸು, ಸ್ನಾಯುಗಳು ಸಾಂಗೋಪಾಂಗವಾಗಿ ಪಾಲ್ಗೊಂಡರೆ ಮಾತ್ರ ಬರವಣಿಗೆ ಉತ್ತಮವಾಗುತ್ತದೆ. ಇಲ್ಲದಿದ್ದರೆ ಬರವಣಿಗೆಯು ಉತ್ತಮವಾಗಲಾರದು. ಬರೆಯುವುದೆಂದರೆ ನಾವು ಆಡುವ ಭಾಷೆಯ ಧ್ವನಿ ಸಂಕೇತಗಳಿಗೆ ಮೂರ್ಥರೂಪ ಕೊಡುವುದಾಗಿದೆ. 'ಬರವಣಿಗೆ ಎಂದರೆ ನಮಗೆ ತಿಳಿದಿದ್ದನ್ನು ಹಾಗೂ ಇನ್ನೊಬ್ಬರು ಹೇಳಿದ್ದನ್ನು ಗೊತ್ತಾದ ಲಿಪಿಯನ್ನು ಬಳಸಿಕೊಂಡು ಬೆರಳುಗಳ ಮೂಲಕ ವ್ಯಕ್ತಪಡಿಸುವುದಾಗಿದೆ'. ಬಾಯಿಂದ ಅಕ್ಷರಗಳು ಉಚ್ಚಾರಣೆಯಾದರೆ ಅದು ಓದುವುದಾಗುತ್ತದೆ, ಕೈಸ್ನಾಯುಗಳ ಬಲದಿಂದ ಅಕ್ಷರಗಳು ಉಚ್ಚಾರಣೆಯಾದುದ್ದನ್ನು ಬರವಣಿಗೆ ಎನ್ನುವರು. ಈಗ ಹಿಂದೆ ಇದ್ದ ಬರವಣಿಗೆ ಸಾಧನಗಳು (ಕಡ್ಡಿ, ಬಳಪ, ಸೀಸದಕಡ್ಡಿ, ನವಿಲು ಗರಿ, ಲೇಖನಿ, ಪೆನ್ನು ಇತ್ಯಾದಿ) ಹಾಗೂ ರೀತಿ ನೀತಿಗಳಲ್ಲಿ ಸಾಕಷ್ಟು ವ್ಯತ್ಯಾಸಗಳು ಕಂಡು ಬಂದಿವೆ. ಉದಾ: ಗಣಕಯಂತ್ರದಲ್ಲಿನ ಕೈ ಬರಹ.

**ಅಧ್ಯಾಯದ ವಿಶ್ಲೇಷಣೆ:**

ಈ ಅಧ್ಯಾಯದಲ್ಲಿ ಕನ್ನಡ ಭಾಷಿಕ ಪರಿಸರದಲ್ಲಿ ಬೆಳೆದ, ಕನ್ನಡ ಮನೆಮಾತಾಗಿರುವ ಮಕ್ಕಳು ಕನ್ನಡವನ್ನು ಬರೆಯುವಾಗ ಪದಾದಿ, ಪದಮಧ್ಯ, ಪದಾಂತ್ಯ ಪರಿಸರದಲ್ಲಿ ಯಾವ ತರಹದ ಸಮಸ್ಯೆಗಳನ್ನು ಹಾಗೂ ವ್ಯತ್ಯಾಸಗಳನ್ನು ಮಾಡುತ್ತಾರೆ ಎಂಬುದನ್ನು ಕುರಿತು ವಿಶ್ಲೇಷಿಸಲಾಗಿದೆ. ಕನ್ನಡ ಮನೆಮಾತಾಗಿರುವ ಮಕ್ಕಳು ಕನ್ನಡವನ್ನು ಬರೆಯುವಾಗ ಕಂಡು ಬರುವ ಸಮಸ್ಯೆಗಳು ಅಥವಾ ವ್ಯತ್ಯಾಸಗಳಿಗೆ ಕಾರಣಗಳು ಮತ್ತು ಅವುಗಳನ್ನು ಸರಿಪಡಿಸುವ ಕುರಿತು ತೆಗೆದುಕೊಳ್ಳಬಹುದಾದ ಕ್ರಮದ ಬಗ್ಗೆ ಹೇಳಲಾಗಿದೆ.

ಕನ್ನಡ ಮನೆಮಾತಾಗಿರುವ ಮಕ್ಕಳು ಬರೆಯುವಾಗ ಯಾವ ತರಹದ ಸಮಸ್ಯೆಗಳನ್ನು ಎದುರಿಸುತ್ತಾರೆ. ಅಥವಾ ವ್ಯತ್ಯಾಸಗಳನ್ನು ಮಾಡುತ್ತಾರೆ ಎಂಬುದನ್ನು ಕಂಡು ಹಿಡಿಯಲು ಮೊದಲನೆಯದಾಗಿ ೫, ೬ ಮತ್ತು ೭ನೇ ತರಗತಿಯ ಪಠ್ಯಪುಸ್ತಕಗಳಿಂದ ಅಕಾರಾದಿಯಾಗಿ ರಚಿಸಿದ ಪದಗಳ ಪಟ್ಟಿಯಲ್ಲಿನ ಪದಗಳನ್ನು ಹಾಗೂ ಅವರ ಪಠ್ಯಪುಸ್ತಕಗಳಲ್ಲಿನ ಪಾಠಗಳನ್ನು ಮೌಖಿಕವಾಗಿ ಹೇಳಿ ಬರೆಯಿಸಲಾಗಿದೆ. ನಂತರ ಸರ್ವಶಿಕ್ಷಣ ಅಭಿಯಾನದ ಅಡಿಯಲ್ಲಿ ಜಾರಿಯಾಗಿರುವ "ಬರೆಯುವೆ ನಾನು" ಕಾರ್ಡ್‌ಗಳನ್ನು ಮೌಖಿಕವಾಗಿ ಹೇಳಿ ಬರೆಯಿಸಲಾಗಿದೆ. ಅಲ್ಲದೆ ಎರಡನೆಯದಾಗಿ ಮಕ್ಕಳು ಆಯಾ ತರಗತಿಯ ವಾರ್ಷಿಕ ಪರೀಕ್ಷೆಯ ಉತ್ತರ ಪತ್ರಿಕೆಗಳನ್ನು ತೆಗೆದುಕೊಂಡು ಅವರು ಬರೆದ ಪದ ಮತ್ತು ವಾಕ್ಯಗಳನ್ನು ಪರಿಶೀಲಿಸಲಾಗಿದೆ. ಹೀಗೆ ಬರಹ ರೂಪದ ಪದಗಳಿಗೆ ಮಕ್ಕಳು ಯಾವ ರೀತಿಯಾಗಿ ವ್ಯತ್ಯಾಸ ಮಾಡಿದ್ದಾರೆ ಎಂಬುದನ್ನು ತಿಳಿಸಿ,

ಅದಕ್ಕೆ ಕಾರಣಗಳನ್ನು ಹುಡುಕಿ ವಿಶ್ಲೇಷಿಸಲಾಗಿದೆ. ಮಕ್ಕಳ ಬರವಣಿಗೆಯಲ್ಲಿ ಕಂಡುಬರುವ ಪ್ರಮುಖ ಸಮಸ್ಯೆಗಳನ್ನು ಈ ಕೆಳಗಿನಂತೆ ವಿಂಗಡನೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

೬.೧. ಸ್ವರಗಳನ್ನು ಬರೆಯುವಾಗ ಉಂಟಾಗುವ ಸಮಸ್ಯೆಗಳು.

೬.೨. ವ್ಯಂಜನಗಳನ್ನು ಬರೆಯುವಾಗ ಉಂಟಾಗುವ ಸಮಸ್ಯೆಗಳು.

೬.೩. ಗುಣಿತಾಕ್ಷರಗಳನ್ನು ಬರೆಯುವಾಗ ಉಂಟಾಗುವ ಸಮಸ್ಯೆಗಳು.

೬.೪. ಒತ್ತಕ್ಷರಗಳನ್ನು ಬರೆಯುವಾಗ ಉಂಟಾಗುವ ಸಮಸ್ಯೆಗಳು.

**೬.೧. ಸ್ವರಗಳನ್ನು ಬರೆಯುವಾಗ ಉಂಟಾಗುವ ಸಮಸ್ಯೆಗಳು.**

ಮಕ್ಕಳು ಸ್ವರಗಳನ್ನು ಬರೆಯುವಾಗ ಪದಾದಿ, ಪದಮದ್ಯ ಹಾಗೂ ಪದಾಂತ್ಯದಲ್ಲಿ ಹಲವು ತೆರನಾದ ಸಮಸ್ಯೆಗಳನ್ನು ಮಾಡುತ್ತಾರೆ. ಅಂತಹ ಸಮಸ್ಯೆಗಳಲ್ಲಿ ಪ್ರಮುಖವಾಗಿ ದೀರ್ಘಸ್ವರಗಳಿಗೆ ಹ್ರಸ್ವಸ್ವರಗಳನ್ನು ಬಳಕೆ ಮಾಡಿ ಬರೆಯುವುದು ಕಂಡುಬರುತ್ತದೆ. ಕೆಲ ಸ್ವರಗಳಿಗೆ ವ್ಯಂಜ್ಯನಗಳನ್ನು ಬಳಕೆ ಮಾಡಿ ಬರೆಯುವುದು, ಅನುಸ್ವರ ಹಾಗೂ ವಿಸರ್ಗಗಳನ್ನು ಲೋಪಮಾಡುವುದು ಹಾಗೂ ಸಂಧ್ಯಕ್ಷರಗಳ ಬಳಕೆಯಲ್ಲಿಯೂ ಹಲವಾರು ಸಮಸ್ಯೆಗಳನ್ನು ಮಾಡುತ್ತವೆ. ಅಂತಹ ಸಮಸ್ಯೆಗಳನ್ನು ಕ್ರಮವಾಗಿ ಈ ಕೆಳಗಿನಂತೆ ಗುರುತಿಸಲಾಗಿದೆ.

- **ದೀರ್ಘ ಸ್ವರಗಳಿಗೆ ಹ್ರಸ್ವಸ್ವರಗಳನ್ನು ಬಳಕೆಮಾಡಿ ಬರೆಯುತ್ತಾರೆ.**

ಮಕ್ಕಳು ಪದಾದಿ ಪದಮದ್ಯ ಹಾಗೂ ಪದಾಂತ್ಯ ಪರಿಸರದಲ್ಲಿ ಬರುವ ದೀರ್ಘ ಸ್ವರಗಳಿಗೆ ಹ್ರಸ್ವಸ್ವರಗಳನ್ನು ಬಳಕೆ ಮಾಡಿ ಬರೆಯುತ್ತಾರೆ. ಅಂತಹ ಕೆಲವು ವ್ಯತ್ಯಾಸಗಳನ್ನು ಈ ಕೆಳಗಿನಂತೆ ಗುರುತಿಸಬಹುದು. ಉದಾಹರಣೆಗೆ

- **ಪದಾದಿ ಪರಿಸರ:**

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಆ>ಅ | ಆಟ | ಅಟ |
| | ಆಗಸ | ಅಗಸ |
| | ಆಳ | ಅಳ |
| | ಆಗಮನ | ಅಗಮನ |
| | ಆವರಣ | ಅವರಣ |
| | ಆಲಯ | ಅಲಯ |

| | | |
|---|---|---|
| ಈ>ಇ | ಈಶ | ಇಶ |
| | ಈಗ | ಇಗ |
| | ಈಚಲ | ಇಚಲ |
| | ಈಜು | ಇಜು |
| ಊ>ಉ | ಊಟ | ಉಟ |
| | ಊರು | ಉರು |
| | ಊರಜನ | ಉರಜನ |
| | ಊನ | ಉನ |
| | ಊತ | ಉತ |
| ಏ>ಎ | ಏತ | ಎತ |
| | ಏಳು | ಎಳು |
| | ಏನು | ಎನು |
| | ಏರು | ಎರು |
| | ಏಕೆ | ಎಕೆ |
| | ಏಕದಳ | ಎಕದಳ |
| ಓ>ಒ | ಓಟ | ಒಟ |
| | ಓಲಗ | ಒಲಗ |
| | ಓಜ | ಒಜ |
| | ಓರಣ | ಒರಣ |
| | ಓಲೆ | ಒಲೆ |
| | ಓದುವುದು | ಒದುವುದು |
| | ಓಡು | ಒಡು |

• ಪದಮಧ್ಯ ಪರಿಸರ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಆ>ಅ | ಒತ್ತಾಯ | ಒತಯ |
| | ತಪಾಸಣೆ | ತಪಸನೆ |

| | | |
|---|---|---|
| | ಫಲಹಾರ | ಪಲಹರ |
| | ದೇವಾಲಯ | ದೇವಲಯ |
| | ಅನುರೂಪ | ಅನುರುಪ |
| | ಅನುಸಾರ | ಅನುಸರ |
| ಈ>ಇ | ತೀರ | ತಿರ |
| | ಚೀಲ | ಚಿಲ |
| | ಮೀರಾ | ಮಿರ |
| | ಜೀವ | ಜಿವ |
| | ನೀರು | ನಿರು |
| | ಕೀಟ | ಕಿಟ |
| ಊ>ಉ | ಮೂರು | ಮುರು |
| | ಕೂಟ | ಕುಟ |
| | ಗೂಡು | ಗುಡು |
| | ನಿಗೂಢ | ನಿಗುಡ |
| | ಸಮೂಹ | ಸಮುಹ |
| ಏ>ಎ | ಕೇರಿ | ಕೆರಿ |
| | ಬೇಳೆ | ಬೆಳೆ |
| | ಕೇಡು | ಕೆಡು |
| | ತೇರು | ತೆರು |
| | ಮೇಕೆ | ಮೆಕೆ |
| | ಸೇಬು | ಸೆಬು |
| ಓ>ಒ | ಕೋತಿ | ಕೊತಿ |
| | ಕೋಗಿಲೆ | ಕೊಗಿಲೆ |
| | ತೋಟ | ತೊಟ |
| | ಗೋಲಿ | ಗೊಲಿ |
| | ಭೋಜನ | ಬೊಜನ |

• ಪದಾಂತ್ಯ ಪರಿಸರ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಆ>ಅ | ತುಂಬಾ | ತುಬ |
| | ಮಾಲಾ | ಮಲ |
| | ಶಾಲಾ | ಶಲ |
| | ಜಟಕಾ | ಜಟಕ |
| ಈ>ಇ | ಫೀ | ಪಿ |
| | ಕರೀ | ಕರಿ |
| | ಮೀ | ಮಿ |
| ಊ>ಉ | ಹಾಗೂ | ಹಾಗು |
| | ಜಂಬೂ | ಜಬು |
| | ಎಂದೂ | ಎಂದು |
| | ಹಿಂದೂ | ಹಿದು |

**ವಿಶ್ಲೇಷಣೆ**

ಮಕ್ಕಳು ಪದಾದಿ, ಪದಮದ್ಯ ಹಾಗೂ ಪದಾಂತ್ಯ ಪರಿಸರದಲ್ಲಿ ಬರುವ ದೀರ್ಘ ಸ್ವರಗಳಿಗೆ ಹ್ರಸ್ವಸ್ವರಗಳನ್ನು ಬಳಕೆ ಮಾಡಿ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸಕ್ಕೆ ಕಾರಣಗಳೆಂದರೆ;

* ಆಡುಮಾತಿನಲ್ಲಿ ದೀರ್ಘಸ್ವರಗಳ ಬಳಕೆ ಕಡಿಮೆಯಾಗಿರುವುದು.
* ಸ್ವರಗಳ ಉಚ್ಚಾರಣೆಯಲ್ಲಿನ ಅಲ್ಪಧ್ವನಿ ಸಾಮ್ಯತೆಯನ್ನು ಗಮನಿಸದಿರುವುದು.
* ಸ್ವರಗಳಲ್ಲಿನ ರೂಪ ಸಾಮ್ಯತೆ.
* ಶಿಕ್ಷಕನಲ್ಲಿನ ಉಚ್ಚಾರಣ ದೋಷ
* ವಿದ್ಯಾರ್ಥಿಗಳಲ್ಲಿನ ಆಲಿಸುವಿಕೆಯ ದೋಷ
* ಮಕ್ಕಳಿಗೆ ಹ್ರಸ್ವಸ್ವರ ಹಾಗೂ ದೀರ್ಘ ಸ್ವರಗಳ ಬಗ್ಗೆ ಸ್ಪಷ್ಟ ಪರಿಕಲ್ಪನೆ ಮೂಡಿಸದಿರುವುದು.

ಇತ್ಯಾದಿ ಕಾರಣಗಳಿಂದ ಈ ತೆರನಾದ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

▪ ಪದಾದಿ ಪರಿಸರದಲ್ಲಿ ಹ್ರಸ್ವಸ್ವರ 'ಒ' ಧ್ವನಿಯ ಬದಲು ಹ್ರಸ್ವಸ್ವರ 'ಅ' ಧ್ವನಿಯನ್ನು ಬರೆಯುತ್ತಾರೆ. ಈ ರೀತಿಯ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಒ>ಅ | ಮೊಲ | ಮಲ |
| | ಮೊಸಳೆ | ಮಸಳೆ |
| | ಮೋಡ | ಮಾಡ |
| | ಮೊನ್ನೆ | ಮನ್ನೆ |

**ವಿಶ್ಲೇಷಣೆ:**

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಈ ಧ್ವನಿಗಳ ವ್ಯತ್ಯಾಸಕ್ಕೆ ಕಾರಣವನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದು. ಬಳ್ಳಾರಿ ಜಿಲ್ಲೆಯ ವ್ಯವಹಾರಿಕ ಕನ್ನಡದಲ್ಲಿ ತೆಲುಗು ಭಾಷೆಯ ಪ್ರಭಾವ ಇರುವುದರಿಂದ ಮಕ್ಕಳು ಈ ರೀತಿಯ ವ್ಯತ್ಯಾಸ ಮಾಡಿ ಬರೆಯುತ್ತಾರೆ ಎನ್ನಲಾಗಿದೆ.

- ಪದಾದಿ ಪರಿಸರದಲ್ಲಿ ಹ್ರಸ್ವಸ್ವರ 'ಅ' ಧ್ವನಿಯ ಬದಲು ಹ್ರಸ್ವಸ್ವರ 'ಒ' ಧ್ವನಿಯನ್ನು ಬರೆಯುತ್ತಾರೆ. ಈ ರೀತಿಯ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಅ>ಒ | ಕಲ್ಲು | ಕೊಲ್ಲು |
| | ಕಣ್ಣು | ಕೊಣ್ಣು |
| | ಕಪ್ಪೆ | ಕೊಪ್ಪೆ |
| | ಕಬ್ಬು | ಕೊಬ್ಬು |
| | ಕತ್ತಿ | ಕೊತ್ತಿ |

**ವಿಶ್ಲೇಷಣೆ:**

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಈ ಧ್ವನಿಗಳ ವ್ಯತ್ಯಾಸಕ್ಕೆ ಕಾರಣವನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದು. ಬಳ್ಳಾರಿ ಜಿಲ್ಲೆಯ ವ್ಯವಹಾರಿಕ ಕನ್ನಡದಲ್ಲಿ ತೆಲುಗು ಭಾಷೆಯ ಪ್ರಭಾವ ಇರುವುದರಿಂದ ಮಕ್ಕಳು ಈ ರೀತಿಯ ವ್ಯತ್ಯಾಸ ಮಾಡಿ ಬರೆದಿರಬಹುದು ಎನ್ನಲಾಗಿದೆ.

- **ಸ್ವರಗಳಿಗೆ ಬದಲಾಗಿ ವ್ಯಂಜನಗಳನ್ನು ಬಳಕೆ ಮಾಡಿ ಬರೆಯುತ್ತಾರೆ.**

ಪದಾದಿ ಪರಿಸರದಲ್ಲಿ 'ಆ, ಈ, ಋ' ಸ್ವರಗಳಿಗೆ ಬದಲಾಗಿ 'ಹಾ, ಹಿ, ರು', ವ್ಯಂಜನ ಧ್ವನಿಗಳನ್ನು ಬಳಕೆ ಮಾಡಿ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವನ್ನು ತರಗತಿಯ ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಆ>ಹಾ | ಆಲ | ಹಾಲ |
| | ಆಸೆ | ಹಾಸೆ |
| | ಆಳು | ಹಾಳು |
| | ಆಕರ | ಹಾಕರ |
| | ಆಚರಿಸು | ಹಾಚರಿಸು |
| ಈ>ಹಿ | ಈಟಿ | ಹಿಟಿ |
| | ಈಗ | ಹಿಗ |
| | ಈಶ್ವರ | ಹಿಶವರ |
| | ಈಜು | ಹಿಜು |
| | ಈಡೇರು | ಹಿಡೇರು |
| ಋ>ರು | ಋಣ | ರುಣ |
| | ಋತು | ರುತು |
| | ಋಜು | ರುಜು |
| | ಋಜುವಾತು | ರುಜುವಾತ |

## ವಿಶ್ಲೇಷಣೆ

ಮಕ್ಕಳು ಪದಾದಿ, ಪದಮದ್ಯ ಮತ್ತು ಪದಾಂತ್ಯ ಪರಿಸರದಲ್ಲಿ ಕೆಲವು ಸ್ವರಗಳಿಗೆ ವ್ಯಂಜನಗಳನ್ನು ಬಳಕೆ ಮಾಡಿ ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸ ಮಾಡಿ ಬರೆಯುವುದನ್ನು ತಪ್ಪು ಎನ್ನುವುದಕ್ಕಿಂತ ಅದು ಕನ್ನಡ ಭಾಷೆಯ ಸಹಜ ರೂಪವೆನ್ನಬಹುದು. ಏಕೆಂದರೆ ವಿಶೇಷ ವಲಯವಾದ ಶಿಕ್ಷಣ ಕ್ಷೇತ್ರವನ್ನು ಬಿಟ್ಟು ಉಳಿದ ಕಡೆಯಲ್ಲಿ ಇವುಗಳ ಬಳಕೆ ಕಡಿಮೆ. ಕನ್ನಡದ ಜಾಯಮಾನ, ಆಡು ನುಡಿಯ ಪ್ರಭಾವ, ಉಚ್ಚಾರಣೆಯ ರೀತಿ ನೀತಿಯಿಂದಾಗಿ ಅವುಗಳ ವಿಕಲ್ಪ ರೂಪಗಳನ್ನು ಬಳಕೆ ಮಾಡಿ ಬರೆಯುವುದು ಕಂಡುಬರುತ್ತದೆ. ಅಲ್ಲದೆ 'ಆ' ಸ್ವರಧ್ವನಿಗೆ ಬದಲಾಗಿ 'ಹಾ' ವ್ಯಂಜನವನ್ನು ಬಳಕೆ ಮಾಡಿ ಬರೆಯುವುದಕ್ಕೆ ಕಾರಣ ಈ ಎರಡು ಧ್ವನಿಗಳಲ್ಲಿನ ಉಚ್ಚಾರಣೆಯ ಭಿನ್ನತೆಯನ್ನು ಗಮನಿಸದಿರುವುದು ಹಾಗೂ ಅತಿ ವ್ಯಾಪ್ತಿಯಿಂದ ಈ ತೆರನಾಗಿ ವ್ಯತ್ಯಾಸ ಮಾಡಿ ಬರೆದಿರಬಹುದು ಎನ್ನಲಾಗಿದೆ.

ಇನ್ನು 'ಈ', 'ಋ' ಸ್ವರಗಳ ಬದಲಾಗಿ ವ್ಯಂಜನ ಧ್ವನಿ 'ಹಿ', 'ರು'ಗಳನ್ನು ಬಳಕೆ ಮಾಡಿ ಬರೆಯುವುದನ್ನು ಗಮನಿಸಿದಾಗ ಈ ಧ್ವನಿಗಳಲ್ಲಿನ ಉಚ್ಚಾರಣಾ ಭಿನ್ನತೆಯನ್ನು ಗಮನಿಸದಿರುವುದು

ಹಾಗೂ 'ಈ', 'ಋ' ಗಳ ಬಳಕೆ ಕನ್ನಡದಲ್ಲಿ ಕಡಿಮೆಯಿರುವುದರಿಂದ ಈ ತೆರನಾಗಿ ವ್ಯತ್ಯಾಸ ಮಾಡಿ ಬರೆದಿರಬಹುದು ಎನ್ನಲಾಗಿದೆ.

- **ಅನುಸ್ವರ ಹಾಗೂ ವಿಸರ್ಗಗಳನ್ನು ಲೋಪ ಮಾಡಿ ಬರೆಯುತ್ತಾರೆ**

ಪದಮಧ್ಯ ಪರಿಸರದಲ್ಲಿ ಬರುವ ಅನುಸ್ವರ (ಂ) ಹಾಗೂ ವಿಸರ್ಗ (ಃ)ಗಳನ್ನು ಲೋಪಮಾಡಿ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಅಂಕ | ಅಕ |
| | ಅಂಗ | ಅಗ |
| | ಕಂಪನ | ಕಪನ |
| | ಮಂಚ | ಮಚ |
| | ಮಂದ | ಮದ |
| | ಬಂದ | ಬದ |
| | ಅಂತ | ಅತ |
| | ದುಃಖ | ದುಕ |
| | ಅಂತಃಪುರ | ಅತಪುರ |
| | ಅಂತಃಕಲಹ | ಅತಕಲಹ |
| | ಅಂತಃಕರಣ | ಅತಕರಣ |

**ವಿಶ್ಲೇಷಣೆ**

ಪದಮಧ್ಯ ಪರಿಸರದಲ್ಲಿನ ಅನುಸ್ವರ ಮತ್ತು ವಿಸರ್ಗಗಳನ್ನು ಲೋಪ ಮಾಡಿ ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸ ಮಾಡಿ ಬರೆಯಲು ಅನುಸ್ವರ ಮತ್ತು ವಿಸರ್ಗಗಳ ಉಚ್ಚಾರಣೆಯ ಬಗ್ಗೆ ಸ್ಪಷ್ಟವಾಗಿ ತಿಳಿಸದಿರುವುದು, ವಿಸರ್ಗದ ಬಳಕೆ ಕನ್ನಡದಲ್ಲಿ ಇಲ್ಲದಿರುವುದು, ಅನ್ಯ ಭಾಷಾ ಶಬ್ದಗಳ ಬಳಕೆಯಿಂದಾಗಿ ಈ ತೆರನಾಗಿ ವ್ಯತ್ಯಾಸ ಮಾಡಿ ಬರೆದಿರಬಹುದು ಎನ್ನಲಾಗಿದೆ.

- **ಸಂಧ್ಯಕ್ಷರಗಳನ್ನು ಬರೆಯುವಾಗ ಉಂಟಾಗುವ ಸಮಸ್ಯೆಗಳು**

ಸಂಧ್ಯಕ್ಷರಗಳಾದ 'ಐ', 'ಔ' ಗಳನ್ನು ಪದಾದಿ, ಪದಮಧ್ಯ ಹಾಗೂ ಪದಾಂತ್ಯ ಪರಿಸರದಲ್ಲಿ 'ಐ' ಹಾಗೂ 'ಔ' ಧ್ವನಿಗಳಿಗೆ ಬದಲಿಗೆ ಕ್ರಮವಾಗಿ 'ಅಯ್' ಹಾಗೂ 'ಅವ್' ಬಳಕೆ ಮಾಡಿ

ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಬಹಳಷ್ಟು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

• ಪದಾದಿ ಪರಿಸರ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಐ>ಅಯ್ | ಐದು | ಅಯದು |
| | ಐಲು | ಅಯಲು |
| | ಐಡಿ | ಅಯಡಿ |
| | ಐಸಿರಿ | ಅಯಸಿರಿ |
| | ಐರಾವತ | ಅಯರವತ |
| ಔ>ಅವ್ | ಔತಣ | ಅವತಣ |
| | ಔಡಲ | ಅವಡಲ |
| | ಔಷಧ | ಅವಶದ |
| | ಔಪಚಾರಿಕ | ಅವಪಚಾರಿಕ |

• ಪದಮಧ್ಯ ಪರಿಸರ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಐ>ಯಿ | ಕೈದಿ | ಕಯದಿ |
| | ಪೈಸೆ | ಪಯಿಸೆ |
| | ಪೈಲು | ಪಯಿಲು |
| | ಮೈದಾನ | ಮಯಿದಾನ |
| | ರೈಲು | ರಯಿಲು |
| | ಮೈಲು | ಮಯಿಲು |
| ಔ>ಅವ್ | ಕೌತುಕ | ಕವತುಕ |
| | ಗೌಡ | ಗಾವಡ |
| | ಕೌಶಲ | ಕವಸಲ |
| | ಪೌರುಷ | ಪವರುಷ |
| | ಸೌರಭ | ಸವರಬ |

• ಪದಾಂತ್ಯ ಪರಿಸರ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಐ>ಅಯ್ | ಮೈ | ಮಯ್ |
| | ಪೈ | ಪಯ್ |
| | ಕೈ | ಕಯ್ |
| | ಬೈ | ಬಯ್ |

**ವಿಶ್ಲೇಷಣೆ**

ಸಂಧ್ಯಕ್ಷರಗಳಾದ 'ಐ' ಹಾಗೂ 'ಔ' ಗಳನ್ನು ಮಕ್ಕಳು ಪದಾದಿ, ಪದಮದ್ಯ ಮತ್ತು ಪದಾಂತ್ಯ ಪರಿಸರದಲ್ಲಿ ಬರೆಯುವಾಗ ಹಲವು ತೆರನಾದ ಸಮಸ್ಯೆಗಳನ್ನು ಮಾಡುತ್ತಾರೆ. ಈ ತೆರನಾಗಿ ವ್ಯತ್ಯಾಸ ಮಾಡಿ ಬರೆಯುವುದನ್ನು ತಪ್ಪು ಎನ್ನುವುದಕ್ಕಿಂತ ಅದು ಕನ್ನಡ ಭಾಷೆಯ ಸಹಜ ರೂಪವೆನ್ನಬಹುದು. ಏಕೆಂದರೆ ವಿಶೇಷ ವಲಯವಾದ ಶಿಕ್ಷಣ ಕ್ಷೇತ್ರವನ್ನು ಬಿಟ್ಟು ಉಳಿದ ಕಡೆಯಲ್ಲಿ ಇವುಗಳ ಬಳಕೆ ಕಡಿಮೆ. ಕನ್ನಡದ ಜಾಯಮಾನ, ಆಡು ನುಡಿಯ ಪ್ರಭಾವ, ಉಚ್ಚಾರಣೆಯ ರೀತಿ ನೀತಿಯಿಂದಾಗಿ ಅವುಗಳ ವಿಕಲ್ಪ ರೂಪಗಳನ್ನು ಬಳಕೆ ಮಾಡಿ ಬರೆಯುವುದು ಕಂಡುಬರುತ್ತದೆ. ಅಲ್ಲದೆ ಸಂಧ್ಯಕ್ಷರಗಳ ಉಚ್ಚಾರಣೆ ಹಾಗೂ ಬರಹಕ್ಕೂ ಇರುವ ಭಿನ್ನತೆಯನ್ನು ಗಮನಿಸದೆ ಇರುವುದು, ಕನ್ನಡದಲ್ಲಿ ಸಂಧ್ಯಕ್ಷರಗಳ ಬಳಕೆ ಕಡಿಮೆ ಇರುವುದು/ಇಲ್ಲದಿರುವುದು, ಶಿಕ್ಷಕರ ಉಚ್ಚಾರಣೆಯಲ್ಲಿನ ದೋಷ, ವಿದ್ಯಾರ್ಥಿಗಳ ಆಲಿಸುವಿಕೆಯಲ್ಲಿನ ದೋಷ, ಪರಭಾಷೆಯ ಪ್ರಭಾವ ಇತ್ಯಾದಿ ಕಾರಣಗಳಿಂದ ಈ ತೆರನಾಗಿ ವ್ಯತ್ಯಾಸ ಮಾಡಿ ಬರೆದಿರಬಹುದು ಎನ್ನಲಾಗಿದೆ.

**೬.೨. ವ್ಯಂಜನಗಳನ್ನು ಬರೆಯುವಾಗ ಉಂಟಾಗುವ ಸಮಸ್ಯೆಗಳು**

ಪದಾದಿ ಹಾಗೂ ಪದಮದ್ಯ ಪರಿಸರದಲ್ಲಿ ವ್ಯಂಜನಗಳನ್ನು ಬರೆಯುವಾಗ ಮಹಾಪ್ರಾಣಕ್ಕೆ ಅಲ್ಪಪ್ರಾಣ, ಘೋಷತ್ವಕ್ಕೆ ಅಘೋಷ, ಅಘೋಷತ್ವಕ್ಕೆ ಘೋಷತ್ವ ಧ್ವನಿಗಳ ಬಳಕೆ ಮಾಡುವುದು, ಅನುನಾಸಿಕಗಳು, ಊಷ್ಮ ಧ್ವನಿಗಳು, ಪಾರ್ಶ್ವಿಕ ಧ್ವನಿಗಳ ಬಳಕೆಯಲ್ಲಿ ಹಾಗೂ ಅರ್ಧ ಸ್ವರಗಳ ಬಳಕೆಯಲ್ಲಿ ಹಲವು ರೀತಿಯ ವ್ಯತ್ಯಾಸಗಳನ್ನು ಮಾಡಿ ಬರೆಯುವುದು ಕಂಡುಬರುತ್ತದೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದು.

- **ಮಹಾಪ್ರಾಣಕ್ಕೆ ಅಲ್ಪಪ್ರಾಣ ಧ್ವನಿಗಳನ್ನು ಬಳಕೆ ಮಾಡಿ ಬರೆಯುವುದು**

ಪದಾದಿ, ಪದಮದ್ಯ ಹಾಗೂ ಪದಾಂತ್ಯ ಪರಿಸರದಲ್ಲಿ ಮಹಾಪ್ರಾಣಕ್ಕೆ ಬದಲಾಗಿ ಅಲ್ಪಪ್ರಾಣ ಧ್ವನಿಗಳನ್ನು ಬಳಕೆ ಮಾಡಿ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

• ಪದಾದಿ ಪರಿಸರ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಖ>ಕ | ಖಗ | ಕಗ |
| | ಖಣ | ಕನ |
| | ಖಚರ | ಕಚರ |
| | ಖಾರಿ | ಕಾರಿ |
| | ಖಂಡ | ಕಡ |
| ಘ>ಗ | ಘಟ | ಗಟ |
| | ಘಟಕ | ಗಟಕ |
| | ಘನತೆ | ಗನತೆ |
| | ಘಂಟೆ | ಗಟೆ |
| | ಘಮಘಮ | ಗಮಗಮ |
| ಛ>ಚ | ಛಲ | ಚಲ |
| | ಛಾಪ | ಚಾಪ |
| | ಛಗ | ಚಗ |
| | ಛಲಗಾರ | ಚಲಗರ |
| | ಛೇಧ | ಚೆದ |
| | ಛೀಮಾರಿ | ಚಿಮರಿ |
| ಝ>ಜ | ಝರಿ | ಜರಿ |
| | ಝಣಝಣ | ಜನಜನ |
| | ಝಂಡಾ | ಜಂಡಾ |
| | ಝೇಂಕಾರ | ಜಿಕಾರ |
| ಠ>ಟ | ಠೇವಣಿ | ಟಿವನಿ |
| | ಠಕ್ಕ | ಟಕ್ಕ |
| | ಠೀವಿ | ಟಿವಿ |
| | ಠೇಂಕಾರ | ಟೇಂಕಾರ |
| | ಠಸ್ಸೆ | ಟಸೆ |

| | | |
|---|---|---|
| ಢ>ಡ | ಢಗೆ | ಡಗೆ |
| | ಢಾಲು | ಡಾಲು |
| | ಢಣಢಣ | ಡನಡನ |
| | ಢಕ್ಕೆ | ಡಕೆ |
| ಥ>ತ | ಥಳಕು | ತಳಕು |
| | ಥಳಥಳ | ತಲತಲ |
| | ಥಳಿಸಿ | ತಳಿಸು |
| ಧ>ದ | ಧನ | ದನ |
| | ಧವಳ | ದವಲ |
| | ಧಗಧಗ | ದಗದಗ |
| | ಧರೆ | ದರೆ |
| | ಧನಿಕ | ದನಿಕ |
| | ಧಮಕ | ದಮಕ |
| | ಧರಣಿ | ದರನಿ |
| ಫ>ಪ | ಫಲ | ಪಲ |
| | ಫಣ | ಪನ |
| | ಫಲಕ | ಪಲಕ |
| | ಫಣಿ | ಪನಿ |
| | ಫಸಲು | ಪಸಲು |
| | ಫಲಹಾರ | ಪಲಹರ |
| ಭ>ಬ | ಭಯ | ಬಯ |
| | ಭರತ | ಬರತ |
| | ಭವನ | ಬವನ |
| | ಭಾವನೆ | ಬವನೆ |
| | ಭಜನೆ | ಬಜನೆ |
| | ಭಾವಿಸು | ಬಾವಿಸು |

• **ಪದಮಧ್ಯ ಪರಿಸರ**

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಖ>ಕ | ದಾಖಲೆ | ದಾಕಲೆ |
| | ದವಖಾನೆ | ದವಕಾನೆ |
| | ಅಖಂಡ | ಅಕಂಡ |
| | ಮುಖ | ಮುಕ |
| ಘ>ಗ | ಲಘು | ಲಗು |
| | ಮೇಘ | ಮೆಗ |
| | ಶೀಘ್ರ | ಸೀಗರ |
| | ಸಂಘಜೀವಿ | ಸಂಗಜೀವಿ |
| | ಸಂಘಟನೆ | ಸಂಗಟನೆ |
| ಛ>ಚ | ಮೂರ್ಛೆ | ಮೂರ್ಚೆ |
| | ಊಂಛಾ | ಊಚ |
| ಠ>ಟ | ಕಠೋರ | ಕಟೋರ |
| | ಪಾಠ | ಪಾಟ |
| | ಪೀಠಿಕೆ | ಪಿಟಿಕೆ |
| | ಕಂಠಾಭರಣ | ಕಂಟಬರನ |
| | ಹಠಮಾರಿ | ಹಟಮಾರಿ |
| ಥ>ತ | ಕಥನ | ಕತನ |
| | ರಥ | ರತ |
| | ಪಥ | ಪತ |
| | ಸಾರಥಿ | ಸರತಿ |
| | ಅಥಣಿ | ಅತನಿ |
| ಧ>ದ | ಅಧಿಕಾರ | ಅದಿಕಾರ |
| | ಅಧಿಕ | ಅದಿಕ |
| | ಆಧುನಿಕ | ಅದುನಿಕ |

| | | |
|---|---|---|
| | ಅಧಮ | ಅದಮ |
| | ಅಧಿನಿಯಮ | ಅದಿನಿಯಮ |
| | ಅಧಿವೇಶನ | ಅದಿವೆಸನ |
| ಫ>ಪ | ಸಫಲ | ಸಪಲ |
| | ಪಲಾಫಲ | ಪಲಪಲ |
| | ಫಳಫಳ | ಪಳಪಳ |
| | ರೇಫೆ | ರೆಪೆ |
| ಭ>ಬ | ಅಭಯ | ಅಬಯ |
| | ವಿಭಾಗ | ವಿಬಾಗ |
| | ಸಂಭವ | ಸಬವ |
| | ಅನುಭವ | ಅನುಬವ |
| | ಅಭಿನಂದನೆ | ಅಬಿನಂದನೆ |
| | ಗಂಭೀರ | ಗಂಬಿರ |

**ವಿಶ್ಲೇಷಣೆ**

ಮಕ್ಕಳು ಮಹಾಪ್ರಾಣಕ್ಕೆ ಬದಲಾಗಿ ಅಲ್ಪಪ್ರಾಣ ಧ್ವನಿಗಳನ್ನು ಬಳಕೆ ಮಾಡಿ ಬರೆಯಲು ಕಾರಣಗಳೆಂದರೆ

* ಕೇಶಿರಾಜನೆ ಹೇಳಿರುವ ಪ್ರಕಾರ ಕನ್ನಡದಲ್ಲಿ ಮಹಾಪ್ರಾಣ ಧ್ವನಿಗಳ ಬಳಕೆ ಇಲ್ಲದಿರುವುದು ಅಥವಾ ಕಡಿಮೆ ಇರುವುದು.
* ಆಡು ಮಾತಿನಲ್ಲಿ ಮಹಾಪ್ರಾಣ ಧ್ವನಿಗಳ ಬಳಕೆ ಇಲ್ಲದಿರುವುದು.
* ಮಹಾಪ್ರಾಣ ಮತ್ತು ಅಲ್ಪಪ್ರಾಣ ಧ್ವನಿಗಳ ನಡುವೆ ಇರುವ ಅಲ್ಪಧ್ವನಿ ಸಾಮ್ಯತೆಯನ್ನು ಗಮನಿಸದಿರುವುದು.
* ಕೆಲ ಧ್ವನಿಗಳಲ್ಲಿನ ರೂಪ ಸಾಮ್ಯತೆ
* ಈ ಧ್ವನಿಗಳ ಉಚ್ಚಾರಣೆಯ ಬಗ್ಗೆ ಶಿಕ್ಷಕರು ಮಕ್ಕಳಿಗೆ ಸರಿಯಾದ ಪರಿಕಲ್ಪನೆ ಮೂಡಿಸದಿರುವುದು.
* ಉಚ್ಚಾರಣೆಯ ದೋಷ
* ಆಲಿಸುವಿಕೆಯಲ್ಲಿನ ದೋಷ
* ಅನ್ಯ ಭಾಷೆಯ ಪ್ರಭಾವ ಇತ್ಯಾದಿ ಕಾರಣದಿಂದಾಗಿ ಈ ತೆರನಾದ ವ್ಯತ್ಯಾಸ ಮಾಡಿ ಬರೆದಿರಬಹುದು ಎನ್ನಲಾಗಿದೆ.

■ **ಅನುನಾಸಿಕ ಧ್ವನಿಗಳನ್ನು ವ್ಯತ್ಯಾಸಮಾಡಿ ಬರೆಯುತ್ತಾರೆ.**

ಅನುನಾಸಿಕ ಧ್ವನಿಗಳನ್ನು ಮುಖ್ಯವಾಗಿ ಪದಮಧ್ಯ ಹಾಗೂ ಪದಾಂತ್ಯದಲ್ಲಿ ಮೂರ್ಧನ್ಯ ಅನುನಾಸಿಕ 'ಣ' ಕಾರಕ್ಕೆ ಬದಲಾಗಿ ದಂತ್ಯ ಅನುನಾಸಿಕ 'ನ' ಧ್ವನಿಯನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆ

• **ಪದಮಧ್ಯ ಹಾಗೂ ಪದಾಂತ್ಯ ಪರಿಸರ**

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಣ>ನ | ಗಣತಿ | ಗನತಿ |
| | ಢಣಢಣ | ಡನಡನ |
| | ಗಣಿ | ಗನಿ |
| | ಚರಣ | ಚರನ |
| | ತಪಾಸಣೆ | ತಪಸನೆ |
| | ಗೋಣಿ | ಗೊನಿ |
| | ಫಣಿ | ಪನಿ |

**ವಿಶ್ಲೇಷಣೆ**

ಮಕ್ಕಳು ಅನುನಾಸಿಕ ಧ್ವನಿಗಳನ್ನು ವ್ಯತ್ಯಾಸ ಮಾಡಿ ಬರೆಯಲು ಕಾರಣಗಳೆಂದರೆ

* ಅನುನಾಸಿಕ ಧ್ವನಿಗಳ ಉಚ್ಚಾರಣೆಯಲ್ಲಿನ ಧ್ವನಿ ಸಾಮ್ಯತೆ.
* ಅನುನಾಸಿಕ ಧ್ವನಿಗಳ ಪರಿಕಲ್ಪನೆ ಸ್ಪಷ್ಟವಾಗಿ ಮೂಡಿಸದಿರುವುದು
* ಶಿಷ್ಟ ನುಡಿಗಳ ಅಂತರ
* ಮನೆಮಾತು-ಶಾಲೆ ಮಾತುಗಳ ನಡುವಿನ ವ್ಯತ್ಯಾಸ.
* ನಾಸಿಕದ ದೋಷ ಇರುವುದು.

ಇತ್ಯಾದಿ ಕಾರಣಗಳಿಂದಾಗಿ ಈ ತೆರನಾದ ವ್ಯತ್ಯಾಸ ಮಾಡಿ ಬರೆಯುವುದು ಕಂಡುಬಂದಿದೆ.

■ **ಪಾರ್ಶ್ವಿಕ ಧ್ವನಿಗಳಲ್ಲಿನ ವ್ಯತ್ಯಾಸಗಳು**

ಪದಮಧ್ಯ ಹಾಗೂ ಪದಾಂತ್ಯ ಪರಿಸರದಲ್ಲಿ ಮೂರ್ಧನ್ಯ ಪಾರ್ಶ್ವಿಕ ವ್ಯಂಜನ 'ಳ' ಧ್ವನಿಗೆ ಬದಲಾಗಿ ದಂತ್ಯ ಪಾರ್ಶ್ವಿಕ ವ್ಯಂಜನ 'ಲ' ಧ್ವನಿಯನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

• ಪದಮಧ್ಯ ಹಾಗೂ ಪದಾಂತ್ಯ ಪರಿಸರ

| ಬರಹರೂಪ | ಮಕ್ಕಳು ಬರೆಯುವ ರೂಪ |
|---|---|
| ಗಳಿಗೆ | ಗಲಿಗೆ |
| ಗುಳಿಗೆ | ಗುಲಿಗೆ |
| ಸುಳಾದಿ | ಸೂಲಾದಿ |
| ಕೊಳವೆ | ಕೊಲವಿ |
| ಕಟ್ಟಳೆ | ಕಟಲೆ |
| ಕಳೆ | ಕಲೆ |
| ಕಾಳು | ಕಾಲು |
| ನಳ | ನಲ |
| ಕಂಬಳ | ಕಂಬಲ |

**ವಿಶ್ಲೇಷಣೆ**

ಮಕ್ಕಳು ಪಾರ್ಶ್ವಿಕ ಧ್ವನಿಗಳನ್ನು ವ್ಯತ್ಯಾಸ ಮಾಡಿ ಬರೆಯಲು ಕಾರಣವೆಂದರೆ ಪಾರ್ಶ್ವಿಕ ಧ್ವನಿಗಳಲ್ಲಿನ ಉಚ್ಚಾರಣೆಯ ಭಿನ್ನತೆಯನ್ನು ಗಮನಿಸದೆ ಈ ತೆರನಾಗಿ ವ್ಯತ್ಯಾಸವಾಗಿ ಬರೆಯುವುದು ಕಂಡುಬಂದಿದೆ.

▪ ಊಷ್ಮ ಧ್ವನಿಗಳಲ್ಲಿನ ವ್ಯತ್ಯಾಸಗಳು

ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ ತಾಲವ್ಯ ಅಘೋಷ ಘರ್ಷ ವ್ಯಂಜನ 'ಶ' ಧ್ವನಿ ಹಾಗೂ ಮೂರ್ಧನ್ಯ ಅಘೋಷ ಘರ್ಷ ವ್ಯಂಜನ 'ಷ' ಧ್ವನಿಗಳ ಬದಲಿಗೆ ವರ್ತ್ಸ್ಯ ಅಘೋಷ ಘರ್ಷ ವ್ಯಂಜನ 'ಸ' ಧ್ವನಿಯನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

• ಪದಾದಿ ಪರಿಸರ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಶ>ಸ | ಶಪಥ | ಸಪತ |
| | ಶಯನ | ಸಯನ |
| | ಶರ | ಸರ |
| | ಶತಕ | ಸತಕ |

| | | |
|---|---|---|
| | ಶಂಕರ | ಸಂಕರ |
| | ಶಿಕ್ಷಕ | ಸಿಕ್ಷಕ |
| | ಶಾಲೆ | ಸಾಲೆ |
| | ಶರಣ | ಸರಣ |
| | ಶಕ್ತಿ | ಸಕಿತಿ |
| | ಶಿಬಿರ | ಸಿಬಿರ |
| ಷ>ಸ | ಷಟ್ಪದಿ | ಸಟ್ಪದಿ |
| | ಷಂಡ | ಸಂಡ |
| | ಷರಾ | ಸರಾ |
| | ಷರಾಯಿ | ಸರಾಯಿ |
| | ಷಷ್ಠಿ | ಸಸ್ಟಿ |

• ಪದಮದ್ಯ ಪರಿಸರ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಶ>ಸ | ವಿಶೇಷ | ವಿಸೆಸ |
| | ದಶಮುಖ | ದಸಮುಕ |
| | ದೇಶ | ದೆಸ |
| | ಮಶಣ | ಮಸನ |
| | ಕಾಶಿ | ಕಸಿ |
| | ಶಿಸು | ಸಿಸು |
| | ದೇಶಿ | ದೆಸಿ |
| ಷ>ಸ | ವಿಷಯ | ವಿಸಯ |
| | ವಿಷಮ | ವಿಸಮ |
| | ಕಷಾಯ | ಕಸಾಯ |
| | ಭಾಷೆ | ಬಾಸೆ |
| | ಔಷಧಿ | ಅವಸದಿ |
| | ಋಷಿ | ರುಸಿ |

**ವಿಶ್ಲೇಷಣೆ**

ಮಕ್ಕಳು ಊಷ್ಮ ಧ್ವನಿಗಳನ್ನು ವ್ಯತ್ಯಾಸ ಮಾಡಿ ಬರೆಯಲು ಕಾರಣಗಳೆಂದರೆ

* ಊಷ್ಮ ಧ್ವನಿಗಳಾದ ಶ, ಷ ಧ್ವನಿಗಳ ಬಳಕೆ ಕನ್ನಡದಲ್ಲಿ ಇಲ್ಲದಿರುವುದು ಅಥವಾ ಕಡಿಮೆ ಇರುವುದು.
* ಊಷ್ಮ ಧ್ವನಿಗಳ ಉಚ್ಚಾರಣೆಯಲ್ಲಿನ ಅಲ್ಪಧ್ವನಿ ಸಾಮ್ಯತೆಯನ್ನು ಸರಿಯಾಗಿ ಗ್ರಹಿಸದಿರುವುದು.
* ಊಷ್ಮ ಧ್ವನಿಗಳ ಬಗ್ಗೆ ಸ್ಪಷ್ಟವಾದ ಪರಿಕಲ್ಪನೆಯನ್ನು ಮೂಡಿಸದಿರುವುದು.
* ಉಚ್ಚಾರಣೆಯಲ್ಲಿನ ದೋಷ
* ಆಲಿಸುವಿಕೆಯಲ್ಲಿನ ದೋಷ
* ಪರಭಾಷೆಗಳ ಪ್ರಭಾವ
* ಆಡುಮಾತಿನಲ್ಲಿ ಶ, ಷ, ಕಾರಗಳಿಗಿಂತ 'ಸ' ಕಾರದ ಬಳಕೆ ಹೆಚ್ಚಾಗಿರುವುದು
* ದೋಷ ಪೂರಿತ ಬೋಧನೆ

ಇತ್ಯಾದಿ ಕಾರಣದಿಂದಾಗಿ ಈ ತೆರನಾಗಿ ವ್ಯತ್ಯಾಸ ಮಾಡಿ ಬರೆದಿರಬಹುದು ಎನ್ನಲಾಗಿದೆ.

**▪ ಅರ್ಧ ಸ್ವರಗಳನ್ನು ಬರೆಯುವಲ್ಲಿನ ಸಮಸ್ಯೆಗಳು**

ಪದಾದಿ ಪರಿಸರದಲ್ಲಿ ಅರ್ಧಸ್ವರ 'ಯ' ಹಾಗೂ 'ವ' ಧ್ವನಿಗಳ ಬದಲಿಗೆ ಸ್ವರಗಳಾದ 'ಎ' ಹಾಗೂ 'ಒ' ಧ್ವನಿಗಳನ್ನು ಬಳಕೆ ಮಾಡಿ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಬಹಳಷ್ಟು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

• ಪದಾದಿ ಪರಿಸರ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಯ>ಎ | ಯಮ | ಎಮ |
| | ಯವನ | ಎವನ |
| | ಯಮತ | ಎಮತ |
| | ಯಾತನೆ | ಎತನೆ |
| | ಯತನ | ಎತನ |
| | ಯಮಕ | ಎಮಕ |
| | ಯಕ್ಷ | ಎಕ್ಷ |

| | | |
|---|---|---|
| ವ>ಒ | ವಂದನೆ | ಒಂದನೆ |
| | ವಧು | ಒದು |
| | ವಂಚನೆ | ಒಂಚನೆ |
| | ವರ್ಷ | ಒರುಷ |
| | ವರದಿ | ಒರದಿ |

**ವಿಶ್ಲೇಷಣೆ:**

ಕನ್ನಡದ ಅರ್ಧ ಸ್ವರಗಳಲ್ಲಿ ಉಂಟಾಗುವ ವ್ಯತ್ಯಾಸಗಳನ್ನು ಸಮಸ್ಯೆಗಳೆಂದು ಪರಿಗಣಿಸದೆ ಅದು ಕನ್ನಡದ ಸಹಜ ರೂಪವೆಂದೆ ಪರಿಗಣಿಸಬೇಕು. ಹಾಗೂ ವಿಕಲ್ಪದಿಂದ ಈ ತೆರನಾದ ವ್ಯತ್ಯಾಸವನ್ನು ಮಾಡುತ್ತವೆ ಎಂಬುದನ್ನು ನಮ್ಮ ಭಾಷಾವಿಜ್ಞಾನಿಗಳು ಹೇಳಿದ್ದಾರೆ. (ಡಿ.ಎನ್. ಶಂಕರಭಟ್‌ರು 'ನಮ್ಮ ಬರಹವನ್ನು ಸರಿಪಡಿಸೋಣ' ಎಂಬ ಪುಸ್ತಕದಲ್ಲಿ ಹೇಳಿದ್ದಾರೆ) ಅಲ್ಲದೆ ಅರ್ಧಸ್ವರಗಳಲ್ಲಿನ ವ್ಯತ್ಯಾಸಕ್ಕೆ ಕಾರಣಗಳೆಂದರೆ

* ಧ್ವನಿಗಳ ಉಚ್ಚಾರಣೆಯಲ್ಲಿನ ಅಲ್ಪಧ್ವನಿ ಸಾಮ್ಯತೆ
* ವ್ಯವಹಾರಿಕ ಕನ್ನಡದ ಪ್ರಭಾವ
* ಅರ್ಧಸ್ವರಗಳ ಬಗ್ಗೆ ಸ್ಪಷ್ಟ ಪರಿಕಲ್ಪನೆ ಇಲ್ಲದಿರುವುದು
* ಆತುರ, ಉತ್ಸಾಹದ ಅತಿರೇಕ ಇತ್ಯಾದಿ ಕಾರಣದಿಂದಾಗಿ ಈ ತೆರನಾದ ವ್ಯತ್ಯಾಸವನ್ನು ಮಾಡಿ ಬರೆದಿರುವುದು ಕಂಡುಬರುತ್ತದೆ.

▪ **ಹ>ಅ ಬಳಕೆಯಲ್ಲಿನ ದೋಷಗಳಿಗೆ ಕಾರಣಗಳು**

ಪದಾದಿ ಪದಮಧ್ಯ ಪರಿಸರದಲ್ಲಿ ವ್ಯಂಜನ 'ಹ' ಧ್ವನಿಗೆ ಬದಲಾಗಿ ಸ್ವರಧ್ವನಿಯಾದ 'ಅ' ಕಾರವನ್ನು ಬಳಕೆ ಮಾಡಿ ಬರೆಯುತ್ತಾರೆ. ಈ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದು. ಉದಾಹರಣೆಗೆ

• ಪದಾದಿ ಪರಿಸರ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಹ>ಅ | ಹಳದಿ | ಅಲದಿ |
| | ಹವಳ | ಅವಲ |
| | ಹಳೆಯ | ಅಲೆಯ |
| | ಹಕ್ಕಿ | ಅಕ್ಕಿ |

| | |
|---|---|
| ಹತ್ತು | ಅತ್ತು |
| ಹಸು | ಅಸು |
| ಹಣತೆ | ಅನತೆ |
| ಹನುಮಂತ | ಅನುಮಂತ |
| ಹದ್ದು | ಅದು |
| ಹಲಸು | ಅಲಸು |

• ಪದಮಧ್ಯ ಪರಿಸರ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಹ>ಅ | ಬಹಳ | ಬಅಳ |
| | ಮಹಾವೀರ | ಮಅವೀರ |
| | ಸಹಕಾರ | ಸಅಕಾರ |
| | ಕಹಳೆ | ಕಅಲೆ |
| | ವಿಹಾರ | ವಿಅರ |
| | ವಿಹಂಗಮ | ವಿಅಗಮ |

**ವಿಶ್ಲೇಷಣೆ**

ಮಕ್ಕಳು ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ ವ್ಯಂಜನ 'ಹ' ಧ್ವನಿಗೆ ಬದಲಾಗಿ ಸ್ವರಧ್ವನಿಯಾದ 'ಅ' ಕಾರವನ್ನು ಬಳಕೆ ಮಾಡಿ ಬರೆಯಲು ಕಾರಣವೆಂದರೆ

* ಬರಹ ಹಾಗೂ ಆಡುನುಡಿಗಳಲ್ಲಿ 'ಹ' ಕಾರದ ಬಳಕೆ ಕಡಿಮೆ ಇರುವುದರಿಂದ.
* ಆತುರ ಹಾಗೂ ಉತ್ಸಾಹದ ಅತಿರೇಕದಿಂದ
* ಎರಡು ಧ್ವನಿಗಳಲ್ಲಿನ ಅಲ್ಪಧ್ವನಿ ಸಾಮ್ಯತೆಯಿಂದ
* ಕಡಿಮೆ ವ್ಯಾಪ್ತಿಯಿಂದ ಇತ್ಯಾದಿ ಕಾರಣದಿಂದಾಗಿ ಈ ತೆರನಾಗಿ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

೬.೩. ಗುಣಿತಾಕ್ಷರಗಳನ್ನು ಬರೆಯುವಾಗ ಉಂಟಾಗುವ ಸಮಸ್ಯೆಗಳು

• ' ಾ > ''

ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ (' ಾ') ತಲಕಟ್ಟಿಳಿಯನ್ನು ಬಳಕೆ ಮಾಡದೆ ಬರೆದಿರುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವನ್ನು ಕಡಿಮೆ ಮಕ್ಕಳಲ್ಲಿ ಮಾತ್ರ ನೋಡಬಹುದು. ಉದಾಹರಣೆಗೆ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ: | ಮಾರು | ಮರು |
| | ಕಾಲು | ಕಲು |
| | ವಾರ | ವರ |
| | ಮಹಾದಾಸೆ | ಮಅದಸೆ |
| | ಭಾನುವಾರ | ಬನವಾರ |
| | ಸಹಕಾರ | ಸಹಕರ |
| | ಯಾತನೆ | ಯತನೆ |

• 'ೀ > ಿ'

ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ (ೀ) ಇಳಿಯನ್ನು ಬಳಕೆ ಮಾಡದೆ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಕೆಲವು ಮಕ್ಕಳಲ್ಲಿ ಮಾತ್ರ ಕಂಡುಬರುತ್ತದೆ. ಉದಾಹರಣೆಗೆ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಚೀಲ | ಚಿಲ |
| | ಮೀನು | ಮಿನು |
| | ಕೀಳು | ಕಿಳು |
| | ದೀನ | ದಿನ |
| | ತೀರಾ | ತಿರ |
| | ಸಮೀಪ | ಸಮಿಪ |

• ' ೂ > ು'

ಪದಾದಿ ಹಾಗೂ ಪದಮಧ್ಯ ಪರಿಸರದಲ್ಲಿ (ೂ) ಕೊಂಬಿನಿಳಿಯನ್ನು ಬಳಕೆ ಮಾಡದೆ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಕೆಲವು ಮಕ್ಕಳಲ್ಲಿ ಮಾತ್ರ ಕಂಡುಬರುತ್ತದೆ. ಉದಾಹರಣೆಗೆ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಕೂಟ | ಕುಟ |
| | ಗೂಡು | ಗುಡು |
| | ಮೂರು | ಮುರು |

| | |
|---|---|
| ಕುತೂಹಲ | ಕುತುಹಲ |
| ಚೂರು | ಚುರು |
| ದೂರ | ದುರ |

• ‘ೃ > ್ರ’

ಪದಾದಿ ಮತ್ತು ಪದಾಂತ್ಯ ಪರಿಸರದಲ್ಲಿ ವಟ್ಟಸುಳಿ ( ೃ) ಬದಲಿಗೆ ವ್ಯಂಜನಕ್ಕೆ ಗುಡಿಸಿ ಅಥವಾ ಕೊಂಬು (ು, ು) ನೀಡಿ ‘ರ’ ಕಾರದ ಒತ್ತಕ್ಷರವನ್ನು ಬಳಕೆ ಮಾಡಿ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಬಹಳಷ್ಟು ಮಕ್ಕಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಗೃಹ | ಗ್ರುಹ |
| | ಕೃಷಿ | ಕ್ರುಸಿ |
| | ಕೃಷ್ಣ | ಕ್ರಿಸ್ನ |
| | ನೃತ್ಯ | ನ್ರತಯ |
| | ಪಿತೃ | ಪಿತ್ರು |
| | ಮಾತೃ | ಮಾತ್ರು |
| | ಪೃಥ್ವಿ | ಪ್ರುತಿವಿ |

• ‘ೀ > ೆ’

ಪದಮಧ್ಯ ಪರಿಸರದಲ್ಲಿ ಏತ್ವದೀರ್ಘ(ೀ)ವನ್ನು ಬಳಕೆ ಮಾಡದೆ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಮಾತ್ರ ಕಂಡುಬರುತ್ತದೆ. ಉದಾಹರಣೆಗೆ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಕೇರಿ | ಕೆರಿ |
| | ಬೇಗ | ಬೆಗ |
| | ಬೇಳೆ | ಬೆಳೆ |
| | ಮೇಲೆ | ಮೆಲೆ |
| | ಉದ್ದೇಶ | ಉದೆಸ |
| | ಅಪೇಕ್ಷೆ | ಅಪೆಕ್ಷೆ |

• 'ೋ > ೊ'

ಪದಮಧ್ಯ ಪರಿಸರದಲ್ಲಿ ಓತ್ವದೀರ್ಘ( ೋ)ವನ್ನು ಬಳಕೆ ಮಾಡದೆ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಮಾತ್ರ ಕಂಡುಬರುತ್ತದೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಕೋಗಿಲೆ | ಕೊಗಿಲೆ |
| | ಭೋಜನ | ಬೊಜನ |
| | ಕೋಪ | ಕೊಪ |
| | ನೋಟ | ನೊಟ |
| | ದೋಸೆ | ದೊಸೆ |
| | ಪೋಲಿ | ಪೊಲಿ |
| | ಯೋಚನೆ | ಯೊಚನೆ |
| | ತೋರಣ | ತೊರಣ |

• 'ೌ > ಅವ್'

ಪದಾದಿ ಪರಿಸರದಲ್ಲಿ ಔತ್ವದೀರ್ಘ( ೌ )ವನ್ನು ಬಳಕೆ ಮಾಡದೆ ಆಯಾ ವ್ಯಂಜನದ ಮುಂದೆ 'ಅವ್' ಕಾರವನ್ನು ಬಳಕೆ ಮಾಡಿ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಮಾತ್ರ ಕಂಡುಬರುತ್ತದೆ. ಉದಾಹರಣೆಗೆ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಕೌತುಕ | ಕವತುಕ |
| | ಔತಣ | ಅವತನ |
| | ಗೌರವ | ಗವರವ |
| | ನೌಕರ | ನವಕರ |
| | ಮೌಳಿ | ಮವಳಿ |

• ಪದಾದಿ ಹಾಗೂ ಪದಮಧ್ಯ ಪರಿಸರದಲ್ಲಿ ಬರುವ ಗುಣಿತಾಕ್ಷರ ಧ್ವನಿ ಖಾ, ಖಿ, ಖೆ, ಖೇ, ಧ್ವನಿ ಬದಲು ಕಾ, ಕಿ, ಕೆ, ಕೆ ಧ್ವನಿಗಳನ್ನು ಬಳಕೆ ಮಾಡಿ ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸಗಳನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಖರೀದಿ | ಕರದಿ |
| | ಖಿನ್ನ | ಕಿನ್ನ |
| | ಖರ್ಚು | ಕರ್ಚು |
| | ಖಡಾಖಂಡಿತ | ಕಡಕಡಿತ |
| | ದವಾಖಾನೆ | ದವಕನೆ |
| | ಸುಖಿ | ಸುಕಿ |
| | ಖೇದ | ಕೆದ |
| | ಗೋಖಲೆ | ಗೊಕಲೆ |
| | ಖೈದಿ | ಕಯಿದಿ |
| | ಖಜಾನೆ | ಕಜನೆ |

- ಪದಾದಿ ಪರಿಸರದಲ್ಲಿ ಛಾ, ಛೀ, ಛೇ ಧ್ವನಿಗಳ ಬದಲು ಚಾ, ಚಿ, ಚೆ, ಧ್ವನಿ ಬಳಕೆ ಮಾಡಿ ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಂಡುಬರುತ್ತದೆ. ಉದಾಹರಣೆಗೆ

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಛಾಯೆ | ಚಾಯ |
| | ಛಂದಸ್ಸು | ಚಂದಸ್ಸು |
| | ಛೇದ | ಚೆದ |
| | ಛೀಮಾರಿ | ಚಿಮರಿ |
| | ಛೇದಿಸು | ಚೆದಿಸು |

- ಪದಾದಿ ಪರಿಸರದಲ್ಲಿ ಢ, ಢೀ, ಢೋ ಬದಲು ಡ, ಡಿ, ಡೊ ಬಳಕೆ ಮಾಡಿ ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಂಡುಬರುತ್ತದೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಢಾಣೆ | ಡಾನೆ |
| | ಢಾಳಿಸು | ಡಾಳಿಸು |
| | ಢೀಗು | ಡಿಗು |
| | ಢೋಂಗಿ | ಡೊಂಗಿ |

• ಪದಾದಿ ಪರಿಸರದಲ್ಲಿ ಗುಣಿತಾಕ್ಷರ ಘಾ, ಘೀ, ಘೋ, ಧ್ವನಿಗಳ ಬದಲಿಗೆ ಗಾ, ಗಿ, ಗೊ ಧ್ವನಿಗಳನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ೫, ೬ ಮತ್ತು ೭ನೆಯ ತರಗತಿಯ ಎಲ್ಲಾ ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಘೀಳಿಡು | ಗಿಳಿಡು |
| | ಘಾಸಿ | ಗಾಸಿ |
| | ಘೋಷಣೆ | ಗೊಸನೆ |
| | ಅಘಾತ | ಅಗಾತ |
| | ಘೋರ್ಪಡೆ | ಗೊರಪಡೆ |

• ಪದಮಧ್ಯ ಪರಿಸರದಲ್ಲಿ ಗುಣಿತಾಕ್ಷರ ಠ, ಠೀ, ಠೇ ಧ್ವನಿಗಳ ಬದಲಿಗೆ 'ಟ', 'ಟಿ', 'ಟೆ' ಧ್ವನಿಗಳನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಠೀವಿ | ಟಿವಿ |
| | ಠಾಣೆ | ಟಾನೆ |
| | ಠೇವಣಿ | ಟೆವಣಿ |
| | ಠೇಂಕಾರ | ಟೆಕಾರ |
| | ಠಿಕಾಣಿ | ಟಿಕಾಣಿ |
| | ಠಾಕೂರ್ | ಟಾಕುರ |

• ಪದಾದಿ ಪರಿಸರದಲ್ಲಿ ಗುಣಿತಾಕ್ಷರ 'ಹಾ', 'ಹೈ' ಧ್ವನಿಗಳ ಬದಲಾಗಿ ಸ್ವರಧ್ವನಿ 'ಆ', ಧ್ವನಿಗಳನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ೫, ಮತ್ತು ೭ನೆಯ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಹಾಡಿ | ಆಡಿ |
| | ಹೈದ | ಐದ |
| | ಹಾಕು | ಆಕು |

• ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ ಧಾ, ಧೀ, ಧು, ಧೋ ಬದಲು ದಾ, ದಿ, ದು, ದೊ ಎಂದು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಧಾನ್ಯ | ದಾನ |
| | ಧಾರಕ | ದಾರಕ |
| | ಧೀರ | ದಿರ |
| | ಧೀಮಂತ | ದಿಮಂತ |
| | ಅಧೀನ | ಅದಿನ |
| | ಧುಮುಕು | ದುಮುಕು |
| | ಧೋರಣೆ | ದೊರಣೆ |
| | ಅಧೋಗತಿ | ಅದೊಗತಿ |

• ಪದಾದಿ ಪರಿಸರದಲ್ಲಿ ಫಾ, ಫಿ, ಫೇ ಬದಲು ಪಾ, ಪಿ, ಪೆ ಎಂದು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ೫ ಮತ್ತು ೬ನೇ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಫಾಶಿ | ಪಾಸಿ |
| | ಫಾಲ್ಗುಣ | ಪಾಲಗುಣ |
| | ಫಿತೂರಿ | ಪಿತೂರಿ |
| | ಫೇಣಿ | ಪೆನಿ |
| | ಫೇರಿ | ಪೆರಿ |

• ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ ಗುಣಿತಾಕ್ಷರ ಥಾ, ಥೇ, ಥೈ ಗಳ ಬದಲು ತಾ, ತೆ, ತೈ ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ೫ ಮತ್ತು ೬ನೇ ತರಗತಿಯ ಮಕ್ಕಳು ಹೆಚ್ಚು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಥೇಟ್ | ತೆಟ್ |
| | ಥೈಲಿ | ತೈಲಿ |

| | |
|---|---|
| ಥಾಲಿ | ತಾಲಿ |
| ಥಾಟು | ತಾಟು |

• ಪದಾದಿ ಮತ್ತು ಪದಮದ್ಯ ಪರಿಸರದಲ್ಲಿ ಭಾ, ಭೀ, ಭೂ, ಭೇ, ಭೋ ಧ್ವನಿಗಳ ಬದಲು ಬಾ, ಬಿ, ಬೂ, ಬೆ, ಬೊ ಎಂದು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಭಾವನೆ | ಬಾವನೆ |
| | ವಿಭಾಗ | ವಿಬಾಗ |
| | ಭೀಮ | ಬಿಮ |
| | ನಿರ್ಭೀತಿ | ನಿರಬಿತಿ |
| | ಸಹಾನುಭೂತಿ | ಸಅನುಬುತಿ |
| | ಭೇರಿ | ಬೆರಿ |
| | ಅಭೇದ | ಅಬೆದ |
| | ಭೋಗ | ಬೊಗ |
| | ಉಗಭೋಗ | ಉಗಬೊಗ |

• ಪದಾದಿ ಪರಿಸರದಲ್ಲಿ ಗುಣಿತಾಕ್ಷರ ಶಾ, ಶಿ, ಶೆ, ಶೊ, ಧ್ವನಿಯ ಬದಲು ಗುಣಿತಾಕ್ಷರ ಸಾ, ಸಿ, ಸೆ, ಸೊ ಧ್ವನಿಗಳನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಶಾಲಾ | ಸಾಲಾ |
| | ಶಾಂತಿ | ಸಾಂತಿ |
| | ಶಿಕಾರಿ | ಸಿಕಾರಿ |
| | ಶಿಖರ | ಸಿಕರ |
| | ಶೀತ | ಸಿತ |
| | ಶೀತಲ | ಸಿತಲ |
| | ಶೋಕ | ಸೊಕ |

| | |
|---|---|
| ಶೂಲ | ಸೂಲ |
| ಶೇಕಡ | ಸೆಕಡ |

• ಪದಾದಿ ಪರಿಸರದಲ್ಲಿ ಗುಣಿತಾಕ್ಷರ ಷ, ಷಾ, ಷಿ ಧ್ವನಿಗಳ ಬದಲು ಗುಣಿತಾಕ್ಷರ ಸ, ಸಾ, ಸಿ ಧ್ವನಿಗಳನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಷಂಡ | ಸಂಡ |
| | ಷಟ್ಪದಿ | ಸಟ್ಪದಿ |
| | ಷಾಮೀಲು | ಸಾಮಿಲು |
| | ಷಿಕಾರಿ | ಸಿಕಾರಿ |

**ವಿಶ್ಲೇಷಣೆ:**

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಮಕ್ಕಳು ಗುಣಿತಾಕ್ಷರಗಳನ್ನು ಬರೆಯುವಾಗ ಮಾಡುವ ಪ್ರಮುಖ ವ್ಯತ್ಯಾಸ ಅಥವಾ ಸಮಸ್ಯೆಗಳಿಗೆ ಕಾರಣಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

* ಎರಡು ಗುಣಿತಾಕ್ಷರಗಳ ನಡುವೆ ಇರುವ ರಚನೆಯಲ್ಲಿನ ಅಲ್ಪ ವ್ಯತ್ಯಾಸವನ್ನು ಗಮನಿಸದೆ ಇರುವುದು.
* ಬೋಧಕರು ಗುಣಿತಾಕ್ಷರಗಳ ಬಗ್ಗೆ ಸರಿಯಾದ ಪರಿಕಲ್ಪನೆ ಮೂಡಿಸದೆ ಇರುವುದು.
* ಮಕ್ಕಳ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ ಪರಿಸರ ಸರಿ ಇಲ್ಲದೆ ಇರುವುದು.
* ಪೋಷಕರ ಅನಕ್ಷರತೆ
* ಮಕ್ಕಳು ಕಲಿಕೆಯಲ್ಲಿ ಆಸಕ್ತಿ ತೋರದೆ ಇರುವುದು.

ಇತ್ಯಾದಿ ಕಾರಣಗಳಿಂದಾಗಿ ಈ ತೆರನಾಗಿ ವ್ಯತ್ಯಾಸ ಮಾಡಿ ಬರೆದಿರಬಹುದು ಎನ್ನಲಾಗಿದೆ.

## ೬.೪. ಒತ್ತಕ್ಷರ/ಸಂಯುಕ್ತಾಕ್ಷರಗಳಲ್ಲಿ ಉಂಟಾಗುವ ಸಮಸ್ಯೆಗಳು

■ **ಸಜಾತಿ ಒತ್ತಕ್ಷರಗಳನ್ನು ಬರೆಯುವಾಗ ಉಂಟಾಗುವ ಸಮಸ್ಯೆಗಳು**

ಪದಮಧ್ಯ ಪರಿಸರದಲ್ಲಿ ಬರುವ ಸಜಾತಿ ಒತ್ತಕ್ಷರಗಳನ್ನು ಲೋಪ ಮಾಡಿ ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವು ಎಲ್ಲ ತರಗತಿಯ ಕೆಲವು ಮಕ್ಕಳಲ್ಲಿ ಕಾಣಬಹುದಾಗಿದೆ. ಉದಾಹರಣೆಗೆ

- ಕ್ಕ > ಕ

ಪದಮದ್ಯ ಪರಿಸರದಲ್ಲಿ 'ಕ್ಕ' ಸಂಯುಕ್ತಾಕ್ಷರ ಧ್ವನಿ ಬದಲು 'ಕ' ಕಂಠ್ಯ ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾತ್ರ ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಅಕ್ಕ | ಅಕ |
| | ಕೊಕ್ಕರೆ | ಕೊಕರೆ |
| | ಹಕ್ಕಿ | ಅಕಿ |
| | ಅಕ್ಕಿ | ಅಕಿ |
| | ಸೊಕ್ಕು | ಸೊಕು |

- ಗ್ಗ > ಗ

ಪದಮದ್ಯ ಪರಿಸರದಲ್ಲಿ 'ಗ್ಗ' ಸಂಯುಕ್ತಾಕ್ಷರ ಧ್ವನಿ ಬದಲು 'ಗ' ಕಂಠ್ಯ ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ವ್ಯತ್ಯಾಸವನ್ನು ೫ ಮತ್ತು ೬ನೇ ತರಗತಿಯ ಮಕ್ಕಳು ಹೆಚ್ಚು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಅಗ್ಗ | ಅಗ |
| | ಒಗ್ಗಟ್ಟು | ಒಗಟು |
| | ಹಗ್ಗ | ಅಗ |
| | ಅಗ್ಗಳ | ಅಗಳ |
| | ಬಗ್ಗೆ | ಬಗೆ |
| | ಬಗ್ಗು ಬಡಿ | ಬಗುಬಡಿ |
| | ತಗ್ಗು | ತಗು |

- ಚ್ಚ > ಚ

ಪದಮದ್ಯ ಪರಿಸರದಲ್ಲಿ 'ಚ್ಚ' ದ್ವಿತ್ವ ಧ್ವನಿ ಬದಲು 'ಚ' ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾತ್ರ ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಮೆಚ್ಚು | ಮೆಚು |
| | ಹೆಚ್ಚು | ಹೆಚು |
| | ಅಚ್ಚರಿ | ಅಚರಿ |
| | ನಿಚ್ಚಲ | ನಿಚಲ |
| | ಸಚ್ಚಿದಾನಂದ | ಸಚಿದಾನಂದ |

• ಜ್ಜ > ಜ

ಪದಮದ್ಯ ಪರಿಸರದಲ್ಲಿ 'ಜ್ಜ' ದ್ವಿತ್ವ ಧ್ವನಿ ಬದಲು 'ಜ' ತಾಲವ್ಯ ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಅಜ್ಜಿ | ಅಜಿ |
| | ಗೆಜ್ಜೆ | ಗೆಜೆ |
| | ಗಜ್ಜರಿ | ಗಜರಿ |
| | ಅಜ್ಜ | ಅಜ |
| | ಕಜ್ಜಿ | ಕಜಿ |
| | ಲಜ್ಜೆ | ಲಜೆ |

• ದ್ದ > ದ

ಪದಮದ್ಯ ಪರಿಸರದಲ್ಲಿ 'ಟ್ಟ' ದ್ವಿತ್ವ ಧ್ವನಿ ಬದಲು 'ಟ' ಮೂರ್ಧನ್ಯ ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ದಟ್ಟ | ದಟ |
| | ಅಟ್ಟ | ಅಟ |
| | ಕಟ್ಟಿಗೆ | ಕಟಿಗೆ |
| | ಕಟ್ಟು | ಕಟು |
| | ತಟ್ಟನೆ | ತಟನೆ |
| | ಕುಟ್ಟು | ಕುಟು |
| | ಪಟ್ಟನೆ | ಪಟನೆ |

• ಡ್ಡ > ಡ

ಪದಮಧ್ಯ ಪರಿಸರದಲ್ಲಿ 'ಡ್ಡ' ದ್ವಿತ್ವ ಧ್ವನಿ ಬದಲು 'ಡ' ಮೂರ್ಧನ್ಯ ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಅಡ್ಡ | ಅಡ |
| | ಕಡ್ಡಿ | ಕಡಿ |
| | ಲಡ್ಡು | ಲಡು |
| | ಗೊಡ್ಡಿ | ಗೊಡಿ |
| | ದುಡ್ಡು | ದುಡು |
| | ಗಿಡ್ಡ | ಗಿಡ |
| | ಬಿಡ್ಡ | ಬಿಡ |

• ಣ್ಣ > ನ್ನ

ಪದಮಧ್ಯ ಪರಿಸರದಲ್ಲಿ 'ಣ್ಣ' ದ್ವಿತ್ವ ಧ್ವನಿ ಬದಲು 'ನ್ನ' ದಂತ್ಯ ಅನುನಾಸಿಕ ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಕಣ್ಣು | ಕನ್ನು |
| | ಅಣ್ಣ | ಅನ್ನ |
| | ತಣ್ಣಗೆ | ತನ್ನಗೆ |
| | ತಣ್ಣಗಾಗು | ತನ್ನಗಾಗು |
| | ಬಣ್ಣ | ಬನ್ನ |
| | ಹಣ್ಣು | ಅನ್ನು |

• ತ್ತ > ತ

ಪದಮಧ್ಯ ಪರಿಸರದಲ್ಲಿ 'ತ್ತ' ದ್ವಿತ್ವ ಧ್ವನಿ ಬದಲು 'ತ' ದಂತ್ಯ ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಕತ್ತೆ | ಕತೆ |
| | ಅತ್ತಿಗೆ | ಅತಿಗೆ |
| | ಹತ್ತು | ಅತು |
| | ಗುತ್ತಿಗೆ | ಗುತಿಗೆ |
| | ಕತ್ತರಿ | ಕತರಿ |
| | ಸುತ್ತಿಗೆ | ಸುತಿಗೆ |

• ದ್ದ > ದ

ಪದಮದ್ಯ ಪರಿಸರದಲ್ಲಿ 'ದ್ದ' ದ್ವಿತ್ವ ಧ್ವನಿ ಬದಲು 'ದ' ದಂತ್ಯ ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಗದ್ದೆ | ಗದೆ |
| | ಉದ್ದ | ಉದ |
| | ಇದ್ದಲಿ | ಇದಲಿ |
| | ಪೆದ್ದ | ಪೆದ |
| | ಗುದ್ದಲಿ | ಗುದಲಿ |
| | ಮದ್ದು | ಮದು |

• ನ್ನ > ನ

ಪದಮದ್ಯ ಪರಿಸರದಲ್ಲಿ 'ನ್ನ' ದ್ವಿತ್ವ ಧ್ವನಿ ಬದಲು 'ನ' ದಂತ್ಯ ಅನುನಾಸಿಕ ಧ್ವನಿಯನ್ನು ಬರೆಯುತ್ತಾರೆ. ಈ ಒಂದು ವ್ಯತ್ಯಾಸವನ್ನು ಬಹಳಷ್ಟು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ತನ್ನ | ತನ |
| | ಅನ್ನ | ಅನ |
| | ಚೆನ್ನಾಗಿ | ಚೆನಾಗಿ |
| | ಸನ್ನದು | ಸನದು |
| | ಸನ್ನಿಧಿ | ಸನಿದಿ |

• ಪ್ಪ > ಪ

ಪದಮದ್ಯ ಪರಿಸರದಲ್ಲಿ 'ಪ್ಪ' ದ್ವಿತ್ವಧ್ವನಿ ಬದಲು 'ಪ' ಉಭಯೋಷ್ಟ್ಯ ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಅಪ್ಪಟ | ಅಪಟ |
| | ದಪ್ಪ | ದಪ |
| | ಚಪ್ಪಲಿ | ಚಪಲಿ |
| | ಅಪ್ಪಣೆ | ಅಪನೆ |
| | ಉಪ್ಪು | ಉಪು |
| | ಕಪ್ಪು | ಕಪು |
| | ಹಪ್ಪಳ | ಅಪಳ |

• ಬ್ಬ > ಬ

ಪದಮದ್ಯ ಪರಿಸರದಲ್ಲಿ 'ಬ್ಬ' ದ್ವಿತ್ವ ಧ್ವನಿ ಬದಲು 'ಬ' ಉಭಯೋಷ್ಟ್ಯ ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಹಬ್ಬ | ಹಬ |
| | ಗುಬ್ಬಿ | ಗುಬಿ |
| | ಗೊಬ್ಬರ | ಗೊಬರ |
| | ತಬ್ಬಲಿ | ತಬಲಿ |
| | ಕಬ್ಬು | ಕಬು |
| | ಒಬ್ಬ | ಒಬ |

• ವ್ವ > ವ

ಪದಮದ್ಯ ಪರಿಸರದಲ್ಲಿ 'ವ್ವ' ದ್ವಿತ್ವ ಧ್ವನಿ ಬದಲು 'ವ' ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾತ್ರ ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಅವ್ವ | ಅವ |
| | ದೆವ್ವ | ದೆವ |
| | ಕವ್ವ | ಕವ |
| | ಓಬವ್ವ | ಒಬವ |

• ಲ್ಲ > ಲ

ಪದಮಧ್ಯ ಪರಿಸರದಲ್ಲಿ 'ಲ್ಲ' ಸಂಯುಕ್ತ ವ್ಯಂಜನದ ಬದಲು 'ಲ' ವ್ಯಂಜನ ಧ್ವನಿಯನ್ನು ಬರೆಯುತ್ತಾರೆ. ಈ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಬೆಲ್ಲ | ಬೆಲ |
| | ಗೆಲ್ಲು | ಗೆಲು |
| | ಕಲ್ಲು | ಕಲು |
| | ಇಲ್ಲ | ಇಲ್ಲ |
| | ಹಲ್ಲಿ | ಅಲ |
| | ಪಲ್ಲವಿ | ಪಲವಿ |
| | ನಲ್ಲಿ | ನಲಿ |

■ ವಿಜಾತಿ ಒತ್ತಕ್ಷರಗಳನ್ನು ಬರೆಯುವಾಗ ಉಂಟಾಗುವ ಸಮಸ್ಯೆಗಳು

• ಪೂರ್ಣ ಪ್ರಮಾಣದಲ್ಲಿ ಬರೆಯುವ ವಿಜಾತಿ ಒತ್ತಕ್ಷರಗಳು

ವಿಜಾತಿ ಒತ್ತಕ್ಷರಗಳು ಪದಾಂತ್ಯದಲ್ಲಿ ಬಂದಾಗ ಅಂತಹ ಒತ್ತಕ್ಷರವನ್ನು ಶಿಥಿಲಗೊಳಿಸಿ ಪೂರ್ಣ ಪ್ರಮಾಣದಲ್ಲಿ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಎಲ್ಲಾ ತರಗತಿಯ ಮಕ್ಕಳಲ್ಲಿ ಕಂಡುಬರುತ್ತದೆ. ಅಂತಹ ಕೆಲ ಉದಾಹರಣೆಗಳನ್ನು ಈ ಕೆಳಗಿನಂತೆ ನೋಡಬಹುದು.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಲಗ್ನ | ಲಗನ |
| | ಮಗ್ನ | ಮಗನ |

| | |
|---|---|
| ಖಡ್ಗ | ಕಡುಗ |
| ಭಕ್ತ | ಬಕುತ |
| ರಕ್ತ | ರಕುತ |
| ಜನ್ಮ | ಜನುಮ |
| ಆತ್ಮ | ಅತಮ |
| ಪರ್ವ | ಪರುವ |
| ಗರ್ವ | ಗರುವ |
| ಪತ್ರ | ಪತರ |
| ಮಿತ್ರ | ಮಿತರ |

• **ಮಹಾಪ್ರಾಣ ಒತ್ತಕ್ಷರದ ಬದಲು ಅಲ್ಪಪ್ರಾಣ ಒತ್ತಕ್ಷರ ಬಳಕೆ ಮಾಡುವ ವಿಜಾತಿ ಒತ್ತಕ್ಷರಗಳು**

ಪದಾದಿ ಹಾಗೂ ಪದಮದ್ಯ ಪರಿಸರದಲ್ಲಿ ಬರುವ ವಿಜಾತಿ ಮಹಾಪ್ರಾಣ ಒತ್ತಕ್ಷರದ ಬದಲಿಗೆ ಅಲ್ಪಪ್ರಾಣ ಒತ್ತಕ್ಷರ ಬಳಕೆ ಮಾಡಿ ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾತ್ರ ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಸ್ಥಳ | ಸ್ತಳ |
| | ಷಷ್ಠಿ | ಸಸ್ಟಿ |
| | ದೃಷ್ಟಿ | ದ್ರುಸ್ಟಿ |

• **ಲೋಪಮಾಡಿ ಬರೆಯುವ ವಿಜಾತಿ ಒತ್ತಕ್ಷರಗಳು**

ಪದಾದಿ, ಪದಮದ್ಯ ಹಾಗೂ ಪದಾಂತ್ಯದಲ್ಲಿ ಬರುವ ವಿಜಾತಿ ಒತ್ತಕ್ಷರಗಳನ್ನು ಲೋಪಮಾಡಿ ಬರೆಯುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| | ಬರಹರೂಪ | ಮಕ್ಕಳು ಬರೆಯುವ ರೂಪ |
|---|---|---|
| ಉದಾ | ಗಯ್ಯಾಲ್ | ಗಯಲ್ |
| | ಅಯ್ಯಾ | ಅಯ |
| | ಶ್ರವಣ | ಸವಣ |
| | ಧ್ರುವ | ದುವ |
| | ಶ್ರಮ | ಶಮ |

| | |
|---|---|
| ಶ್ಲೋಕ | ಸೊಕ |
| ಶ್ಲೇಷ | ಸೇಸ |
| ಪ್ಲೇಗು | ಪೆಗು |
| ನ್ಯಾಯ | ನಾಯ |
| ಮುಖ್ಯ | ಮುಖ |
| ಧ್ವಜ | ದಜ |
| ಸಂಗ್ರಹ | ಸಗರಹ |

**ವಿಶ್ಲೇಷಣೆ**

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಮಕ್ಕಳು ಒತ್ತಕ್ಷರ ಬರೆಯುವಾಗ ಮಾಡುವ ಪ್ರಮುಖ ವ್ಯತ್ಯಾಸ ಅಥವಾ ಸಮಸ್ಯೆಗಳಿಗೆ ಕಾರಣಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

* ಒತ್ತಕ್ಷರಗಳ ಬಗ್ಗೆ ಸರಿಯಾಗಿ ಗ್ರಹಿಕೆಯಾಗದಿರುವುದು.
* ಮೂಲಾಕ್ಷರ ಹಾಗೂ ಒತ್ತಕ್ಷರಗಳ ಬಗ್ಗೆ ಸ್ಪಷ್ಟ ಪರಿಕಲ್ಪನೆ ಮಕ್ಕಳಿಗೆ ಸರಿಯಾಗಿ ಮೂಡಿಸದಿರುವುದು.
* ಬೋಧಕರು ಮಕ್ಕಳಿಗೆ ಒತ್ತಕ್ಷರಗಳನ್ನು ಸರಿಯಾಗಿ ಕಲಿಸದಿರುವುದು.
* ಸಜಾತಿ, ವಿಜಾತಿ ಹಾಗೂ ವಿಭಿನ್ನ ಒತ್ತಕ್ಷರಗಳ ಪರಿಕಲ್ಪನೆ ಹಾಗೂ ಬಳಕೆ ಬಗ್ಗೆ ಮಕ್ಕಳು ತಿಳಿಯದಿರುವುದು.
* ಮಕ್ಕಳಿಗೆ ಇರುವ ಅನಾರೋಗ್ಯ, ಅನಾಸಕ್ತಿ, ದೈಹಿಕ ಶ್ರಮದಿಂದಾಗಿ
* ಶಾಲೆ ಮತ್ತು ಮನೆಯಲ್ಲಿ ಮಕ್ಕಳ ಗೃಹಪಾಠವನ್ನು ಸರಿಯಾಗಿ ನೋಡದಿರುವುದು ಇತ್ಯಾದಿ ಕಾರಣಗಳಿಂದಾಗಿ ಈ ತೆರನಾದ ವ್ಯತ್ಯಾಸ ಮಾಡಿ ಓದಿರಬಹುದು ಎನ್ನಲಾಗಿದೆ.

## ಅಧ್ಯಾಯ ೭

# ವಾಕ್ಯರಚನೆಯ ದೋಷಗಳು

ಅರ್ಥಪೂರ್ಣ ಪದಗಳ ಸಮುಚ್ಚಯವೇ ವಾಕ್ಯವಾಗಿದೆ. ವಾಕ್ಯವು ಭಾಷೆಯ ಅತ್ಯಂತ ದೊಡ್ಡ ಘಟಕವಾಗಿದೆ. ಒಂದು ವಾಕ್ಯರಚನೆಯಲ್ಲಿ ಧ್ವನಿ → ಪ್ರಕೃತಿ → ಪದ → ಸಮಾಸಪದಗಳು ಸೇರಿ ವಾಕ್ಯ ರೂಪುಗೊಳ್ಳುತ್ತದೆ. ವಾಕ್ಯ ರಚನೆಯಲ್ಲಿ ಪ್ರಾರಂಭ ಮತ್ತು ಅಂತ್ಯಗೊತ್ತಾಗುತ್ತದೆ. ಅಲ್ಲದೆ ಪ್ರತಿಯೊಂದು ವಾಕ್ಯವು ತನ್ನದೆ ಆದ ಅರ್ಥವನ್ನು ಒಳಗೊಂಡಿರುತ್ತದೆ. ವಾಕ್ಯದ ಅರ್ಥವನ್ನು ತಿಳಿಯಲು ಎರಡು ವಿಧಾನಗಳಿವೆ. ಒಂದು ಪದದಿಂದ ಪದಕ್ಕೆ ಅರ್ಥ ಗ್ರಹಿಸುತ್ತಾ ವಾಕ್ಯದ ಅರ್ಥ ತಿಳಿಯುವುದು. ಇನ್ನೊಂದು ವಾಕ್ಯದ ಅರ್ಥವನ್ನು ಗ್ರಹಿಸಿ ಪದಗಳ ಅರ್ಥ ತಿಳಿಯುವುದು. ಒಂದು ವಾಕ್ಯದಲ್ಲಿ ಪದಗಳಿರುತ್ತವೆ ಅಲ್ಲದೆ ಸಣ್ಣ ವಾಕ್ಯವು ಇರುತ್ತದೆ. ಇವುಗಳ ನಡುವೆ ಪದಗುಚ್ಚವಿರುತ್ತದೆ. ಹೀಗೆ ವಾಕ್ಯದಲ್ಲಿ ಪದಗಳಿಗಿರುವ ಸಂಬಂಧವನ್ನು ವಾಕ್ಯಾತ್ಮಕ ಸಂಬಂಧ ಎನ್ನಲಾಗಿದೆ. ಉದಾ : ಶಂಕರನು ಮನೆಯಲ್ಲಿದ್ದ ಹಸುವನ್ನು ಊರಿನ ಪಕ್ಕದ ಕಾಡಿಗೆ ಅಟ್ಟಿದನು.

ಗುಂಪಿನಲ್ಲಿ ಒಳಗುಂಪುಗಳು ಹೇಗೆ ಇರುತ್ತವೆಯೋ ಹಾಗೆಯೇ ವಾಕ್ಯದಲ್ಲಿ ಹಲವಾರು ಪದಗುಚ್ಚಗಳಿರುತ್ತವೆ. ಆ ಪದಗುಚ್ಚಗಳಿಂದ ವಾಕ್ಯ ರಚನೆಯಾಗುತ್ತದೆ. ವಾಕ್ಯದ ಕೊನೆಯ ಪದವು ವಾಕ್ಯ ರಚನೆಯನ್ನು ನಿಯಂತ್ರಿಸುತ್ತದೆ. ಅಲ್ಲದೆ ವಾಕ್ಯದಲ್ಲಿ ಪದಗುಚ್ಚಗಳು ತಮ್ಮದೇ ಆದ ಒಳಗುಂಪನ್ನು ಹೊಂದಿರುತ್ತವೆ. ಜೊತೆಗೆ ಪದ ಸಮುಚ್ಚಯವು ತನ್ನದೇ ಆದ ಅರ್ಥವನ್ನು ಹೊಂದಿರುತ್ತದೆ. ಒಂದೇ ಒಂದು ಪದ ಪದಸಮುಚ್ಚಯವಾಗಬಹುದು ಅಥವಾ ಅದಕ್ಕಿಂತ ಹೆಚ್ಚಾಗಿ ಇರಬಹುದು. ಅವುಗಳಿಗೆ ಮಿತಿಯಿಲ್ಲ. ಒಂದಕ್ಕಿಂತ ಹೆಚ್ಚು ಪದಗಳಿದ್ದಾಗ ಕೊನೆಯ ಪದ, ಪದಸಮುಚ್ಚಯದ ಶಿರವಾಗಿರುತ್ತದೆ. ಶಿರ ಪ್ರತಿ ಪದಗುಚ್ಚದ ಪ್ರತಿನಿಧಿಯಾಗಿ ಕೆಲಸ ಮಾಡುತ್ತದೆ.

ಉದಾ: ನಾನು ಬೆಳಿಗ್ಗೆ ಗುಲ್ಬರ್ಗಾದಿಂದ ಎಕ್ಸ್‌ಪ್ರೆಸ್ ಬಸ್ಸಿನಲ್ಲಿ ಬಂದೆ.

ಕನ್ನಡದಲ್ಲಿ ಕರ್ತೃರಹಿತ ಪದ ಅಥವಾ ವಾಕ್ಯ ಇರುತ್ತವೆ. ಅಲ್ಲದೆ ಕರ್ಮ ಪದವಿಲ್ಲದ ವಾಕ್ಯಗಳು ಇರುತ್ತವೆ. ಒಂದು ವಾಕ್ಯದಲ್ಲಿ 'ವಿಷಯ' ಮತ್ತು 'ಕ್ರಿಯೆ' ಎಂಬ ಎರಡು ಅಂಶಗಳಿರಲೇಬೇಕು. ಕನ್ನಡದಲ್ಲಿ ಮೂರು ವಿಧದ ವಾಕ್ಯಗಳನ್ನು ನೋಡಬಹುದು.

೧. ನಾಮಪದ ಸಮುಚ್ಚಯ

೨. ಕ್ರಿಯಾಪದ ಸಮುಚ್ಚಯ

೩. ಗುಣಪದ ಸಮುಚ್ಚಯ

**ವಾಕ್ಯರಚನೆ ನಿಯಮ**

ಕನ್ನಡದಲ್ಲಿ ನಾಮಪದ ಸಮುಚ್ಚಯ ಮತ್ತು ಕ್ರಿಯಾಪದ ಸಮುಚ್ಚಯಗಳು ವಾಕ್ಯದಲ್ಲಿ ಇರಲೇಬೇಕು. ಒಂದಕ್ಕಿಂತ ಹೆಚ್ಚು ನಾಮಪದಗಳಿರುವ ವಾಕ್ಯರಚನೆಯನ್ನು ಕನ್ನಡದಲ್ಲಿ ಕಾಣಬಹುದು.

ಉದಾ: ಅವನು ಜಾಣ ಹುಡುಗ.

ವಾಕ್ಯಾತ್ಮಕ ಸಂಬಂಧವನ್ನು ಸೂಚಿಸುವುದಕ್ಕೆ ಅಂತರ್ಗಾಮಿ (ವಿಭಕ್ತಿ) ಪ್ರತ್ಯಯಗಳು ಸಹಾಯಕವಾಗಿರುತ್ತವೆ. ಜೊತೆಗೆ ವಾಕ್ಯದಲ್ಲಿ ವಿಭಕ್ತಿ ಪ್ರತ್ಯಯಗಳು ಅರ್ಥ ವ್ಯತ್ಯಾಸವನ್ನು ಉಂಟುಮಾಡುತ್ತವೆ. ವಾಕ್ಯದಲ್ಲಿ ಕ್ರಿಯಾಪದವು ಮುಖ್ಯವಾಗಿರುತ್ತದೆ. ಕನ್ನಡ ಕ್ರಿಯಾಪದದಲ್ಲಿ ಮೂರು ಪ್ರಕಾರಗಳಿವೆ.

೧ ಧಾತು ೨. ಆಖ್ಯಾತ ಪ್ರತ್ಯಯ ೩. ಕಾಲ

ಕ್ರಿಯಾಪದದಲ್ಲಿರುವ ಈ ಪ್ರತ್ಯಯಗಳು ಕರ್ತೃವಿನೊಂದಿಗೆ ಸಂಬಂಧ ಹೊಂದಿರುವುದರಿಂದ ಕನ್ನಡದ ವಾಕ್ಯ ರಚನೆಯು ವಿಶೇಷವಾದ ಲಕ್ಷಣವನ್ನು ಹೊಂದಿದೆ. ಶಾಲೆಗಳಲ್ಲಿ ಶಿಕ್ಷಕರು ಮಕ್ಕಳಿಗೆ ವಾಕ್ಯರಚನೆಯ ರೀತಿ ನೀತಿಗಳನ್ನು ತಿಳಿಸಬೇಕು. ಈ ಹಂತದಲ್ಲಿ ಮಕ್ಕಳು ವಾಕ್ಯಗಳನ್ನು ಓದುವಾಗ ಅಸ್ಪಷ್ಟತೆ ಕಂಡುಬರುತ್ತದೆ. ಅಲ್ಲದೆ ವಾಕ್ಯದಲ್ಲಿರುವ ಅಲ್ಪವಿರಾಮ, ಪೂರ್ಣವಿರಾಮ ಇತ್ಯಾದಿ ಲೇಖನ ಚಿಹ್ನೆಗಳನ್ನು ಗುರುತಿಸದೆ ಓದುವುದು ಕಂಡುಬರುತ್ತದೆ. ಹ್ರಸ್ವ ದೀರ್ಘಸ್ವರ ಹಾಗೂ ಅಲ್ಪಪ್ರಾಣ, ಮಹಾಪ್ರಾಣ ಅಕ್ಷರಗಳನ್ನು, ಒತ್ತಕ್ಷರಗಳನ್ನು ಶಿಥಿಲಗೊಳಿಸಿ ಓದುವುದನ್ನು ಸಹ ಕಾಣಬಹುದು. ಕರ್ತೃ, ಕರ್ಮ ಹಾಗೂ ಕ್ರಿಯಾಪದಗಳನ್ನು ಬಳಸುವಾಗಲೂ ಸಹ ಹಲವು ತೆರನಾದ ವ್ಯತ್ಯಾಸವನ್ನು ಮಾಡುತ್ತವೆ. ಇಂತಹ ಹಲವಾರು ಸಮಸ್ಯೆಗಳನ್ನು ಗುರುತಿಸಿ ಸಾಧ್ಯವಾದ ಕಡೆಯಲ್ಲಿ ಕಾರಣ ತಿಳಿದು ಪರಿಹಾರ ನೀಡಬೇಕು. ಜೊತೆಗೆ ಮಕ್ಕಳಿಗೆ ವ್ಯಾಕರಣಾಂಶಗಳನ್ನು

ತಿಳಿಸಿಕೊಡಬೇಕಾಗುತ್ತದೆ. ಮಕ್ಕಳಿಗೆ ವಾಕ್ಯದಲ್ಲಿ ಕರ್ತೃ, ಕರ್ಮ, ಕ್ರಿಯೆ ಪದಗಳನ್ನು ಕ್ರಮಬದ್ಧವಾಗಿ ಹೇಗೆ ಬರೆಯಬೇಕು, ಪ್ರತ್ಯಯಗಳನ್ನು ಹೇಗೆ ಬಳಸಬೇಕು ಎಂಬುದನ್ನು ತಿಳಿಸಬೇಕು. ಮಕ್ಕಳಿಗೆ ಸರಳವಾದ ವಾಕ್ಯರಚನೆಯ ಅಭ್ಯಾಸವನ್ನು ಮಾಡಿಸಲು ಶಾಲೆಯಲ್ಲಿ ಭಾಷಾ ಶಿಕ್ಷಕ ವಾಕ್ಯರಚನೆಗಾಗಿ ಹಲವಾರು ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕಾಗುತ್ತದೆ.

ಪ್ರಸ್ತುತ ಅಧ್ಯಾಯನದಲ್ಲಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳು ವಾಕ್ಯರಚನೆ ಮಾಡುವಲ್ಲಿ ಎದುರಿಸುವ ಸಮಸ್ಯೆಗಳನ್ನು ಕುರಿತು ಚರ್ಚಿಸಲಾಗಿದೆ. ವಾಕ್ಯರಚನೆಯ ಸಮಸ್ಯೆಗಳನ್ನು ಗುರುತಿಸಲು ಮಕ್ಕಳಿಗೆ ವಾಕ್ಯರಣಾಂಶಗಳ ಬಗ್ಗೆ ಹಲವಾರು ಚಟುವಟಿಕೆಗಳನ್ನು ನೀಡಿದೆ. ಜೊತೆಗೆ ಮಕ್ಕಳಿಂದ ಸ್ವಂತವಾಕ್ಯ ರಚನೆ ಮಾಡಿಸಲಾಗಿದೆ. ಶಾಲೆಯ ಬಗ್ಗೆ, ಹಸುವಿನ ಬಗ್ಗೆ ಇತ್ಯಾದಿ ಅಂಶಗಳನ್ನು ಮಕ್ಕಳನ್ನು ಬರೆಸಲಾಗಿದೆ. ಅಲ್ಲದೆ ಧ್ವನಿ ಮುದ್ರಣದಲ್ಲಿ ಮುದ್ರಣ ಮಾಡಿಕೊಂಡು ಮಕ್ಕಳು ವಾಕ್ಯರಚನೆಯಲ್ಲಿ ಎದುರಿಸುವ ಸಮಸ್ಯೆಗಳನ್ನು ಗುರುತಿಸಲಾಗಿದೆ. ಸಾಧ್ಯವಾದ ಕಡೆಯಲ್ಲಿ ಕಾರಣ ತಿಳಿದು ವಿಶ್ಲೇಷಣೆ ಮಾಡಲಾಗಿದೆ. ಮಕ್ಕಳಲ್ಲಿ ಕಂಡುಬರುವ ಹಲವು ವಾಕ್ಯರಚನೆಯ ಸಮಸ್ಯೆಗಳನ್ನು ಈ ಕೆಳಗಿನಂತೆ ವಿಂಗಡಣೆ ಮಾಡಿಕೊಂಡು ಚರ್ಚಿಸಲಾಗಿದೆ.

೧. ಕರ್ತೃ, ಕರ್ಮ, ಕ್ರಿಯಾಪದಗಳನ್ನು ಸರಿಯಾದ ಕ್ರಮದಲ್ಲಿ ಬಳಸದೆ ಇರುವುದು.

೨. ನಾಮಪದ ಮತ್ತು ಕ್ರಿಯಾಪದಗಳಲ್ಲಿ ಮಾಡುವ ವ್ಯತ್ಯಾಸ.

೩. ಒಂದು ಪ್ರತ್ಯಯಕ್ಕೆ ಬೇರೊಂದು ಪ್ರತ್ಯಯ ಬಳಸಿ ವಾಕ್ಯರಚನೆ ಮಾಡುವುದು.

I. ವಿಭಕ್ತಿ ಪ್ರತ್ಯಯ ಬಳಕೆಯಲ್ಲಿನ ವ್ಯತ್ಯಾಸಗಳು

II. ಕಾಲ ಪ್ರತ್ಯಯ ಬಳಕೆಯಲ್ಲಿನ ವ್ಯತ್ಯಾಸಗಳು

III. ವಚನ ಪ್ರತ್ಯಯ ಬಳಕೆಯಲ್ಲಿನ ವ್ಯತ್ಯಾಸಗಳು

IV. ಲಿಂಗ ಪ್ರತ್ಯಯ ಬಳಕೆಯಲ್ಲಿನ ವ್ಯತ್ಯಾಸಗಳು

೪. ಸುಲಭ ಪ್ರತ್ಯಯಗಳನ್ನು ಬಳಸುವುದು

೫. ಆಡು ಮಾತಿನಲ್ಲಿ ಬರೆಯುವುದು

**೧. ಕರ್ತೃ, ಕರ್ಮ, ಕ್ರಿಯಾಪದಗಳನ್ನು ಸರಿಯಾದ ಕ್ರಮದಲ್ಲಿ ಬಳಸದೆ ಇರುವುದು**

ಉತ್ತಮ ವಾಕ್ಯವೆನಿಸಿಕೊಳ್ಳಲು ವಾಕ್ಯದಲ್ಲಿ ಕರ್ತೃ, ಕರ್ಮ, ಕ್ರಿಯಾಪದಗಳು ಸರಿಯಾದ ಕ್ರಮದಲ್ಲಿ ಬಳಕೆಯಾಗಿರಬೇಕು. ಆಗ ಆ ವಾಕ್ಯಕ್ಕೆ ಒಂದು ಅರ್ಥವಿರುತ್ತದೆ. ಇಂತಹ ವಾಕ್ಯವನ್ನು

ಬರೆಯುವಾಗ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳು ಕರ್ತೃ, ಕರ್ಮ, ಕ್ರಿಯಾಪದಗಳನ್ನು ಸರಿಯಾದ ಕ್ರಮದಲ್ಲಿ ಬಳಸದೇ ಬರೆಯುತ್ತಾರೆ. ಉದಾಹರಣೆಗೆ ಮಕ್ಕಳಿಗೆ ಹಲವಾರು ವಾಕ್ಯಗಳನ್ನು ನೀಡಿ ಆ ವಾಕ್ಯಗಳನ್ನು ಸರಿಪಡಿಸಿ ಓದಿರಿ ಹಾಗೂ ಸರಿಪಡಿಸಿ ಬರೆಯಿರಿ ಎಂದಾಗ ಈ ತೆರನಾದ ವ್ಯತ್ಯಾಸವು ಎಲ್ಲಾ ತರಗತಿಯ ಕೆಲವು ಮಕ್ಕಳಲ್ಲಿ ಕಂಡುಬರುತ್ತದೆ.

ಉದಾಹರಣೆ :

| ಬರಹ ರೂಪ | ಮಕ್ಕಳು ಬಳಸುವ ರೂಪ |
|---|---|
| ಹುಡುಗರು ಆಟವನ್ನು ಆಡುತ್ತಾರೆ. | ಆಟವನ್ನು ಆಡುತ್ತಾರೆ ಹುಡುಗರು. |
| ರಾಮನು ಹಣ್ಣನ್ನು ತಿಂದನು. | ಹಣ್ಣನ್ನು ತಿಂದ ರಾಮ. |
| ಪಂಪನು ವಿಶಿಷ್ಟವಾದ ಕೃತಿಯನ್ನು ಬರೆದನು. | ವಿಶಿಷ್ಟವಾದ ಕೃತಿಯನ್ನು ಪಂಪನು ಬರೆದನು. |
| ಹುಡುಗ ಶಾಲೆಗೆ ಹೋದನು. | ಶಾಲೆಗೆ ಹೋದನು ಹುಡುಗ. |

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಮಕ್ಕಳು ಕರ್ತೃ, ಕರ್ಮ, ಕ್ರಿಯಾಪದಗಳನ್ನು ಪಲ್ಲಟಮಾಡಿ ಬರೆದಿರುವುದು ಕಂಡುಬರುತ್ತದೆ. ಈ ರೀತಿ ಮಾಡುವಾಗ ಕೆಲವು ಸಲ ವಾಕ್ಯದ ಅರ್ಥಕ್ಕೆ ಯಾವುದೇ ಕುಂದು ಬರಲಾರದು. ಆದರೆ ಕೆಲವು ವೇಳೆ ವಾಕ್ಯದ ಅರ್ಥಕ್ಕೆ ಕುಂದು ಬರುತ್ತದೆ. ಇದಕ್ಕೆ ಕಾರಣ ಮಕ್ಕಳು ಹಚ್ಚುವ ಪ್ರತ್ಯಯಗಳಾಗಿವೆ. ಇದಕ್ಕೆ ಕಾರಣ ಮಕ್ಕಳಿಗೆ ಕರ್ತೃ, ಕರ್ಮ, ಕ್ರಿಯಾಪದಗಳ ಬಗ್ಗೆ ಪರಿಕಲ್ಪನೆ ಇಲ್ಲದಿರುವುದೇ ಆಗಿದೆ. ಹಾಗಾಗಿ ಈ ತೆರನಾಗಿ ವ್ಯತ್ಯಾಸಮಾಡಿ ಬರೆದಿರಬಹುದು.

### ೨. ನಾಮಪದ ಮತ್ತು ಕ್ರಿಯಾಪದಗಳಲ್ಲಿ ಮಾಡುವ ವ್ಯತ್ಯಾಸ

ಒಂದು ವಾಕ್ಯದಲ್ಲಿ ನಾಮಪದ ಹಾಗೂ ಕ್ರಿಯಾಪದಗಳೆರಡು ಇರುತ್ತವೆ. ಈ ನಾಮಪದ ಹಾಗೂ ಕ್ರಿಯಾಪದಗಳು ಪರಸ್ಪರ ಸಂಬಂಧವನ್ನು ಹೊಂದಿರುತ್ತವೆ. ಮಕ್ಕಳು ಈ ಸಂಬಂಧವನ್ನು ತಿಳಿಯದೆ ನಾಮಪದಕ್ಕೆ ತಕ್ಕಂತೆ ಅಥವಾ ಹೊಂದಿಕೆಯಾಗುವ ಪ್ರತ್ಯಯವನ್ನು ಕ್ರಿಯಾಪದದಲ್ಲಿ ಬಳಸುವುದು ಬಹಳಷ್ಟು ವಿರಳವಾಗಿದೆ. ಈ ತೆರನಾದ ವ್ಯತ್ಯಾಸವು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| ಬರಹ ರೂಪ | ಮಕ್ಕಳು ಬಳಸುವ ರೂಪ |
|---|---|
| ರವಿ ಬೇಗನೆ ಮಲಗುತ್ತಾನೆ | ರವಿ ಬೇಗನೆ ಮಲಗುತ್ತದೆ |
| ರಾಧ ಪೆನ್ನಿನಿಂದ ಬರೆದಳು | ರಾಧ ಪೆನ್ನಿನಿಂದ ಬರೆದವು |

| | |
|---|---|
| ನಾವು ಪ್ರವಾಸ ಮಾಡಿದೆವು | ನಾವು ಪ್ರವಾಸ ಮಾಡಿದೆ |
| ಗಿರಿ ಕಾಶಿಗೆ ಹೋಗಿ ನೆಲಸಿದ | ಗಿರಿ ಕಾಶಿಗೆ ಹೋಗಿ ನೆಲಸಿತು |

ಈ ಮೇಲಿನ ಉದಾಹರಣೆಯನ್ನು ನೋಡಿದಾಗ ಮಕ್ಕಳು ನಾಮಪದಕ್ಕೆ ಸರಿಯಾದ ಕ್ರಿಯಾಪದವನ್ನು ಬಳಸದೆ ಇರುವುದನ್ನು ಗುರುತಿಸಬಹುದು. ಇದಕ್ಕೆ ಕಾರಣ ಮಕ್ಕಳಿಗೆ ವಾಕ್ಯರಚನೆಯಲ್ಲಿ ನಾಮಪದ ಮತ್ತು ಕ್ರಿಯಾಪದಗಳ ಜೋಡಣೆ ಬಗ್ಗೆ ಪರಿಕಲ್ಪನೆ ಇಲ್ಲದಿರುವುದರಿಂದ ಈ ತೆರನಾಗಿ ವ್ಯತ್ಯಾಸಮಾಡಿ ಬರೆದಿರಬಹುದು.

**೩. ಒಂದು ಪ್ರತ್ಯಯಕ್ಕೆ ಬೇರೊಂದು ಪ್ರತ್ಯಯ ಬಳಸಿ ವಾಕ್ಯರಚನೆ ಮಾಡುತ್ತಾರೆ.**

ಮಕ್ಕಳು ವಾಕ್ಯರಚನೆ ಮಾಡುವಾಗ ಒಂದು ಪ್ರತ್ಯಯಕ್ಕೆ ಬೇರೊಂದು ಪ್ರತ್ಯಯ ಬಳಸಿ ವಾಕ್ಯರಚನೆ ಮಾಡುತ್ತಾರೆ. ಈ ರೀತಿಯ ವ್ಯತ್ಯಾಸವನ್ನು ಎಲ್ಲಾ ತರಗತಿಯ ಮಕ್ಕಳಲ್ಲಿ ಕಾಣಬಹುದು.

| ಬರಹ ರೂಪ | ಮಕ್ಕಳು ಬಳಸುವ ರೂಪ |
|---|---|
| ಹಸು ಹಾಲನ್ನು ಕೊಡುತ್ತದೆ | ಹಸು ಹಾಲು ಕೊಡುತೆ |
| ಜೋಳ, ರಾಗಿ, ಭತ್ತ ಬೆಳೆಯುತ್ತವೆ | ಜೋಳ, ರಾಗಿ, ಭತ್ತ ಬೆಳೆದವು |
| ನಾನು ಬೆಳಿಗ್ಗೆ ಆರುಗಂಟೆಗೆ ಏಳುತ್ತೇನೆ | ನಾನು ಬೆಳಿಗ್ಗೆ ಆರುಗಂಟೆಗೆ ಏಳುತ್ತೇವೆ |
| ಚಂದ್ರ ಹಾಡನ್ನು ಹೇಳಿದ | ಚಂದ್ರ ಹಾಡು ಹೇಳಿದ |

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಮಕ್ಕಳು ಒಂದು ಪ್ರತ್ಯಯಕ್ಕೆ ಇನ್ನೊಂದು ಪ್ರತ್ಯಯ ಹಚ್ಚುವುದು ಕಂಡುಬರುತ್ತದೆ. ಕಾರಣ ಮಕ್ಕಳಿಗೆ ಪ್ರತ್ಯಯಗಳ ಬಗ್ಗೆ ತಿಳುವಳಿಕೆ ಇಲ್ಲದಿರುವುದರಿಂದ ಈ ತೆರನಾಗಿ ವ್ಯತ್ಯಾಸ ಮಾಡಿರಬಹುದು.

- **ವಿಭಕ್ತಿ ಪ್ರತ್ಯಯಗಳ ಬಳಕೆಯಲ್ಲಿನ ವ್ಯತ್ಯಾಸಗಳು**

ಮಕ್ಕಳು ಮಾತನಾಡುವಾಗ ಹಾಗೂ ವಾಕ್ಯರಚನೆ ಮಾಡುವಾಗ ವಿಭಕ್ತಿ ಪ್ರತ್ಯಯಗಳನ್ನು ಒಮ್ಮೊಮ್ಮೆ ಪಲ್ಲಟ ಗೊಳಿಸಿ ಬರೆಯುವುದು ಕಂಡುಬರುತ್ತದೆ. ಈ ತೆರನಾದ ವ್ಯತ್ಯಾಸವು ಎಲ್ಲಾ ತರಗತಿಯ ಮಕ್ಕಳಲ್ಲಿ ಕಂಡುಬರುತ್ತದೆ.

**ಪ್ರಥಮ ವಿಭಕ್ತಿಗೆ ದ್ವಿತೀಯಾ ಅಥವಾ ಲೋಪಮಾಡಿ ಮಾಡುವುದು.**

ಮಕ್ಕಳು ಓದುವಾಗ ಹಾಗೂ ಬರೆಯುವಾಗ ಪ್ರಥಮ ವಿಭಕ್ತಿ ಪ್ರತ್ಯಯವನ್ನು ಲೋಪ ಮಾಡುವುದು, ಇಲ್ಲದೆ ಪ್ರಥಮ ವಿಭಕ್ತಿ ಪ್ರತ್ಯಯಕ್ಕೆ ಬದಲಾಗಿ ದ್ವಿತೀಯ ವಿಭಕ್ತಿ ಪ್ರತ್ಯಯವನ್ನು ಬಳಸುವುದು ಕಂಡುಬರುತ್ತದೆ. ಈ ವ್ಯತ್ಯಾಸವನ್ನು ಎಲ್ಲಾ ತರಗತಿಯ ಮಕ್ಕಳು ಮಾಡುತ್ತಾರೆ.

| ಬರಹ ರೂಪ | ಮಕ್ಕಳು ಬಳಸುವ ರೂಪ |
|---|---|
| ರಾಣಿಯು ಕೆಲಸ ಮಾಡುತ್ತಾಳೆ | ರಾಣಿ ಕೆಲಸ ಮಾಡುತ್ತಾಳೆ |
| ರಾಜು ಓದುತ್ತಾನೆ | ರಾಜ ಓದುತ್ತಾನೆ |
| ಆಕಳು ಹಾಲು ಕರೆಯಿತು | ಆಕಳು ಹಾಲನ್ನು ಕರೆಯಿತು |
| ಗೀತಾ ಹಾಡು ಹಾಡಿದಳು | ಗೀತಾ ಹಾಡನ್ನು ಹಾಡಿದಳು |

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಮಕ್ಕಳು ಈ ರೀತಿ ಪ್ರಥಮ ವಿಭಕ್ತಿಯನ್ನು ಲೋಪಮಾಡುವುದು ಹಾಗೂ ದ್ವಿತೀಯ ವಿಭಕ್ತಿ ಬಳಸುವುದಕ್ಕೆ ಕಾರಣ. ಕನ್ನಡದಲ್ಲಿ ಪ್ರಥಮ ವಿಭಕ್ತಿಯು ಪ್ರಕೃತಿಯೊಂದಿಗೆ ಸೇರಿರುವುದರಿಂದ ಮಕ್ಕಳು ಅದನ್ನು ಗಮನಿಸದೇ ಈ ತೆರನಾದ ವ್ಯತ್ಯಾಸ ಮಾಡಬಹುದಾಗಿದೆ.

- **ದ್ವಿತೀಯ ವಿಭಕ್ತಿಗೆ – ಚತುರ್ಥಿ**

ಮಕ್ಕಳು ಓದುವಾಗ ಬರೆಯುವಾಗ ದ್ವಿತೀಯ ವಿಭಕ್ತಿಗೆ ಬದಲಾಗಿ ಚತುರ್ಥಿ ವಿಭಕ್ತಿಯನ್ನು ಬಳಸುತ್ತಾರೆ. ಈ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಮಕ್ಕಳು ಮಾಡುತ್ತಾರೆ. ಉದಾಹರಣೆ

| ಬರಹ ರೂಪ | ಮಕ್ಕಳು ಬಳಸುವ ರೂಪ |
|---|---|
| ನಾಯಿಯನ್ನು ಕರೆ | ನಾಯಿಗೆ ಕರೆ |
| ಮಗುವನ್ನು ಹೊಡೆದಳು | ಮಗುವಿಗೆ ಹೊಡೆದಳು |
| ಅವನು ಊರನ್ನು ಸೇರಿದನು | ಅವನು ಊರಿಗೆ ಸೇರಿದನು |
| ಸೀತೆಯನ್ನು ನೋಡು | ಸೀತೆಗೆ ನೋಡು |

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಈ ತೆರನಾದ ವ್ಯತ್ಯಾಸಕ್ಕೆ ಕಾರಣ ನಮ್ಮ ಭಾಷೆಯ ವೈಶಿಷ್ಟ್ಯವಾಗಿದೆ. ಅಂದರೆ ಮಾನವೇತರ ಜೀವಿಗಳಾದ ನಾಯಿ, ಹಸು, ಎಮ್ಮೆ ಮುಂತಾದ ಪ್ರಾಣಿಗಳನ್ನು ಮಾನವ ಜೀವಿಗಳಂತೆ ಸಂಬೋಧಿಸುವುದು ವಿಶಿಷ್ಟ ಹಾಗೆಯೇ ಮಾನವ ಜೀವಿಗಳಾದ ತಂದೆ, ತಾಯಿ, ಅಣ್ಣ, ತಮ್ಮ, ಅಕ್ಕ, ತಂಗಿ ಮುಂತಾದ ಬಂಧುತ್ವ ಸೂಚಕ ಪದಗಳನ್ನು ಮಾನವೇತರ ಜೀವಿಗಳಂತೆ ಸಂಬೋಧಿಸುವುದರಿಂದ ದ್ವಿತೀಯ ವಿಭಕ್ತಿ ಪ್ರತ್ಯಯಕ್ಕೆ ಬದಲಾಗಿ ಚತುರ್ಥಿ ವಿಭಕ್ತಿ ಬಳಸುವುದು ಕಂಡುಬರುತ್ತದೆ.

- **ತೃತೀಯ ವಿಭಕ್ತಿಗೆ – ಸಪ್ತಮಿ ವಿಭಕ್ತಿ ಬಳಕೆ**

ಮಕ್ಕಳು ಓದುವಾಗ ಬರೆಯುವಾಗ ತೃತೀಯ ವಿಭಕ್ತಿಗೆ ಬದಲಾಗಿ ಸಪ್ತಮಿ ವಿಭಕ್ತಿಯನ್ನು

ಬಳಸುವುದು ಕಂಡುಬರುತ್ತದೆ. ಈ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಮಕ್ಕಳು ಮಾಡುತ್ತಾರೆ. ಉದಾಹರಣೆ :

| ಬರಹ ರೂಪ | ಮಕ್ಕಳು ಬಳಸುವ ರೂಪ |
|---|---|
| ಕಣ್ಣಿನಿಂದ ನೋಡಿದೆವು | ಕಣ್ಣಲ್ಲಿ ನೋಡಿದೆವು |
| ಕೈಯಿಂದ ಮಾಡಿದ ಒಡವೆ | ಕೈಯಲ್ಲಿ ಮಾಡಿದ ಒಡವೆ |
| ಪೆನ್ನಿನಿಂದ ಬರೆದೆ | ಪೆನ್ನಲ್ಲಿ ಬರೆದೆ |
| ಕಾಲಿನಿಂದ ತೆಗೆದು | ಕಾಲಲ್ಲಿ ತೆಗೆದು |

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಈ ತೆರನಾದ ವ್ಯತ್ಯಾಸವು ಕನ್ನಡದಲ್ಲಿ ಸಾಮಾನ್ಯವಾಗಿರುವುದರಿಂದ ಮಕ್ಕಳು ಆಡುಮಾತನ್ನು ಬಳಸುವಾಗ ಈ ತೆರೆನಾಗಿ ವ್ಯತ್ಯಾಸಮಾಡುವುದು ಕಂಡುಬರುತ್ತದೆ.

ಇದೇ ರೀತಿಯಾಗಿ ತೃತೀಯ ವಿಭಕ್ತಿ ಬದಲಾಗಿ ದ್ವಿತೀಯ ವಿಭಕ್ತಿಯನ್ನು, ಪಂಚಮಿ ವಿಭಕ್ತಿ ಬದಲಾಗಿ ಚತುರ್ಥಿ ವಿಭಕ್ತಿ, ಸಪ್ತಮಿ ವಿಭಕ್ತಿಗೆ ಬದಲಾಗಿ ಚತುರ್ಥಿ ಹಾಗೂ ಪ್ರಥಮ ವಿಭಕ್ತಿಗಳನ್ನು ಬಳಸುವುದು ಕಂಡುಬರುತ್ತದೆ.

- **ಕಾಲ ಪ್ರತ್ಯಯಗಳು**

ಮಕ್ಕಳು ವಾಕ್ಯರಚನೆಯಲ್ಲಿ ಬರುವ ನಾಮಪದಗಳಿಗೆ ಹತ್ತುವ ವಿಭಕ್ತಿ ಪ್ರತ್ಯಯಗಳಲ್ಲಿ ವ್ಯತ್ಯಾಸಮಾಡುವಂತೆ ಕ್ರಿಯಾಪದಕ್ಕೆ ಹತ್ತುವ ಕಾಲಪ್ರತ್ಯಯಗಳಲ್ಲಿಯೂ ವ್ಯತ್ಯಾಸವನ್ನು ಉಂಟುಮಾಡುತ್ತಾರೆ. ಮುಖ್ಯವಾಗಿ ವರ್ತಮಾನ ಕಾಲದ ಸ್ಥಳದಲ್ಲಿ ಭವಿಷ್ಯತ್ ಕಾಲದ ಪ್ರತ್ಯಯ ಬಳಕೆ, ಭವಿಷ್ಯತ್ ಕಾಲದ ಸ್ಥಳದಲ್ಲಿ ವರ್ತಮಾನ ಕಾಲದ ಪ್ರತ್ಯಯ, ವರ್ತಮಾನ, ಭವಿಷ್ಯತ್ ಕಾಲಗಳ ಸ್ಥಳಗಳಲ್ಲಿ ಭೂತಕಾಲದ ಪ್ರತ್ಯಯ, ಭೂತಕಾಲದ ಸ್ಥಳದಲ್ಲಿ ವರ್ತಮಾನ / ಭವಿಷ್ಯತ್ ಕಾಲದ ಪ್ರತ್ಯಯವನ್ನು ಬಳಸುತ್ತಾರೆ. ಈ ಒಂದು ವ್ಯತ್ಯಾಸವನ್ನು ಎಲ್ಲಾ ತರಗತಿಯ ಮಕ್ಕಳಲ್ಲಿ ಕೆಲವು ವಿದ್ಯಾರ್ಥಿಗಳು ಮಾಡುತ್ತಾರೆ. ಉದಾಹರಣೆ :

| ಬರಹ ರೂಪ | ಮಕ್ಕಳು ಬಳಸುವ ರೂಪ |
|---|---|
| ಶಂಕರನು ಶಾಲೆಗೆ ಹೋಗುವವನು. | ಶಂಕರನು ಶಾಲೆಗೆ ಹೋಗುತ್ತಾನೆ. |
| ಸೂರ್ಯ ಉದಯವಾಗುವನು. | ಸೂರ್ಯ ಉದಯವಾಗುತ್ತಾನೆ. |
| ಈ ರಸ್ತೆ ಬಳ್ಳಾರಿಗೆ ಹೋಗುತ್ತದೆ. | ಈ ರಸ್ತೆ ಬಳ್ಳಾರಿಗೆ ಹೋಗುವುದು. |

| | |
|---|---|
| ಮುಂದಿನ ವಾರ ಪರೀಕ್ಷೆ ನಡೆಯುತ್ತದೆ. | ಮುಂದಿನ ವಾರ ಪರೀಕ್ಷೆ ನಡೆಯುವುದು. |
| ಸತ್ತ ಮೇಲೆ ಸ್ವರ್ಗ ಕಂಡನು | ಸತ್ತ ಮೇಲೆ ಸ್ವರ್ಗ ಕಾಣುತ್ತಾನೆ/ಕಾಣುವನು. |
| ಮನೆಗೆ ಈಗ ಹೊರಟೆನು. | ಮನೆಗೆ ಈಗ ಹೊರಡುತ್ತೇನೆ. |
| ಆಗ ಕಮಲಳಿಗೆ ರವಿ ಹೀಗೆ ಹೇಳುವನು/ಹೇಳುತ್ತಾನೆ. | ಆಗ ಕಮಲಳಿಗೆ ರವಿ ಹೀಗೆ ಹೇಳಿದನು. |

ಈ ಮೇಲಿನ ಉದಾಹರಣೆಗಳನ್ನು ನೋಡಿದಾಗ ಮಕ್ಕಳಿಗೆ ಕಾಲಪ್ರತ್ಯಯಗಳ ಬಗ್ಗೆ ಪರಿಕಲ್ಪನೆ ಇಲ್ಲದ ಕಾರಣ ಈ ತೆರನಾಗಿ ವ್ಯತ್ಯಾಸ ಮಾಡಿ ಬಳಸುತ್ತಾರೆ ಎನ್ನಲಾಗಿದೆ.

• **ವಚನ ವಿಚಾರ**

ಕನ್ನಡ ಭಾಷೆಯಲ್ಲಿ ವಸ್ತು, ಪ್ರಾಣಿ ಅಥವಾ ವ್ಯಕ್ತಿ ಮೊದಲಾದ ನಾಮಪದಗಳ ಸಂಖ್ಯೆಯನ್ನು ಸೂಚಿಸುವುದಕ್ಕೆ ವಚನ ಎಂದು ಕರೆಯುವರು. ಮಕ್ಕಳು ಏಕವಚನದ ಪದಗಳನ್ನು ಬಹುವಚನದ ಪದಗಳನ್ನಾಗಿ, ಬಹುವಚನದ ಪದಗಳನ್ನು ಏಕವಚನ ಪದಗಳನ್ನಾಗಿ ಓದುವ ಮತ್ತು ಬರೆಯುವ ವ್ಯತ್ಯಾಸವನ್ನು ಎಲ್ಲಾ ತರಗತಿಯ ಮಕ್ಕಳು ಮಾಡುತ್ತಾರೆ. ಉದಾಹರಣೆ :

| ಬರಹ ರೂಪ | ಮಕ್ಕಳು ಬಳಸುವ ರೂಪ |
|---|---|
| ಬೆಕ್ಕು ಹಾಲನ್ನು ಕುಡಿಯಿತು. | ಬೆಕ್ಕು ಹಾಲನ್ನು ಕುಡಿದವು. |
| ಅವರು ಶಾಲೆಗೆ ಬಂದರು. | ಅವರು ಶಾಲೆಗೆ ಬಂದ. |
| ರಾಣಿಯರು ಅರಮನೆಗೆ ಹೋದರು. | ರಾಣಿ ಅರಮನೆಗೆ ಹೋದರು. |
| ಹುಡುಗ ಆಟ ಆಡಿದನು. | ಹುಡುಗರು ಆಟ ಆಡಿದನು. |
| ಹಸು ಹಾಲನ್ನು ಕರೆಯುತ್ತದೆ. | ಹಸುಗಳು ಹಾಲನ್ನು ಕರೆಯುತ್ತದೆ. |

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಮಕ್ಕಳು ಏಕವಚನಕ್ಕೆ ಬಹುವಚನ, ಬಹುವಚನಕ್ಕೆ ಏಕವಚನಗಳನ್ನು ಬಳಸುವುದು ಕಂಡುಬರುತ್ತದೆ. ಅದು ನಾಮಪದಗಳಷ್ಟೆ ಅಲ್ಲ ಕ್ರಿಯಾಪದಗಳಲ್ಲಿಯೂ ವಚನಗಳನ್ನು ಬಹಳಷ್ಟು ವ್ಯತ್ಯಾಸಮಾಡಿ ಓದುವುದು ಮತ್ತು ಬರೆಯುವುದು ಕಂಡುಬರುತ್ತದೆ. ಈ ತೆರೆನಾದ ವ್ಯತ್ಯಾಸಕ್ಕೆ ಕಾರಣ ಮಕ್ಕಳಿಗೆ ವಚನಗಳ ಪರಿಕಲ್ಪನೆ ಇಲ್ಲದೆ ಇರುವುದರಿಂದ ಈ ತೆರೆನಾದ ವ್ಯತ್ಯಾಸಮಾಡಬಹುದು ಎನ್ನಲಾಗಿದೆ.

• **ಲಿಂಗ ವಿಚಾರ**

ಜ್ಞಾನ ಅಥವಾ ಅಜ್ಞಾನದ ಕುರುಹಿಗೆ 'ಲಿಂಗ' ಎನ್ನುವರು. ಜ್ಞಾನದ ಕುರುಹು ಮನುಷ್ಯರಿಗೆ

ಮಾತ್ರ ಉಂಟು. ಕಾರಣ 'ಲಿಂಗ' ಶಬ್ದವನ್ನು ಮನುಷ್ಯ ವರ್ಗಕ್ಕೆ ಮಾತ್ರ ಕನ್ನಡದಲ್ಲಿ ಅನ್ವಯಿಸಲಾಗುತ್ತದೆ. ಮನುಷ್ಯರಲ್ಲಿ ಗಂಡಸರನ್ನು ಸೂಚಿಸುವ ನಾಮಪದಗಳಿಗೆ 'ಪುಲ್ಲಿಂಗ'ವೆಂದು, ಹೆಂಗಸರನ್ನು ಸೂಚಿಸುವ ನಾಮಪದಗಳಿಗೆ 'ಸ್ತ್ರೀಲಿಂಗ'ವೆಂದು, ಮನುಷ್ಯರನ್ನು ಬಿಟ್ಟು ಉಳಿದ ಪ್ರಾಣಿವರ್ಗ ಹಾಗೂ ನಿರ್ಜೀವ ವಸ್ತುಗಳನ್ನು ಸೂಚಿಸುವ ನಾಮಪದಗಳಿಗೆ 'ನಪುಂಸಕಲಿಂಗ'ವೆಂದು ಕರೆಯುತ್ತೇವೆ. ಮಕ್ಕಳು ವಾಕ್ಯರಚನೆ ಮಾಡುವಾಗ ಸ್ತ್ರೀಲಿಂಗಕ್ಕೆ ಪುಲ್ಲಿಂಗವನ್ನು, ಪುಲ್ಲಿಂಗಕ್ಕೆ ಸ್ತ್ರೀಲಿಂಗವನ್ನು ಹಾಗೂ ಪುಲ್ಲಿಂಗ–ಸ್ತ್ರೀಲಿಂಗಕ್ಕೆ ನಪುಂಸಕಲಿಂಗವನ್ನು ಹೆಚ್ಚಾಗಿ ಬಳಸಿ ಓದುವುದು ಹಾಗೂ ಬರೆಯುವುದನ್ನು ಮಾಡುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಕ್ರಿಯಾಪದದಲ್ಲಿ ಹೆಚ್ಚು ಮಾಡುತ್ತಾರೆ. ಇದನ್ನು ಎಲ್ಲಾ ತರಗತಿಯ ಬಹಳಷ್ಟು ಮಾಡುತ್ತಾರೆ. ಉದಾಹರಣೆ :

| ಬರಹ ರೂಪ | ಮಕ್ಕಳು ಬಳಸುವ ರೂಪ |
|---|---|
| ಸೀತಾ ಶಾಲೆಗೆ ಹೋಗುತ್ತಾಳೆ. | ಸೀತಾ ಶಾಲೆಗೆ ಹೋಗುತ್ತಾನೆ. |
| ರಾಮನು ಹಣ್ಣನ್ನು ತಿಂದನು. | ರಾಮ ಹಣ್ಣು ತಿಂದ. |
| ರಾಧಾ ಹಾಡನ್ನು ಹಾಡಿದಳು. | ರಾಧಾ ಹಾಡನ್ನು ಹಾಡಿತು. |
| ಭೀಮ ದ್ರೌಪದಿಯನ್ನು ಗೆದ್ದು ತಂದನು. | ಭೀಮ ದ್ರೌಪದಿಯನ್ನು ಗೆದ್ದು ತಂದಳು. |

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಮಕ್ಕಳು ಲಿಂಗ ಪ್ರತ್ಯಯಗಳಲ್ಲಿ ಮಾಡುವ ವ್ಯತ್ಯಾಸವನ್ನು ಗುರುತಿಸಬಹುದು. ಮಕ್ಕಳಿಗೆ ಲಿಂಗ ಪ್ರತ್ಯಯಗಳ ಪರಿಕಲ್ಪನೆ ಸರಿಯಾಗಿ ತಿಳಿಯದ ಕಾರಣ ಈ ತೆರನಾಗಿ ವ್ಯತ್ಯಾಸಮಾಡಿ ಓದುವುದು ಬರೆಯುವುದು ಕಂಡುಬರುತ್ತದೆ. ಇದಕ್ಕೆ ನಿದರ್ಶನವೆಂದರೆ ಮಕ್ಕಳಿಗೆ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗಗಳ ಪದಗಳ ಗುಂಪನ್ನು ಕೊಟ್ಟು ಅವುಗಳ ವರ್ಗೀಕರಣ ಮಾಡಿರಿ ಎಂದು ಹೇಳಿದಾಗಲೂ ಬಹಳಷ್ಟು ಮಕ್ಕಳು ವರ್ಗೀಕರಣ ಮಾಡದೆ ಇರುವುದು ಕಂಡುಬರುತ್ತದೆ. ಇದರಿಂದ ಮಕ್ಕಳಿಗೆ ಲಿಂಗಗಳ ಬಗ್ಗೆ ಅಷ್ಟೊಂದು ಪರಿಕಲ್ಪನೆ ಇಲ್ಲವೆಂದು ತಿಳಿಯಬಹದು.

- **ಪ್ರತ್ಯಯಗಳನ್ನು ಹೆಚ್ಚು ಬಳಸುವುದು**

ಮಕ್ಕಳು ವಾಕ್ಯರಚನೆ ಮಾಡುವಾಗ ತಮಗೆ ಸುಲಭವಾದ ಪ್ರತ್ಯಯಗಳನ್ನು ಎಲ್ಲಾ ಕಡೆಯಲ್ಲೂ ಬಳಸುತ್ತವೆ. ಹೆಚ್ಚಾಗಿ 'ಅ' ಮತ್ತು 'ತೆ' ಪ್ರತ್ಯಯಗಳನ್ನು ಹೆಚ್ಚು ಬಳಸುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಮಕ್ಕಳು ಮಾಡುತ್ತಾರೆ. ಉದಾಹರಣೆ :

| ಬರಹ ರೂಪ | ಮಕ್ಕಳು ಬಳಸುವ ರೂಪ |
|---|---|
| ಹಸು ಹುಲ್ಲನ್ನು ತಿನ್ನುತ್ತದೆ. | ಹಸು ಹುಲ್ಲನ್ನು ತಿನ್ನುತ್ತೆ. |

| | |
|---|---|
| ಕಮಲ ಶಾಲೆಗೆ ಹೋಗುತ್ತಾಳೆ. | ಕಮಲ ಶಾಲೆಗೆ ಹೋಗುತ್ತೆ. |
| ರವಿ ಮನೆಗೆ ಹೋಗುತ್ತಾನೆ. | ರವಿ ಮನೆಗೆ ಹೋದ. |
| ರಾಣಿ ಊಟವನ್ನು ಮಾಡುತ್ತಾಳೆ. | ರಾಣಿ ಊಟವನ್ನು ಮಾಡುತ್ತೆ. |
| ಸೂರ್ಯ ಮುಳುಗುತ್ತಾನೆ. | ಸೂರ್ಯ ಮುಳುಗಿದ. |

ಈ ಮೇಲಿನ ಉದಾಹರಣೆಗಳನ್ನು ನೋಡಿದಾಗ ಕಾಲ, ಲಿಂಗ, ವಚನ, ಪ್ರತ್ಯಯಗಳ ಬಗ್ಗೆ ಅಷ್ಟೊಂದು ಪರಿಕಲ್ಪನೆ ಇಲ್ಲದಿರುವುದರಿಂದ ತಮಗೆ ಸರಳವೆನಿಸಿದ ಪ್ರತ್ಯಯಗಳನ್ನು ಬಳಸುವುದು ಕಂಡು ಬರಬಹುದು ಎನ್ನಲಾಗಿದೆ.

ಒಟ್ಟಿನಲ್ಲಿ ಹಿರಿಯ ಪ್ರಾಥಮಿಕ ಶಾಲೆಯ ಮಕ್ಕಳಿಗೆ ವಾಕ್ಯರಚನೆಯನ್ನು ಅಷ್ಟೊಂದು ಪರಿಣಾಮಕಾರಿಯಾಗಿ ಮಾಡುವ ಸಾಮರ್ಥ್ಯವಿಲ್ಲವೆಂದು ಇದರಿಂದ ತಿಳಿದುಬರುತ್ತದೆ. ಅಷ್ಟೆ ಅಲ್ಲ ಮಕ್ಕಳು ಸಂಪೂರ್ಣ ವಾಕ್ಯರಚನೆ ಮಾಡಲು ಆಗದೆ ಅಪೂರ್ಣ ವಾಕ್ಯರಚನೆಯನ್ನು ಮಾಡುವುದು ಕಂಡುಬರುತ್ತದೆ. ಮಕ್ಕಳು ಮಾಡುವ ವಾಕ್ಯರಚನೆಯಲ್ಲಿ ಸರಿಯಾದ ಪ್ರತ್ಯಯ ಬಳಸದೇ ಇರುವುದು ಕಂಡುಬರುತ್ತದೆ. ಮಕ್ಕಳು ಸ್ವಂತವಾಕ್ಯ ರಚನೆ ಮಾಡುವಾಗ ಹಲವಾರು ಸಮಸ್ಯೆಗಳು ಎದುರಾಗುತ್ತವೆ. ಇದಕ್ಕೆ ಕಾರಣ ಮಕ್ಕಳಲ್ಲಿ ವ್ಯಾಕರಣದ ಪರಿಕಲ್ಪನೆ ಇಲ್ಲದೆ ಇರುವುದು ಹಾಗೂ ವಾಕ್ಯರಚನೆ ಮಾಡುವ ಸಾಮರ್ಥ್ಯವಿಲ್ಲದೆ ಇರುವುದಾಗಿರಬಹುದು.

**ಪರಿಹಾರಗಳು:**

೧. ಮಕ್ಕಳ ವಾಕ್ಯರಚನೆಯನ್ನು ಗಮನಿಸಿದಾಗ ಬಹಳಷ್ಟು ಮಕ್ಕಳು ವಾಕ್ಯರಚನೆ ಮಾಡುವ ಸಾಮರ್ಥ್ಯ ಪಡೆಯದೆ ಇರುವುದು ಕಂಡುಬರುತ್ತದೆ. ಹಾಗಾಗಿ ಭಾಷಾ ಶಿಕ್ಷಕರು ಮಕ್ಕಳಲ್ಲಿ ವಾಕ್ಯ ರಚನೆಯ ಸಾಮರ್ಥ್ಯವನ್ನು ಬೆಳೆಸಬೇಕು. ಮೊದಲು ಮಕ್ಕಳಿಗೆ ಸರಳ ವಾಕ್ಯಗಳನ್ನು ಓದಿಸುವುದು, ಬರೆಸುವುದನ್ನು ಮಾಡಬೇಕು. ನಂತರ ಮಕ್ಕಳಿಗೆ ಕ್ರಿಯೆ ನಡೆಯುವ ಚಿತ್ರಗಳನ್ನು ತೋರಿಸಿ ವಾಕ್ಯರಚನೆ ಮಾಡುವಂತೆ ಪ್ರೇರೆಪಿಸಬೇಕು. ವಾಕ್ಯರಚನೆ ಅಭ್ಯಾಸವು ನಿರಂತರವಾಗಿ ನಡೆಯುವಂತೆ ಶಿಕ್ಷಕ ಮಕ್ಕಳ ಕಡೆ ವೈಯಕ್ತಿಕ ಗಮನ ನೀಡಬೇಕು.

೨. ಭಾಷಾ ಶಿಕ್ಷಕರು ಮಕ್ಕಳಿಗೆ ವಾಕ್ಯದಲ್ಲಿ ಬರುವ ವ್ಯಾಕರಣಾಂಶಗಳ ಬಗ್ಗೆ ಸ್ಪಷ್ಟವಾದ ಪರಿಕಲ್ಪನೆಗಳನ್ನು ಮೂಡಿಸಬೇಕು.

೩. ಶಿಕ್ಷಕರು ತರಗತಿಯಲ್ಲಿ ಆಯಾ ತರಗತಿಗೆ ಅನುಗುಣವಾಗಿ ಮೊದಲು ಇಡೀಯಾಗಿ ವ್ಯಾಕರಣದ ಬಗ್ಗೆ ಪರಿಕಲ್ಪನೆ ಮೂಡಿಸಿ, ನಂತರ ಆಯಾ ಪಾಠದಲ್ಲಿನ ವ್ಯಾಕರಣವನ್ನು

ಬಿಡಿ ಬಿಡಿಯಾಗಿ ತಿಳಿಸಿ ಹೇಳಬೇಕು. ಅಲ್ಲದೆ ನಿತ್ಯ ಜೀವನದಲ್ಲಿ ಅದರ ಬಳಕೆಯನ್ನು ಮಕ್ಕಳಿಗೆ ತಿಳಿಸಿ ಹೇಳಬೇಕು.

೪. ಮಕ್ಕಳಿಗೆ ಶಿಕ್ಷಕರು ಲಿಂಗಗಳ ಬಗ್ಗೆ ಸ್ಪಷ್ಟ ಪರಿಕಲ್ಪನೆ ಮೂಡಿಸಬೇಕು. ಸ್ತ್ರೀಲಿಂಗ, ಪುಲ್ಲಿಂಗ, ನಪುಂಸಕ ಲಿಂಗಗಳ ಬಗ್ಗೆ ಚಿತ್ರಪದಗಳನ್ನು ತೋರಿಸಿ ಮನವರಿಕೆ ಮಾಡಬೇಕು. ಪ್ರತ್ಯಯಗಳ ಬಳಕೆಯ ಬಗ್ಗೆ ತಿಳಿಸಬೇಕು.

೫. ಮಕ್ಕಳಿಗೆ ವಾಕ್ಯದಲ್ಲಿನ ನಾಮಪದ ಹಾಗೂ ಕ್ರಿಯಾಪದಗಳ ಪರಿಕಲ್ಪನೆ ಮೂಡಿಸಲು ಶಿಕ್ಷಕ ಮೊದಲಿಗೆ ನಾಮಪದ ಹಾಗೂ ಕ್ರಿಯಾಪದಗಳ ಬಗ್ಗೆ ತಿಳಿಸಬೇಕು. ಇವುಗಳಿಗೆ ಹತ್ತುವ ಪ್ರತ್ಯಯಗಳ ಬಗ್ಗೆ ಸರಿಯಾಗಿ ತಿಳಿಸಿ, ಸತತ ಅಭ್ಯಾಸ ಮಾಡಿಸಿ ವಾಕ್ಯದಲ್ಲಿ ಅವುಗಳನ್ನು ಬಳಸಿ ಬರೆಯುವಂತೆ ಮಾಡಬೇಕು.

೬. ವಾಕ್ಯದಲ್ಲಿ ಬರುವ ಕರ್ತೃ, ಕರ್ಮ, ಕ್ರಿಯಾಪದಗಳ ಬಗ್ಗೆ ಸ್ಪಷ್ಟತೆ ಮೂಡಿಸಬೇಕು. ವಾಕ್ಯದಲ್ಲಿ ಇವುಗಳ ಸ್ಥಾನ, ಅವುಗಳ ಮಹತ್ವವನ್ನು ತಿಳಿಸಬೇಕು.

೭. ಶಿಕ್ಷಕ ಮಗುವಿಗೆ ಪ್ರತ್ಯಯಗಳ ಬಗ್ಗೆ ಅರಿವು ಮೂಡಿಸಬೇಕು. ಅಂದರೆ ವಿಭಕ್ತಿ, ಲಿಂಗ, ವಚನ, ಕಾಲ ಇತ್ಯಾದಿ ಪ್ರತ್ಯಯಗಳ ಬಗ್ಗೆ ತಿಳಿಸಬೇಕು. ಅಲ್ಲದೆ ಯಾವ ಪ್ರತ್ಯಯಗಳು ಎಲ್ಲಿ ? ಹೇಗೆ? ಬಳಸಬೇಕು ಎಂಬುದರ ಬಗ್ಗೆ ತಿಳಿಸಿ ಅವುಗಳ ಬಳಕೆಯನ್ನು ಮಕ್ಕಳಿಂದಲೇ ಮಾಡಿಸಬೇಕು.

೮. ನಾಮಪದ, ಕ್ರಿಯಾಪದಗಳಿಗೆ ಯಾವ ಪ್ರತ್ಯಯ ಹತ್ತುತ್ತವೆ ಎಂಬುದರ ಬಗ್ಗೆ ತಿಳಿಸಿರಬೇಕು.

೯. ಕರ್ತೃ, ಕರ್ಮ, ಕ್ರಿಯಾಪದಗಳ ಬಳಕೆ ಮಾಡುವಾಗ

"ಕರ್ತೃ > ಕ್ರಿಯೆ

ಕರ್ಮ > ಕ್ರಿಯೆ

ಕರ್ತೃ > ಕರ್ಮ"

ಪದಗಳಿಗೆ ಹೊಂದಿಕೆಯಾಗುವ ಪ್ರತ್ಯಯಗಳ ಬಗ್ಗೆ ತಿಳಿಸಿ ಸತತ ಅಭ್ಯಾಸ ಮಾಡಿಸಬೇಕು.

೧೦. ಶಿಕ್ಷಕರ ಧೋರಣೆ ಇಲ್ಲಿ ಬಹಳ ಮುಖ್ಯವಾಗಿದೆ. ಶಿಕ್ಷಕ ಮಕ್ಕಳಿಗೆ ವಾಕ್ಯರಚನೆ ಮಾಡುವ ಸಾಮರ್ಥ್ಯವನ್ನು ವಿವಿಧ ಚಟುವಟಿಕೆಗಳ ಮೂಲಕ ಬೆಳೆಸಬೇಕು.

ಅಧ್ಯಾಯ - ೮

# ಸಮಾರೋಪ

ಮಾನವ ಜನಾಂಗವನ್ನು ಇತರೆ ಪ್ರಾಣಿಗಳಿಂದ ಬೇರ್ಪಡಿಸಿರುವ ಪ್ರಮುಖ ಸಾಧನವಾದ ಭಾಷೆಯೆ ಮಾನವ ಸಂಪಾದಿಸಿಕೊಂಡಿರುವ ಅಮೂಲ್ಯವಾದ ಆಸ್ತಿ. ಭಾಷೆ ಕೇವಲ ಅಭಿವ್ಯಕ್ತಿ ಹಾಗೂ ಸಂಪರ್ಕ ಮಾಧ್ಯಮವಾಗಿರದೆ ಅದು ಸಮಾಜದ ಸಾಂಸ್ಕೃತಿಕ ಹಿನ್ನಲೆಯನ್ನು ಸಮಾಜದ ಬೆಳವಣಿಗೆಯನ್ನು ಪ್ರತಿಬಿಂಬಿಸುತ್ತದೆ. *ದಂಡಿ* ಹೇಳುವ ಹಾಗೆ 'ಅಶೇಷಭುವನತ್ರಯವೆ ಕಗ್ಗತ್ತಲಾಗಿ ಬಿಟ್ಟಿತು' ಎನ್ನುವ ಉಕ್ತಿಯನ್ನು ನೋಡಿದರೆ ಭಾಷೆ ಇಲ್ಲದ ಪ್ರಪಂಚವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಜಗತ್ತಿನಲ್ಲಿ ಸಾವಿರಾರು ಭಾಷೆಗಳಿವೆ. ಅಲ್ಲದೇ ಪ್ರತಿಯೊಂದು ದೇಶ, ಜಾತಿ, ಜನಾಂಗಗಳು ತನ್ನದೇ ಆದ ಒಂದು ಮಾತೃಭಾಷೆಯನ್ನು ಹೊಂದಿವೆ. ಮಾತೃಭಾಷೆಯ ಕಲಿಕೆ ಸಹಜವಾಗಿ ಸ್ವಾಭಾವಿಕವಾಗಿ ಆದರೂ ಅದನ್ನು ಶಿಸ್ತಿಗೆ ಒಳಪಡಿಸಿ ಶಾಲಾ ಆವರಣದಲ್ಲಿ ವ್ಯವಸ್ಥಿತವಾಗಿ ಕಲ್ಪಿಸಬೇಕಾಗುತ್ತದೆ. ಏಕೆಂದರೆ ಮಾತೃಭಾಷೆಯ ಕಲಿಕೆ ಇತರೆ ವಿಷಯಗಳ ಕಲಿಕೆಗೆ ಪೂರಕವಾಗಿರುವುದರಿಂದ ಅದನ್ನು ಪ್ರಾಥಮಿಕ ಹಂತದಲ್ಲಿ ಸಮರ್ಪಕವಾಗಿ ಕಲಿಸಬೇಕಾಗುತ್ತದೆ.

ಮಾತೃಭಾಷೆ ಬೋಧನೆ ಮತ್ತು ಕಲಿಕೆಗೆ ಸರ್ಕಾರ ಹಿಂದಿನಿಂದಲೂ ಹಲವಾರು ಯೋಜನೆಗಳನ್ನು ಹಾಕಿಕೊಂಡುಬಂದಿದ್ದರೂ ಮಕ್ಕಳಿಗೆ ಭಾಷೆಯನ್ನು ಸಮರ್ಪಕವಾಗಿ ಕಲಿಸಲು ಆಗುತ್ತಿಲ್ಲ. ಕಲಿಕೆಯ ಬಗ್ಗೆ ಅಧ್ಯಾಯನಗಳು ನಡೆದಿರುವುದು ತುಂಬಾ ವಿರಳ. ಅದರಲ್ಲೂ ಮಾತೃಭಾಷೆ ಬೋಧನೆ ಹಾಗೂ ಕಲಿಕೆಯ ಬಗೆಗಿನ ಅಧ್ಯಯನಗಳು ತುಂಬಾ ಕಡಿಮೆ ಎನ್ನಬಹುದು. ಮಾತೃಭಾಷೆ ಬೋಧನೆ ಹಾಗೂ ಕಲಿಕೆಯಲ್ಲಿ ಇರುವ ಸಮಸ್ಯೆಗಳು ಹಿಂದಿನಿಂದಲೂ ಉಳಿದುಕೊಂಡು ಬಂದಿವೆ. ಕಲಿಕೆಯ ಸಮಸ್ಯೆಗಳು ಬಗೆಹರಿಯದ ಸಮಸ್ಯೆಗಳಾಗಿವೆ. ಅಂತಹ ಸಮಸ್ಯೆಗಳನ್ನು

ತೆಗೆದುಕೊಂಡು ಅಧ್ಯಯನ ಮಾಡಬೇಕಾಗಿದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಕನ್ನಡ ಕಲಿಕೆಯಲ್ಲಿ ಉಂಟಾಗುವ ಸಮಸ್ಯೆಗಳನ್ನು ಗುರುತಿಸುವ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ.

ದ್ವಿಭಾಷಿಕ ಹಾಗೂ ಬಹುಭಾಷಿಕ ಪರಿಸರದಲ್ಲಿ ಬೆಳದ ಮಕ್ಕಳು ಹಾಗೂ ಅನ್ಯ ಮಾತೃಭಾಷೆಯುಳ್ಳ ಮಕ್ಕಳು ಕನ್ನಡ ಕಲಿಯುವಾಗ ಹಲವಾರು ಸಮಸ್ಯೆಗಳನ್ನು ಎದುರುಸುತ್ತಾರೆ ಎಂಬುದು ಕೆಲ ಅಧ್ಯಯನಗಳಿಂದ ತಿಳಿದುಬಂದಿದೆ. ಕನ್ನಡ ಮಾತೃಭಾಷೆಯುಳ್ಳ ಹಾಗೂ ಕನ್ನಡ ಭಾಷಿಕ ಪರಿಸರದಲ್ಲಿ ಬೆಳೆದ ಮಕ್ಕಳು ಕನ್ನಡ ಕಲಿಯುವಾಗ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಾರೆ. ಆದರೆ ಅನ್ಯ ಭಾಷಿಕ ಮಕ್ಕಳು ಕನ್ನಡ ಕಲಿಯುವಾಗ ಉಂಟಾಗುವ ಸಮಸ್ಯೆಗಳ ಪ್ರಮಾಣಕ್ಕಿಂತ ಕಡಿಮೆ. ಅಂತಹ ಸಮಸ್ಯೆಗಳಲ್ಲಿ ಓದುವ ಹಾಗೂ ಬರವಣಿಗೆಯ ಸಮಸ್ಯೆಗಳನ್ನು ಈ ಅಧ್ಯಯನದಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಅಂತಹ ಸಮಸ್ಯೆಗಳಿಗೆ ಕಾರಣಗಳನ್ನು ತಿಳಿದು ವಿಶ್ಲೇಷಣೆ ಮಾಡಲಾಗಿದೆ.

ಭಾಷಾ ಕಲಿಕೆಯು ಇತರೆ ವಿಷಯಗಳ ಕಲಿಕೆಗಿಂತ ಸಂಕೀರ್ಣವಾಗಿದ್ದರು ಬಹಳ ಮಹತ್ವವೆನಿಸಿದೆ. ಭಾಷೆಯನ್ನು ಸಮರ್ಪಕವಾಗಿ ಕಲಿಸಲು ಭಾಷಾ ಕೌಶಲಗಳನ್ನು ಸಮರ್ಪಕವಾಗಿ ರೂಡಿಸಿಕೊಳ್ಳಬೇಕು. ಕಲಿಕೆಯು ಆಲಿಸುವಿಕೆಯ ಕೌಶಲದಿಂದ ಆರಂಭವಾಗುವುದರಿಂದ ಮಕ್ಕಳಲ್ಲಿ ಉತ್ತಮ ಆಲಿಸುವಿಕೆಯನ್ನು ಪದ ಸಂಪತ್ತಿನ ಜೊತೆಗೆ ಪದಗಳ ಅರ್ಥವನ್ನು ತಿಳಿಸಬೇಕಾಗುತ್ತದೆ. ಹೀಗೆ ಕೇಳುವ ಪದಗಳನ್ನು ಅರ್ಥಗಳನ್ನಾಗಿ ವ್ಯಾಖ್ಯಾನಿಸಿ ಸ್ವೀಕರಿಸುವ ಮಾನಸಿಕ ಕ್ರಿಯೆ ಆಲಿಸುವಿಕೆ ಆಗಿದೆ. ಎಲ್ಲಾ ಮಕ್ಕಳಲ್ಲಿ ಆಲಿಸುವ ಸಾಮರ್ಥ್ಯ ಏಕರೀತಿಯಾಗಿರದೆ ಭಿನ್ನವಾಗಿರುತ್ತದೆ. ಅವರವರ ಏಕಾಗ್ರತೆ, ಬುದ್ಧಿಭಾವಗಳ ಸಾಮರ್ಥ್ಯಕ್ಕನುಗುಣವಾಗಿ ಆಲಿಸಿ ಗ್ರಹಿಸುತ್ತಾರೆ. ಆಲಿಸುವಿಕೆಯ ಮುಖ್ಯ ಉದ್ದೇಶ ವಿಚಾರಗಳನ್ನು ತಿಳಿದುಕೊಂಡು ಪ್ರತಿಕ್ರಿಯೆ ನೀಡುವುದಾಗಿದೆ. ಕೇಳುವಿಕೆ ಮತ್ತು ಆಲಿಸುವಿಕೆಗೆ ಸಾಕಷ್ಟು ಅಂತರವಿದೆ. ಮಕ್ಕಳು ಕೇಳುವುದಕ್ಕಿಂತ ಆಲಿಸುವಂತೆ ಮಾಡುವುದು ಶಿಕ್ಷಕನ ಹೊಣೆಗಾರಿಕೆಯಾಗಿದೆ. ಹೆಚ್ಚು ಹೆಚ್ಚು ಆಲಿಸಿದ ಮಗು ಹೆಚ್ಚು ವಿಚಾರ ಶಕ್ತಿಯನ್ನು ಬೆಳೆಸಿಕೊಂಡು ಉತ್ತಮ ಮಾತುಗಾರನಾಗುತ್ತಾನೆ. ಅಲ್ಲದೆ ವಿಶ್ಲೇಷಣೆಯ ಗುಣವನ್ನು ಬೆಳೆಸಿಕೊಳ್ಳುತ್ತಾನೆ. ಶಿಕ್ಷಕ ಮಕ್ಕಳಲ್ಲಿ ಉತ್ತಮ ಆಲಿಸುವಿಕೆಯನ್ನು ಉಂಟುಮಾಡಬೇಕಾಗಿರುತ್ತದೆ. ಅದಕ್ಕಾಗಿ ವಿಚಾರಗಳನ್ನು ಆಲಿಸುವುದಕ್ಕಿಂತ ಮುಂಚೆ ಸೂಕ್ತ ಸೂಚನೆಗಳನ್ನು ಕೊಟ್ಟು ಪ್ರಚೋದಿಸುವುದು, ಪದ್ಯ ಸಂಭಾಷಣೆಗಳನ್ನು ಆಲಿಸುವಂತೆ ಮಾಡುವುದು. ಆಲಿಸುವುದಕ್ಕಾಗಿ ಪ್ರತ್ಯೇಕ ಭಾಷಾ ಚಟುವಟಿಕೆಗಳನ್ನು ಪರಿಚಯಿಸಿ ಅವುಗಳನ್ನು ಆಲಿಸಲು ಪ್ರತ್ಯೇಕ ಸಮಯವನ್ನು ನಿಗಧಿಪಡಿಸಬೇಕು.

ಭಾಷಾ ಕಲಿಕೆಯಲ್ಲಿ ಮಾತುಗಾರಿಕೆ ಕೌಶಲವು ಒಂದಾಗಿದೆ. ಶಿಕ್ಷಕ ಮಕ್ಕಳಲ್ಲಿ ಮಾತುಗಾರಿಕೆಯನ್ನು ಹೆಚ್ಚಿಸಲು ವಿಶೇಷವಾದ ಬೋಧನಾ ವಿಧಾನವನ್ನು ಅನುಸರಿಸಬೇಕಾಗುತ್ತದೆ. ಧ್ವನಿ ಏರಿಳಿತ,

ಸ್ವರಭಾರದೊಂದಿಗೆ ಸ್ಪಷ್ಟವಾಗಿ, ವೇಗವಾಗಿ, ನಿರರ್ಗಳವಾಗಿ ಮಾತುಗಾರಿಕೆಯನ್ನು ಬೋಧಿಸಿ ಕಲಿಸಬೇಕಾಗುತ್ತದೆ. ಮಾತುಗಾರಿಕೆಯನ್ನು ಬೆಳೆಸುವ ಹಲವಾರು ಭಾಷಾ ಚಟುವಟಿಕೆಗಳನ್ನು ತರಗತಿಯಲ್ಲಿ ಕೈಗೊಳ್ಳಬೇಕು.

ಭಾಷಾ ಕಲಿಕೆಯಲ್ಲಿ ಓದು ಅತ್ಯಂತ ಪರಿಣಾಮಕಾರಿಯಾದ ಕೌಶಲ್ಯವಾಗಿದೆ. ಲಿಪಿಯು ಧ್ವನಿಯಾಗಿ ಪರಿವರ್ತನೆಯಾಗುವುದನ್ನು ಸರಳವಾಗಿ ಓದುವಿಕೆ ಎಂದು ವ್ಯಾಖ್ಯಾನಿಸಬಹುದು. ಮುದ್ರಿತ ವಿಷಯವನ್ನು ಆ ಭಾಷೆಯ ಮೂಲಕ ಪ್ರವೇಶಿಸಿ ಅದರಲ್ಲಡಗಿರುವ ಅರ್ಥವನ್ನು, ಭಾವನೆಯನ್ನು ಗ್ರಹಿಸುವುದೇ ಓದು ಎನಿಸುವುದು. ಶಿಕ್ಷಕ ಮಕ್ಕಳಲ್ಲಿ ಉತ್ತಮ ಓದುಗಾರಿಕೆಯನ್ನುಂಟುಮಾಡಲು ಸಾಹಿತ್ಯದ ಪ್ರಕಾರಗಳಾದ ಕತೆ, ಕಾದಂಬರಿ, ಕವನ, ಕಾವ್ಯ, ನಾಟಕ, ದಿನಪತ್ರಿಕೆ, ಮಾಸಪತ್ರಿಕೆ, ನಗೆಹನಿ, ಲೇಖನ, ಪ್ರಬಂಧ, ಪತ್ರ ಇತ್ಯಾದಿ ಚಟುವಟಿಕೆಗಳನ್ನು ತರಗತಿಯಲ್ಲಿ ಹಮ್ಮಿಕೊಂಡು ಉತ್ತಮ ಓದುಗಾರರನ್ನಾಗಿ ಮಾಡಬೇಕು. ಅಲ್ಲದೆ ಮಾದರಿ ಓದನ್ನು ಓದಬೇಕು. ಧ್ವನಿ ಏರಿಳಿತ, ಸ್ವರಭಾರ, ಅಲ್ಪಪ್ರಾಣ, ಮಹಾಪ್ರಾಣ ಬಳಕೆಯೊಂದಿಗೆ ಸ್ಪಷ್ಟವಾಗಿ, ವೇಗವಾಗಿ, ಅರ್ಥಪೂರ್ಣವಾಗಿ, ನಿರರ್ಗಳವಾಗಿ ಓದಲು ಅಭ್ಯಾಸ ಮಾಡಿಸಬೇಕು. ಕಡಿಮೆ ಅವಧಿಯಲ್ಲಿ ಹೆಚ್ಚು ವಿಷಯವನ್ನು ವೇಗವಾಗಿ, ಸ್ಪಷ್ಟವಾಗಿ, ಎಲ್ಲರಿಗೂ ಅರ್ಥವಾಗುವಂತೆ ಓದಿದ ವಿದ್ಯಾರ್ಥಿಗಳನ್ನು ಗುರುತಿಸಿ ಪ್ರೋತ್ಸಾಹ ನೀಡಬೇಕು. ಹೀಗೆ ಹಲವಾರು ಚಟುವಟಿಕೆಗಳನ್ನು ಕೈಗೊಂಡು ಉತ್ತಮ ಓದುಗಾರರನ್ನಾಗಿ ಮಾಡಿದಾಗ ಓದುವಿಕೆಯಲ್ಲಿನ ಸಮಸ್ಯೆಗಳನ್ನು ಕಡಿಮೆ ಮಾಡಬಹುದು.

ಭಾಷೆ ಕಲಿಕೆಯಲ್ಲಿ ಬರವಣಿಗೆ ಕೌಶಲವು ಒಂದು. ಆಲೋಚನೆಗಳು, ಭಾವನೆಗಳು ಹಾಗೂ ಯಾವುದಾದರೊಂದು ವಿಷಯವನ್ನು ರೇಖಾ ವಿನ್ಯಾಸದ ಮೂಲಕ ಕ್ರಮಬದ್ಧವಾಗಿ ಜೋಡಿಸಿ ರೂಪಿಸುವುದಕ್ಕೆ ಬರವಣಿಗೆ ಎನ್ನಲಾಗಿದೆ. ಬರವಣಿಗೆಯಲ್ಲಿ ಕಣ್ಣು, ಮನಸ್ಸು, ಕೈಬೆರಳು ಒಂದಕ್ಕೊಂದು ಸಮನ್ವಯಗೊಂಡಿರಬೇಕು. ಆಗ ಮಾತ್ರ ಉತ್ತಮ ಬರವಣಿಗೆಯನ್ನು ರೂಪಿಸಲು ಸಾಧ್ಯ. ಕನ್ನಡ ಬರವಣಿಗೆಯು ಇತರೆ ಭಾಷೆಗಳಿಗಿಂತ ಅಂದವಾಗಿ ಸುಲಭವಾಗಿರುವುದಲ್ಲದೇ ಕನ್ನಡ ಭಾಷೆಯಲ್ಲಿ ಒಂದೊಂದು ಧ್ವನಿಗೂ ಒಂದೊಂದು ಪ್ರತ್ಯೇಕ ಲಿಪಿ ಚಿನ್ಹೆ ಇರುವುದರಿಂದ ಇದರ ಬರವಣಿಗೆಯನ್ನು ಕಲಿಸುವುದು ಭಿನ್ನವಾಗಿದೆ. ಶಿಕ್ಷಕ ಮಕ್ಕಳಿಗೆ ಬರವಣಿಗೆಯನ್ನು ಕಲಿಸುವಾಗ, ಅಕ್ಷರವನ್ನು ಕಲಿಸುವಾಗ, ಅಕ್ಷರವನ್ನು ಸರಿಯಾದ ಕ್ರಮದಲ್ಲಿ ತಪ್ಪಿಲ್ಲದಂತೆ ಕಲಿಸಬೇಕು. ಅಕ್ಷರಗಳನ್ನು ಜೋಡಿಸಿ ಅರ್ಥಪೂರ್ಣ ಪದಗಳನ್ನು ಬರೆಯುವಂತೆ ಮಾಡುವುದು, ತಪ್ಪಿಲ್ಲದಂತೆ ಸರಳ ವಾಕ್ಯ ಮಾಡುವುದು, ಸೂಕ್ತ ಲೇಖನ ಚಿನ್ಹೆಗಳನ್ನು ಬಳಸಿ ಬರೆಯುವುದು. ಬರೆಯುವಾಗ ಅಕ್ಷರಗಳನ್ನು ಗುಣಿತಾಕ್ಷರ ಒತ್ತಕ್ಷರಗಳಲ್ಲಿ ಆಗುವ ದೋಷ ಗುರುತಿಸಿ ತಿದ್ದಿ ಸರಿಪಡಿಸುವುದು ಶಿಕ್ಷಕನ ಕರ್ತವ್ಯವಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾದ ಓದಿನ ಹಾಗೂ ಬರವಣಿಗೆಯಲ್ಲಿನ ಸಮಸ್ಯೆಗಳೆಂದರೆ ಸ್ವರಗಳಲ್ಲಿ ಮುಖ್ಯವಾಗಿ ಹ್ರಸ್ವಸ್ವರಗಳನ್ನು ದೀರ್ಘಸ್ವರಗಳಾಗಿ ಮಾಡುವುದು. ಕೆಲ ಸ್ವರಗಳ ಬದಲಿಗೆ ವ್ಯಂಜನಗಳನ್ನು ಬಳಕೆ ಮಾಡುವುದು, ಸಂಧ್ಯಕ್ಷರಗಳಲ್ಲಿ ವ್ಯತ್ಯಾಸ ಮಾಡುವುದು, ಅನುಸ್ವರ ಹಾಗೂ ವಿಸರ್ಗಗಳನ್ನು ಲೋಪ ಮಾಡುವುದು. ವ್ಯಂಜನಗಳಲ್ಲಿ, ಮುಖ್ಯವಾಗಿ ಮಹಾಪ್ರಾಣ ಧ್ವನಿಗಳಿಗೆ ಬದಲಾಗಿ ಅಲ್ಪಪ್ರಾಣ ಧ್ವನಿಗಳ ಬಳಕೆ, ಅನುನಾಸಿಕ ಧ್ವನಿಗಳನ್ನು ವ್ಯತ್ಯಾಸ ಮಾಡುವುದು, ಪಾರ್ಶ್ವಿಕ ಹಾಗೂ ಊಷ್ಮ ಧ್ವನಿಗಳಲ್ಲಿನ ವ್ಯತ್ಯಾಸಗಳು, ಅರ್ಧಸ್ವರಗಳಲ್ಲಿನ ವ್ಯತ್ಯಾಸಗಳು ಇತ್ಯಾದಿ. ಸಮಸ್ಯೆಗಳು ಕಂಡುಬರುತ್ತವೆ. ಗುಣಿತಾಕ್ಷರ ಹಾಗೂ ಒತ್ತಕ್ಷರಗಳಲ್ಲಿಯೂ ಹಲವು ಬಗೆಯ ಸಮಸ್ಯೆಗಳನ್ನು ಗುರುತಿಸಲಾಗಿದೆ. ಇಲ್ಲಿ ಗುರುತಿಸಲಾದ ಸಮಸ್ಯೆಗಳಿಗೆ ಅಥವಾ ವ್ಯತ್ಯಾಸಗಳನ್ನು ನೋಡಿದಾಗ ಇವುಗಳಲ್ಲಿನ ಕೆಲ ವ್ಯತ್ಯಾಸಗಳನ್ನು ಸಮಸ್ಯೆಗಳು ಎನ್ನುವುದಕ್ಕಿಂತ ಅವು ಕನ್ನಡ ಭಾಷೆಯ ಜಾಯಮಾನ, ಉಚ್ಚಾರಣೆ ಹಾಗೂ ಆಡುನುಡಿಯ ಪ್ರಭಾವ ಈ ತೆರನಾದ ವ್ಯತ್ಯಾಸಕ್ಕೆ ಕಾರಣವಾಗಿರಬಹುದು ಎನ್ನಲಾಗಿದೆ. ಅಲ್ಲದೆ ಈ ವ್ಯತ್ಯಾಸಗಳು ಸಮಸ್ಯೆಗಳಾಗಿ ಕಂಡುಬರುವುದು ಶಿಕ್ಷಣ ಕ್ಷೇತ್ರದಲ್ಲಿ ಮಾತ್ರ ಎನ್ನಬಹುದು. ಅದರಿಂದ ಪ್ರಸ್ತುತ ಅಧ್ಯಾಯದಲ್ಲಿ ಕಂಡುಬರುವ ಕೆಲ ವ್ಯತ್ಯಾಸಗಳನ್ನು ಸಮಸ್ಯೆಗಳೆಂದು ಕರೆಯದೆ ಅವುಗಳನ್ನು ಅದರ ವಿಕಲ್ಪ ರೂಪಗಳೆಂದು ಕರೆಯಬಹುದು. ಈ ವಿಚಾರದ ಬಗ್ಗೆ ಡಿ.ಎನ್.ಶಂಕರಭಟ್ ಅವರು 'ಕನ್ನಡ ಬರಹವನ್ನು ಸರಿಪಡಿಸೋಣ' ಎಂಬ ಕೃತಿಯಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅಲ್ಲದೆ ಇತರೆ ಭಾಷಾ ವಿದ್ವಾಂಸರೂ ಸಹ ಚರ್ಚೆ ನಡೆಸಿ ತಮ್ಮದೇ ಆದ ವಿಚಾರಗಳನ್ನು ಮಂಡಿಸಿದ್ದಾರೆ.

ಕಲಿಕೆ–ಬೋಧನೆ–ಪಠ್ಯಕ್ರಮದಲ್ಲಿನ ಸಮಸ್ಯೆಗಳು ಮಗುವಿನ ಆಸಕ್ತಿ, ಅಭಿರುಚಿಯ ಜೊತೆಗೆ ಆ ಮಗುವಿನ ದೈಹಿಕ, ಮಾನಸಿಕ, ಸಾಮಾಜಿಕ, ಆರ್ಥಿಕ, ಕೌಟುಂಬಿಕ ಶೈಕ್ಷಣಿಕ ಸ್ಥಿತಿಗತಿಗಳು, ಅನ್ಯಭಾಷೆಯ ಪ್ರಭಾವವೂ ಸಹ ಕಲಿಕೆಯಲ್ಲಿನ ವ್ಯತ್ಯಾಸಗಳಿಗೆ ಕಾರಣವಾಗಬಹುದು. ಅಲ್ಲದೆ ಭಾಷೆಯ ಸರಿಯಾದ ರೂಪ ಗೊತ್ತಿದ್ದರೂ, ಕೆಲವೊಂದು ಅಜಾಗರೂಕತೆಯಿಂದಲೋ, ಅವಸರದಿಂದಲೋ ದೋಷಗಳಾಗುತ್ತವೆ. ಬರವಣಿಗೆಯ ಸಂದರ್ಭದಲ್ಲಾದರೆ ಅವನ್ನು ಕೈದೋಷ ಎನ್ನುವುದಾಗಲಿ, ಓದಿನ ಸಂದರ್ಭದಲ್ಲಾದರೆ ಕಣ್ ದೋಷ ಎನ್ನುವುದಾಗಲಿ, ಮಾತಿನಲ್ಲಿ ದೋಷವಾದರೆ ಬಾಯಿದೋಷ ಎನ್ನುವುದು ಕಂಡುಬರುತ್ತದೆ. ಇಂತಹ ದೋಷಗಳು ಉಂಟಾಗುವುದು ಆಕಸ್ಮಿಕವೆನ್ನ ಬಹುದಾದರೂ ಭಾಷಾ ಬಳಕೆಯ ಎಲ್ಲಾ ಕಡೆ ತಪ್ಪುಗಳಾಗುತ್ತಿದ್ದರೆ ಇದನ್ನು ಭಾಷಿಕ ತಪ್ಪುಗಳೆನಿಸುತ್ತವೆ. ಇಂತಹ ಸಮಸ್ಯೆಗಳನ್ನು ಪರಿಹಾರ ಬೋಧನೆಯ ಅಡಿಯಾಗಿ ಸೂಕ್ತ ಕ್ರಮಗಳೊಂದಿಗೆ ತಿದ್ದಿ ಸರಿಪಡಿಸಿ, ಪುನಃ ಆ ತಪ್ಪುಗಳು ಆಗದಂತೆ ಕ್ರಮವನ್ನು ಶಿಕ್ಷಕರು ವಹಿಸಬೇಕು. ಒಟ್ಟಾರೆ ಕನ್ನಡ ಮಾತೃ ಭಾಷೆಯುಳ್ಳ ಹಾಗೂ ಕನ್ನಡ ಭಾಷಿಕ ಪರಿಸರದಲ್ಲಿ ಬೆಳೆದ ಮಕ್ಕಳು ಕನ್ನಡವನ್ನು

ಓದುವಾಗ, ಬರೆಯುವಾಗ ಎದುರಾಗುವ ಸಮಸ್ಯೆಗಳ ಸ್ವರೂಪವನ್ನು ಈ ಅಧ್ಯಯನದಲ್ಲಿ ತಿಳಿಸಲಾಗಿದೆ. ಇಂತಹ ವಿಚಾರಗಳನ್ನು ವಿದ್ವಾಂಸರು ಹಾಗೂ ಸರ್ಕಾರ ಗಮನಿಸಿ ಇವುಗಳಿಗೆ ಸೂಕ್ತ ಕಾರಣಗಳನ್ನು ತಿಳಿದು ಪರಿಹಾರಗಳನ್ನು ಆದಷ್ಟು ಬೇಗನೆ ಕಂಡುಕೊಳ್ಳಬೇಕಾಗಿದೆ. ಜೊತೆಗೆ ಶಿಕ್ಷಕರಿಗೆ ಬೇಕಾದ ಸೌಲಭ್ಯಗಳನ್ನು ಒದಗಿಸಿ ಅವರನ್ನು ಬೋಧಕೇತರ ಕೆಲಸಗಳಿಗಿಂತ ಬೋಧನಾ ಕೆಲಸದಲ್ಲಿ ಹೆಚ್ಚು ತೊಡಗುವಂತೆ ಮಾಡಿದಾಗ ಶಿಕ್ಷಣ ರಂಗದಲ್ಲಿ ಉಂಟಾಗುತ್ತಿರುವ ಸಮಸ್ಯೆಗಳ ಬಗ್ಗೆ ಸೂಕ್ತ ನಿರ್ಧಾರ ಕೈಗೊಳ್ಳಬಹುದಾಗಿದೆ. ಈ ದೃಷ್ಟಿಯಿಂದ ಪ್ರಸ್ತುತ ಅಧ್ಯಯನ ಮಹತ್ವವೆನಿಸಿದೆ.

**ಅಧ್ಯಯನದ ಫಲಿತಗಳು**

ಪ್ರಸ್ತುತ ಈ ಅಧ್ಯಯನದಿಂದ ಕಂಡುಕೊಂಡಿರುವ ಫಲಿತಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

೧. ಈ ಅಧ್ಯಯನವು ಬಳ್ಳಾರಿ ಜಿಲ್ಲೆಯ ಭಾಷಿಕ, ಶೈಕ್ಷಣಿಕ ಹಾಗೂ ಭೌಗೋಳಿಕ ಪರಿಸರವನ್ನು ತಿಳಿಸುವುದರ ಜೊತೆಗೆ ಇಲ್ಲಿನ ಮಕ್ಕಳು ಶೈಕ್ಷಣಿಕ ರಂಗದಲ್ಲಿ ಎದುರಿಸುತ್ತಿರುವ ಸಮಸ್ಯೆಗಳನ್ನು ತಿಳಿಸುವಲ್ಲಿ ಸಹಾಯಕವಾಗುತ್ತದೆ.

೨. ಈ ಅಧ್ಯಯನವು ಮಕ್ಕಳು ಓದುವಾಗ ಅಂದರೆ ಸ್ವರ, ವ್ಯಂಜನ, ಗುಣಿತಾಕ್ಷರ ಹಾಗೂ ಒತ್ತಕ್ಷರಯುಕ್ತ ಪದಗಳನ್ನು ಓದುವಾಗ ಯಾವ ತರಹದ ಸಮಸ್ಯೆಗಳನ್ನು ಎದುರಿಸುತ್ತಾರೆ ಎಂಬುದನ್ನು ತಿಳಿಸುತ್ತದೆ.

೩. ಪ್ರಸ್ತುತ ಅಧ್ಯಯನವು ಮಕ್ಕಳು ಬರೆಯುವಾಗ ಅಂದರೆ ಸ್ವರ, ವ್ಯಂಜನ, ಗುಣಿತಾಕ್ಷರಯುಕ್ತ ಹಾಗೂ ಒತ್ತಕ್ಷರಯುಕ್ತ ಪದಗಳನ್ನು ಬರೆಯುವಾಗ ಯಾವ ತರಹದ ವ್ಯತ್ಯಾಸಗಳನ್ನು ಎದುರಿಸುತ್ತಾರೆ ಎಂಬುದನ್ನು ತಿಳಿಯಲು ಉಪಯುಕ್ತವಾಗಿದೆ.

೪. ಬಳ್ಳಾರಿ ಜಿಲ್ಲೆಯ ವ್ಯವಹಾರಿಕ ಕನ್ನಡದ ಪ್ರಭಾವದಿಂದ ಮಕ್ಕಳು ಓದುವಾಗ, ಬರೆಯುವಾಗ ಈ ತೆರನಾದ ವ್ಯತ್ಯಾಸವನ್ನು ಮಾಡಿರಬಹುದೆಂದು ಈ ಅಧ್ಯಯನದಿಂದ ತಿಳಿದುಬರುತ್ತದೆ. ಉದಾ: ಮೊಲ – ಮಲ, ಮೊಸಳೆ – ಮಸಳೆ ಇಲ್ಲಿ ಪದಾದಿಯ 'ಒ' ಕಾರವು 'ಅ' ಕಾರವಾಗಿ ಉಚ್ಚಾರಣೆಯಾಗುತ್ತದೆ. ಇದೇ ರೀತಿಯ ಹಲವಾರು ವ್ಯತ್ಯಾಸಗಳನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

೫. ಪ್ರಸ್ತುತ ಈ ಅಧ್ಯಯನದಲ್ಲಿ ಕಂಡುಬರುವ ಸಮಸ್ಯೆಗಳಿಗೆ ಕಾರಣವನ್ನು ಎರಡು ರೀತಿಯಾಗಿ ವಿವೇಚಿಸಲಾಗಿದೆ. ಒಂದನೆಯದಾಗಿ ಮಕ್ಕಳು ಕನ್ನಡ ಕಲಿಕೆಯಲ್ಲಿ ಮಾಡುವ ಸಮಸ್ಯೆಗಳಿಗೆ ಕಾರಣ ಅನ್ಯಭಾಷೆಯ ಪ್ರಭಾವ ಪ್ರೇರಣೆಯು ಒಂದುಕಡೆಯಾದರೆ ಇನ್ನೊಂದು ಕಡೆ ಕನ್ನಡ ಭಾಷೆಯ ಜಾಯಮಾನ, ಆಡುನುಡಿಯ ಪ್ರಭಾವ, ಉಚ್ಚಾರಣೆಯ ರೀತಿನೀತಿಯಿಂದಾಗಿ ಅದರ ವಿಕಲ್ಪ ರೂಪಗಳನ್ನು ಬಳಸಿರಬಹುದು ಎಂಬುದು ತಿಳಿಯಲು ಉಪಯುಕ್ತವಾಗಿದೆ.

೭. ಶಿರುಗುಪ್ಪ, ಬಳ್ಳಾರಿ, ಸಂಡೂರು ತಾಲ್ಲೂಕಿನಲ್ಲಿ ತೆಲುಗು ಭಾಷೆಯ ಪ್ರಭಾವ ಹೆಚ್ಚಾಗಿರುವುದರಿಂದ ಇಲ್ಲಿಯ ಪರಿಸರದಲ್ಲಿನ ಮಕ್ಕಳು ಕನ್ನಡವನ್ನು ಓದುವಾಗ ಬರೆಯುವಾಗಲೂ ತೆಲುಗು ಭಾಷೆಯ ಪ್ರಭಾವಕ್ಕೆ ಒಳಗಾಗಿ ಈ ತೆರನಾದ ವ್ಯತ್ಯಾಸ ಮಾಡಿರಬಹುದು ಎನ್ನಲಾಗಿದೆ.

೭. ಈ ಅಧ್ಯಯನವು ಮಕ್ಕಳು ವಾಕ್ಯರಚನೆ ಮಾಡುವಾಗ ಎದುರಿಸುವ ಸಮಸ್ಯೆಗಳನ್ನು ಅದಕ್ಕೆ ಕಾರಣ ತಿಳಿಯಲು ಸಹಕಾರಿಯಾಗಿದೆ.

೮. ಈ ಅಧ್ಯಯನದಿಂದ ಮಕ್ಕಳ ಭಾಷಾ ಕಲಿಕೆಯ ಮೇಲೆ ಮಗುವಿನ ಕೌಟಂಬಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಪರಿಸರ ಹೇಗೆ ಪ್ರಭಾವ ಬೀರುತ್ತವೆ ಎಂಬುದನ್ನು ತಿಳಿಯಬಹುದಾಗಿದೆ.

೯. ಬರೆದಂತೆ ಓದುವುದು, ಓದಿನಂತೆ ಬರೆಯುವುದು, ನಿಯಮವಾದರೂ ಕೆಲ ಮಕ್ಕಳು ಬರವಣಿಗೆಯಲ್ಲಿ ಮಾಡಿದ ತಪ್ಪುಗಳನ್ನು ಓದುವಾಗ ಮಾಡುವುದಿಲ್ಲ. ಇನ್ನು ಕೆಲ ಮಕ್ಕಳು ಓದುವಾಗ ಮಾಡುವ ತಪ್ಪುಗಳನ್ನು ಬರವಣಿಗೆಯಲ್ಲಿ ಮಾಡುವುದಿಲ್ಲ. ಆದರೆ ಈ ಅಧ್ಯಯನದಲ್ಲಿ ಬಹಳಷ್ಟು ಮಕ್ಕಳು ಓದುವಾಗ ಮಾಡಿರುವ ತಪ್ಪುಗಳನ್ನು ಬರವಣಿಗೆಯಲ್ಲಿಯೂ ಮಾಡಿದ್ದರೂ ಪ್ರಮಾಣದಲ್ಲಿ ಬರವಣಿಗೆಯಲ್ಲಿನ ದೋಷಗಳೇ ಹೆಚ್ಚು ಎಂದು ತಿಳಿಯಬಹುದು.

೧೦. ಪ್ರಸ್ತುತ ಅಧ್ಯಯನವು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳಿಗೆ ಮಾತ್ರ ಸೀಮಿತವಾಗಿರದೆ ಇದರ ಜೊತೆಗೆ ಖಾಸಗಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳ ಸಮಸ್ಯೆಗಳೊಂದಿಗೆ ತೌಲನಿಕವಾಗಿ ಅಧ್ಯಯನ ಮಾಡುವರಿಗೆ ಉಪಯುಕ್ತವಾಗಿದೆ.

೧೧. ಓದುವ ಮತ್ತು ಬರೆಯುವ ಮಕ್ಕಳ ದೋಷಗಳನ್ನು ಗುರುತಿಸುವಾಗ ಅವುಗಳು ದೋಷಗಳೇ ಅಥವಾ ವ್ಯತ್ಯಸ್ಥ ರೂಪಗಳೇ ಎಂಬುದನ್ನು ಭಾಷಾವೈಜ್ಞಾನಿಕ ನೆಲೆಯಿಂದ ಕಂಡುಹಿಡಿಯಬೇಕು. ಇಲ್ಲದಿದ್ದರೆ ವ್ಯತ್ಯಸ್ಥ ರೂಪಗಳನ್ನು ದೋಷಗಳೆಂದು ಭಾವಿಸಿದಲ್ಲಿ ಶಿಕ್ಷಣ ಮತ್ತು ಬೋಧನೆಯ ಉದ್ದೇಶವು ನಿರುಪಯುಕ್ತವಾಗುತ್ತದೆ.

೧೨. ಮಕ್ಕಳಲ್ಲಿ ಕಂಡುಬರುವ ಭಾಷಿಕ ದೋಷಗಳಿಗೆ ಕಾರಣಗಳನ್ನು ಮಕ್ಕಳ ಹಿನ್ನೆಲೆಯಲ್ಲಿ ಗ್ರಹಿಸದೆ ಪಠ್ಯ ಸಾಮಗ್ರಿಯ ಹಾಗೂ ಬೋಧನೆಯ ಹಿನ್ನೆಲೆಯಿಂದಲೂ ಗ್ರಹಿಸಲು ಸಾಧ್ಯವಿದೆ.

೧೩. ಒಂದು ಪರಿಸರದ ಮಕ್ಕಳ ಶೈಕ್ಷಣಿಕ ಕಾರ್ಯಕ್ರಮಗಳನ್ನು ರೂಪಿಸುವಾಗ ಅದು ಭಾಷಾ ಕಲಿಕೆ ಇರಲಿ/ವಿಷಯ ಕಲಿಕೆ ಅಥವಾ ಇರಲಿ, ಪ್ರಾದೇಶಿಕ, ಸಾಮಾಜಿಕ ಪರಿಸರಗಳನ್ನು ಗಣನೆಗೆ ತೆಗೆದುಕೊಳ್ಳಬೇಕು ಹಾಗೂ ಭಾಷಾ ಬೋಧನೆ, ಕಲಿಕೆ ಮತ್ತು ಮೌಲ್ಯಮಾಪನದ ವಿಧಾನಗಳಲ್ಲಿ ಅಮೂಲಾಗ್ರ ಬದಲಾವಣೆ ಮಾಡಬೇಕು.

೧೪. ಮೌಲ್ಯಮಾಪನ ಎನ್ನುವುದು ಸರಿ ತಪ್ಪುಗಳ ಅಥವಾ ಕಲಿಕೆಯ ದೋಷಗಳ ಮಾನದಂಡವಾಗಬೇಕಿಲ್ಲ. ಮೌಲ್ಯಮಾಪನವು ವಿದ್ಯಾರ್ಥಿ ಏನನ್ನು ಕಲಿತಿಲ್ಲ ಎಂಬ ವಿಷಯದ ಪರಾಮರ್ಶೆಗಿಂತ ವಿದ್ಯಾರ್ಥಿಗಳು ಏನನ್ನು ಗ್ರಹಿಸುತ್ತಾರೆ ಅಥವಾ ಗ್ರಹಿಸುತ್ತಿದ್ದಾರೆ ಎಂಬುದರ ತಿಳುವಳಿಕೆ ಕಲಿಸುವವರಿಗೆ ಆಗಬೇಕಿದೆ.

೧೫. ಭಾಷೆ ಕಲಿಸುವ ಹಾಗೂ ಬೋಧಿಸುವ ವಿಧಾನಗಳನ್ನು ಇತರೆ ವಿಷಯ ಕಲಿಕೆ ವಿಧಾನಗಳಿಂದ ಭಿನ್ನವಾಗಿರಬೇಕು.

೧೬. ಕಲಿಸುವ ಶಿಕ್ಷಕರಿಗೆ ಆಯಾ ಪ್ರದೇಶದ ಪ್ರಾದೇಶಿಕ, ಸಾಮಾಜಿಕ, ಭಾಷಾ ಬಳಕೆಯ ವಿನ್ಯಾಸಗಳ ಪರಿಚಯ ಕಡ್ಡಾಯವಾಗಿ ಇರಬೇಕು. ಇದರಿಂದ ಬರವಣಿಗೆ ಹಾಗೂ ಓದುವಿಕೆಯನ್ನು ಕಲಿಸಲು ಸಹಾಯಕವಾಗುವುದರ ಜೊತೆಗೆ ಭಾಷಿಕ ದೋಷಗಳನ್ನು ನಿವಾರಿಸಲು ಸಾಧ್ಯವಾಗಬಹುದು.

೧೭. ಶಿಕ್ಷಕರನ್ನು ಬೋಧಕೇತರ ಕೆಲಸಗಳಿಗಿಂತ ಬೋಧನೆ ಕೆಲಸದಲ್ಲಿ ಹೆಚ್ಚು ತೊಡಗಲು ಅವಕಾಶ ನೀಡಬೇಕು. ಆಗ ಪರಿಣಾಮಕಾರಿ ಕಲಿಕೆ ಸಾಧ್ಯ.

೧೮. ಭಾಷಾ ಕಲಿಕೆಯಲ್ಲಿನ ಸಮಸ್ಯೆಗಳನ್ನು ಕಡಿಮೆಗೊಳಿಸಲು ಬೋಧನೆಯಲ್ಲಿ ಸಮರ್ಪಕ ಕಲಿಕಾ ಸಾಮಾಗ್ರಿಗಳ ಬಳಕೆಯಾಗಬೇಕು.

೧೯. ಒಟ್ಟಾರೆಯಾಗಿ ಶೈಕ್ಷಣಿಕ ದೃಷ್ಟಿಯಿಂದ ಈ ಅಧ್ಯಯನವು ಬಹಳಷ್ಟು ಮಹತ್ವ ಪಡೆದಿದೆ. ಈ ಅಧ್ಯಯನದಲ್ಲಿ ಗುರುತಿಸಲಾದ ಸಮಸ್ಯೆಗಳ ಸ್ವರೂಪವನ್ನು ಸಂಬಂಧಪಟ್ಟ ಇಲಾಖೆಗಳು ಅರಿತು ಈ ಸಮಸ್ಯೆಗಳಿಗೆ ಸೂಕ್ತ ಪರಿಹಾರ ಕಂಡುಕೊಳ್ಳಲು ಉಪಯುಕ್ತವಾಗಿದೆ.

# ಪ್ರಶ್ನಾವಳಿ

## ವಿದ್ಯಾರ್ಥಿ ಪ್ರಶ್ನಾವಳಿ

೧. ಊರು :

೨. ತಾಲ್ಲೂಕು :

೩. ಶಾಲೆಯ ಹೆಸರು :

೪. ಶಾಲೆಯ ಮಾದರಿ : ಖಾಸಗಿ/ಸರ್ಕಾರಿ

೫. ಬೋಧನಾ ಮಾಧ್ಯಮ : ಕನ್ನಡ/ಇಂಗ್ಲೀಷ್

೬. ಮುಖ್ಯೋಪಧ್ಯಾಯರ ಹೆಸರು :

೭. ಕನ್ನಡ ಭಾಷಾಶಿಕ್ಷಕರ ಹೆಸರು :

೮. ವಿದ್ಯಾರ್ಥಿ ಹೆಸರು :

೯. ತರಗತಿ : ೫, ೬, ೭

೧೦. ವಿಭಾಗ :

೧೧. ವಯಸ್ಸು :

೧೨. ಲಿಂಗ : ಹೆಣ್ಣು/ಗಂಡು

೧೩. ಜಾತಿ :

೧೪. ಮಾತೃಭಾಷೆ :

೧೫. ಶಾಲೆಯಲ್ಲಿ ಕಲಿಯುವ ಭಾಷೆ :

೧೬. ಮಗುವಿನ ವಿಳಾಸ :
(ಕ್ರ.ಸಂ.೧೭ರಿಂದ–೨೧ರವರೆಗಿನ ಮಾಹಿತಿಯನ್ನು ಪೋಷಕರಿಂದ ಪಡೆಯಲಾಗುತ್ತದೆ)

೧೭. ತಂದೆಯ ಹೆಸರು, ವಿದ್ಯಾರ್ಹತೆ, ವೃತ್ತಿ ಹಾಗೂ ವಾರ್ಷಿಕ ಆದಾಯ :

೧೮. ತಾಯಿಯ ಹೆಸರು, ವಿದ್ಯಾರ್ಹತೆ, ವೃತ್ತಿ ಹಾಗೂ ವಾರ್ಷಿಕ ಆದಾಯ :

೧೯. ನಿಮ್ಮ ಸಮುದಾಯದಲ್ಲಿನ ಇತರೆ ಭಾಷೆಗಳಾವುವು? :

೨೦. ಸಮುದಾಯದಲ್ಲಿ ಹೆಚ್ಚು ಬಳಸುವ ಭಾಷೆ ಯಾವುದು? :

೨೧. ಕುಟುಂಬದ ಆರ್ಥಿಕ ಸ್ಥಿತಿ : ಅತ್ಯುತ್ತಮ, ಉತ್ತಮ, ಸಾಧಾರಣ

೨೨. ಕುಟುಂಬದ ಸಾಮಾಜಿಕ ಸ್ಥಿತಿ : ಅತ್ಯುತ್ತಮ, ಉತ್ತಮ, ಸಾಧಾರಣ

೨೩. ಕುಟುಂಬದ ಶೈಕ್ಷಣಿಕ ಸ್ಥಿತಿ : ಅತ್ಯುತ್ತಮ, ಉತ್ತಮ, ಸಾಧಾರಣ

೨೪. ತಂದೆಯ ಮಾತೃಭಾಷೆ :

೨೫. ತಾಯಿಯ ಮಾತೃಭಾಷೆ :

೨೬. ಕುಟುಂಬದಲ್ಲಿನ ಇತರೆ ಸಂಬಂಧಿಕರು ಬಳಸುವ ಭಾಷೆಗಳು :

೨೭. ಕುಟುಂಬವು ಆಧುನಿಕ ಸೌಲಭ್ಯಗಳನ್ನು ಹೊಂದಿದೆಯೇ? : ಹೌದು/ಇಲ್ಲ

೨೮. ತರಗತಿಯಲ್ಲಿ ನಿಮ್ಮ ಸ್ನೇಹಿತರೊಂದಿಗೆ ಯಾವ ಭಾಷೆಯಲ್ಲಿ ಹೆಚ್ಚು ವ್ಯವಹರಿಸುತ್ತೀರಿ?

೨೯. ಪೂರ್ವ ಶಿಕ್ಷಣದ ಬಗೆಗೆ ಮಾಹಿತಿ ಕೊಡಿ.

| ತರಗತಿ | ವಿಭಾಗ | ಮಾಧ್ಯಮ |
|---|---|---|
| ಪೂರ್ವಪ್ರಾಥಮಿಕ | | |
| ೧. | | |
| ೨. | | |
| ೩. | | |
| ೪. | | |

೩೦. ನೀವು ಎಂತಹ ಪ್ರದೇಶದಿಂದ ಶಾಲೆಗೆ ಬರುತ್ತೀರಿ?

ಅ) ನಗರ ಆ) ಅರೆನಗರ ಇ) ಗ್ರಾಮೀಣ ಈ) ಕೊಳಚೆ ಪ್ರದೇಶ

ಉ) ಇತರೆ

೩೧. ನಿಮಗೆ ಸಕಾಲಕ್ಕೆ ಪಠ್ಯಪುಸ್ತಕ ದೊರೆಯುತ್ತದೆಯೇ?

ಹೌದು/ಇಲ್ಲ

೩೨. ನಿಮಗೆ ಪಾಠಗಳು ಸಕಾಲದಲ್ಲಿ ನಡೆಯುತ್ತವೆಯೇ?

ಹೌದು/ಇಲ್ಲ

೩೩. ಬೋಧನಾ ವಿಧಾನದ ರೀತಿ

ಅ) ಸಾಮಾನ್ಯ ಆ) ವಿಶಿಷ್ಟ ಇ) ಚಟುವಟಿಕೆ

೩೪. ಭಾಷಾ ಬೋಧನೆ ಇವರಿಂದ ನಡೆಯುತ್ತದೆ?

ಅ) ಭಾಷಾ ಬೋಧಕರಿಂದ ಹೌದು/ಇಲ್ಲ

ಆ) ಇತರೆ ಶಿಕ್ಷಕರಿಂದ ಹೌದು/ಇಲ್ಲ

ಇ) ಕನ್ನಡ ಭಾಷಾ ಶಿಕ್ಷಕರು ಕನ್ನಡ ಮಾತೃಭಾಷೆಯುಳ್ಳವರೆ : ಹೌದು/ಇಲ್ಲ

ಈ) ಕನ್ನಡ ಭಾಷಾ ಶಿಕ್ಷಕರು ಕನ್ನಡೇತರ ಭಾಷೆಯವರೆ : ಹೌದು/ಇಲ್ಲ

೩೫. ಬೋಧನೆಯಲ್ಲಿ ಬೋಧಿಸುವ ವಿಷಯಕ್ಕೆ ಸಂಬಂಧಿಸಿದಂತೆ ಉಪಕರಣಗಳನ್ನು ಬಳಸುತ್ತಾರೆಯೇ?

ಯಾವುವು?

೩೬. ಬೋಧಿಸುವ ವಿಷಯಕ್ಕೆ ಸಂಬಂಧಿಸಿದಂತೆ ಮನೆಗೆಲಸ ನೀಡುತ್ತಾರೆಯೇ?

ಹೌದು/ಇಲ್ಲ

೩೭. ಮನೆಗೆಲಸವನ್ನು ಶಿಕ್ಷಕರು ಪರಿಶೀಲಿಸುತ್ತಾರೆಯೇ?

ಹೌದು/ಇಲ್ಲ

೩೮. ಸಮೂಹ ಮಾಧ್ಯಮಗಳಲ್ಲಿ ಯಾವ ಭಾಷೆಯ ಕಾರ್ಯಕ್ರಮಗಳನ್ನು ಹೆಚ್ಚು ವೀಕ್ಷಿಸುತ್ತೀರಿ?

ಅ) ಕನ್ನಡ ಈ) ಹಿಂದಿ

ಆ) ತೆಲುಗು ಉ) ಇಂಗ್ಲೀಷ್

ಇ) ತಮಿಳು ಊ) ಉರ್ದು

೩೯. ಮನೆ ಪಾಠಕ್ಕೆ ಹೋಗುತ್ತೀರಾ?

ಹೌದು/ಇಲ್ಲ

೪೦. ಮನೆಗೆಲಸವನ್ನು ಹೇಗೆ ಮಾಡುವಿರಿ?

ಅ) ಸ್ವತಃ ಮಾಡುವಿರಾ?

ಆ) ಮನೆಯ ಸದಸ್ಯರ ಸಹಾಯ ಪಡುವಿರಾ?

ಇ) ಮನೆಯ ಸದಸ್ಯರ ಮೇಲ್ವಿಚಾರಣೆಯಿಂದ ಮಾಡುವಿರಾ?

**ಶಿಕ್ಷಕರ ಪ್ರಶ್ನಾವಳಿ**

೧. ಭಾಷಾ ಶಿಕ್ಷಕರ ಹೆಸರು :

೨. ಬೋಧನಾ ಅನುಭವ ಎಷ್ಟು ವರ್ಷ :

೩. ತರಗತಿಯಲ್ಲಿ ಎಷ್ಟು ಮಕ್ಕಳಿದ್ದಾರೆ :

ಅ) ಕನ್ನಡ ಮಾತೃ ಭಾಷೆಯುಳ್ಳವರು :

ಆ) ಕನ್ನಡೇತರ ಮಾತೃ ಭಾಷೆಯುಳ್ಳವರು :

೪. ಮಕ್ಕಳು ಯಾವ ಕಲಿಕೆಯಲ್ಲಿ ಹೆಚ್ಚು ಸಮಸ್ಯೆಗಳನ್ನು ಎದುರಿಸುತ್ತಾರೆ?

ಅ) ಆಲಿಸುವುದು

ಆ) ಮಾತನಾಡುವುದು

ಇ) ಓದುವುದು

ಈ) ಒರೆಯುವುದು

ಉ) ಅರ್ಥಮಾಡಿಕೊಳ್ಳುವಲ್ಲಿ

೫. ಓದುಗಾರಿಕೆಯಲ್ಲಿ ಕಂಡುಬರುವ ಪ್ರಮುಖ ದೋಷಗಳಾವುವು? ಕಾರಣ?

೬. ಬರವಣಿಗೆಯಲ್ಲಿ ಕಂಡುಬರುವ ಪ್ರಮುಖ ದೋಷಗಳಾವುವು? ಕಾರಣ??

೭. ಅರ್ಥ ಮಾಡಕೊಳ್ಳುವಲ್ಲಿನ ದೋಷಗಳಿಗೆ ಕಾರಣಗಳೇನು?

೮. ಮಕ್ಕಳ ಕಲಿಕೆಯಲ್ಲಿ ಕಂಡುಬರುವ ಕೆಲವು ಸಾಮಾನ್ಯ ದೋಷಗಳಾವುವು?

೯. ಕನ್ನಡೇತರ ಮಕ್ಕಳಲ್ಲಿ ಕಂಡುಬರುವ ಸಾಮಾನ್ಯ ದೋಷಗಳಾವುವು?

೧೦. ಮಕ್ಕಳ ಕಲಿಕೆಯಲ್ಲಿ ಕಂಡುಬರುವ ಬಾಹ್ಯ ದೋಷಗಳಾವುವು? ಕಾರಣ

೧೧. ಮಕ್ಕಳ ಕಲಿಕೆಯಲ್ಲಿ ಕಂಡುಬರುವ ಆಂತರಿಕ ದೋಷಗಳಾವುವು? ಕಾರಣ

೧೨. ಪರಿಣಾಮಕಾರಿ ಭಾಷಾ ಕಲಿಕೆಗೆ ಕೇಂದ್ರ ಸರ್ಕಾರದ ಯೋಜನೆಗಳಾವುವು?

೧೩. ಪರಿಣಾಮಕಾರಿ ಭಾಷಾ ಕಲಿಕೆಗೆ ರಾಜ್ಯಸರ್ಕಾರದ ಯೋಜನೆಗಳಾವುವು?

೧೪. ಮಕ್ಕಳ ಕಲಿಕೆಯ ಸಾಮಾಜಿಕ, ಆರ್ಥಿಕ ಭಾಷಿಕ ಶೈಕ್ಷಣಿಕ ಕೌಟುಂಬಿಕ ಅಂಶಗಳು ಪ್ರಭಾವ ಬೀರುತ್ತವೆಯೇ?

ಹೌದು : ಇಲ್ಲ: ಹೇಗೆ:

೧೫. ಸರ್ವಶಿಕ್ಷಣ ಅಭಿಯಾನದಲ್ಲಿ ಭಾಷಾ ಕಲಿಕೆಗಾಗಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳಾವುವು?

೧೬. ಬೋಧನಾ ವಿಧಾನಕ್ಕೆ ಸಂಬಂಧಿಸಿದ ಮಾಹಿತಿ.

ಅ) ಕನ್ನಡ ಭಾಷಾ ಕಲಿಕೆಯ ಬೋಧನೆಗೆ ಸಮಯ ಸಾಕಾಗುತ್ತಿದೆಯೇ?

ಹೌದು : ಇಲ್ಲ: ಯಾಕೆ:

ಆ) ಕನ್ನಡ ಭಾಷಾ ಕಲಿಕೆಯ ಬೋಧನೆಗೆ ಯಾವ ಸಮಯ ಸೂಕ್ತವಾಗಿದೆ?

ಬೆಳಿಗ್ಗೆ : ಮಧ್ಯಾಹ್ನ: ಯಾಕೆ:

ಇ) ಕಲಿಕೆಯಲ್ಲಿ ಹಿಂದುಳಿದ ಮಕ್ಕಳಿಗಾಗಿ ಯಾವುದಾದರೂ ವಿಶೇಷ ಬೋಧನಾ ವಿಧಾನವನ್ನು ಅನುಸುತ್ತೀರಾ?

ಈ) ಕಲಿಕೆಯ ಕನಿಷ್ಠ ಅಂಶಗಳನ್ನು ಮಕ್ಕಳಿಗೆ ಯಾವ ವಿಧಾನದ ಮೂಲಕ ಕಲಿಸುತ್ತೀರಿ?

ಉ) ಭಾಷಾ ಬೋಧನೆಯ ನವೀನ ವಿಧಾನಗಳು ಯಾವುವು?

ಊ) ಬೋಧನೆ ಮಾಡುವಾಗ ಪ್ರತಿಯೊಬ್ಬ ವಿದ್ಯಾರ್ಥಿಯೊಡನೆ ಪರಸ್ಪರಾನುವರ್ತನೆ ಮಾಡುತ್ತೀರಾ?

ಹೌದು : ಇಲ್ಲ: ಯಾಕೆ:

ಋ) ಭಾಷಾ ಬೋಧನೆಯಲ್ಲಿ ಕಂಡುಬರುವ ದೋಷಗಳಾವುವು?

ೠ) ಮಕ್ಕಳ ಕಲಿಕೆಯ ಕನಿಷ್ಠ ಅಂಶಗಳಲ್ಲಿನ ದೋಷಗಳಿಗೆ ಪ್ರಮುಖ ಕಾರಣಗಳೇನು?

ಎ) ಕಲಿಕಾಂಶವನ್ನು ಪುನಾವರ್ತಿಸುವಿರಾ?

ಅ) ಬೋಧಿಸುವುದರ ಮೂಲಕ

ಆ) ಕಲಿಸುವುದರ ಮೂಲಕ

೧೭. ಪಠ್ಯಕ್ರಮಕ್ಕೆ ಸಂಬಂಧಿಸಿದಂತೆ ಮಾಹಿತಿ.

ಅ) ಪಠ್ಯಕ್ರಮವು ಸಕಾಲಕ್ಕೆ ದೊರೆಯುತ್ತದೆಯೇ?

ಹೌದು : ಇಲ್ಲ:

ಆ) ಪಠ್ಯಕ್ರಮವು ಆಯಾ ತರಗತಿಯ ಮಕ್ಕಳ ಸಾಮರ್ಥ್ಯಕ್ಕೆ ಅನುಗುಣವಾಗಿದೆಯೇ?

ಹೌದು : ಇಲ್ಲ: ಹೇಗೆ:

ಇ) ಪಠ್ಯಪುಸ್ತಕದ ಬಗ್ಗೆ ನಿಮ್ಮ ಅಭಿಪ್ರಾಯವೇನು?

೧೮. ಈ) ಪಠ್ಯಕ್ರಮದಲ್ಲಿನ ದೋಷಗಳಾವುವು?

೧) ಬಾಹ್ಯದೋಷಗಳು ಯಾವುವು?

೨) ಆಂತರಿಕ ದೋಷಗಳು ಯಾವುವು?

ಉ) ಪಠ್ಯಪುಸ್ತಕದಲ್ಲಿನ ಚಿತ್ರಗಳು ಕಲಿಕೆಗೆ ಸಹಾಯಕವಾಗಿವೆಯೇ?

ಹೌದು : ಇಲ್ಲ: ಹೇಗೆ:

ಊ) ಪಠ್ಯಪುಸ್ತಕದಲ್ಲಿನ ಭಾಷಾಭ್ಯಾಸ ಚಟುವಟಿಕೆ ಕಲಿಕೆಗೆ ಹೇಗೆ ಪೂರಕವಾಗಿದೆ

ಋ) ಪಠ್ಯಕ್ರಮ ಕ್ರಮಾನುಗತ ಮಾದರಿಯಲ್ಲಿ ರಚಿಸಲ್ಪಟ್ಟಿದೆಯೇ?

ಎ) ಪಠ್ಯಪುಸ್ತಕ ಪಠ್ಯಕ್ರಮ ರಚನಾ ತತ್ವಗಳಿಗೆ ಅನುಗುಣವಾಗಿದೆಯೇ?

ಹೌದು : ಇಲ್ಲ:

ಏ) ಭಾಷಾಭ್ಯಾಸ ಚಟುವಟಿಕೆಯನ್ನು ನೀವು ಮಾಡುವಿರಾ? ಮಕ್ಕಳಿಂದ ಮಾಡಿಸುವಿರಾ?

೧) ಮಕ್ಕಳು ಮಾಡುವುದರಿಂದಾಗುವ ಅನುಕೂಲಗಳಾವುವು?

೨) ನೀವು ಮಾಡುವುದರಿಂದಾಗುವ ಲಾಭಗಳೇನು?

ಐ) ಪಠ್ಯಪುಸ್ತಕವನ್ನು ಯಾವುದಕ್ಕೆ ಹೆಚ್ಚು ಬಳಸುತ್ತೀರಿ?

೧) ಓದಿಸುವುದಕ್ಕೆ

೨) ಬರೆಸುವುದಕ್ಕೆ

೩) ಭಾಷಾಭ್ಯಾಸ ಚಟುವಟಿಕೆಗೆ

೪) ಎಲ್ಲವೂ

೧೯. ಮೌಲ್ಯಮಾಪನಕ್ಕೆ ಸಂಬಂಧಿಸಿದ ಮಾಹಿತಿ.

ಅ) ಭಾಷಾ ಮೌಲ್ಯಮಾಪನದ ಇತರೆ ವಿಷಯಗಳಿಗಿಂತ ವಿಶಿಷ್ಟವಾಗಿದೆಯೇ?

ಹೌದು : ಇಲ್ಲ: ಹೇಗೆ:

ಆ) ನಿರ್ದಿಷ್ಟ ಕಲಿಕೆಯ ಫಲಗಳ ಮೌಲ್ಯಮಾಪನ ಹೇಗೆ ಮಾಡುತ್ತೀರಿ?

ಇ) ಮಕ್ಕಳು ಕೇಳಿದ್ದನ್ನು ಗ್ರಹಿಸುವ ಸಾಮರ್ಥ್ಯವನ್ನು ಹೇಗೆ ಮೌಲ್ಯಮಾಪನ ಮಾಡುವಿರಿ?

೧) ಪ್ರಶ್ನೆಗಳ ರೂಪದಲ್ಲಿ

೨) ಸಾರಾಂಶ ರೂಪದಲ್ಲಿ

ಈ) ಮಕ್ಕಳ 'ಲ' ಮತ್ತು 'ಳ' ಅಕ್ಷರಗಳಲ್ಲಿ ಆಗುವ ದೋಷಗಳನ್ನು ಹೇಗೆ ಮೌಲ್ಯಮಾಪನ ಮಾಡುತ್ತೀರಿ?

೧) ಬರೆಯುವಾಗ : ಚಿತ್ರಗಳ ಮೂಲಕ, ಬೇರೆ ವಿಧಾನವಿದೆಯೇ?

೨) ಓದುವಾಗ : ಚಿತ್ರಗಳ ಮೂಲಕ, ಬೇರೆ ವಿಧಾನವಿದೆಯೇ?

ಉ) ಅಲ್ಪಪ್ರಾಣ ಹಾಗೂ ಮಹಾಪ್ರಾಣಾಕ್ಷರಗಳ ಬಳಕೆಯ ಸಾಮರ್ಥ್ಯವನ್ನು ಹೇಗೆ ಕಂಡು ಹಿಡಿಯುವಿರಿ?

೧) ಬರೆಯುವಾಗ

೨) ಓದುವಾಗ

ಊ) ಸ, ಶ, ಷ ಅಕ್ಷರಗಳಲ್ಲಿ ಆಗುವ ದೋಷಗಳನ್ನು ಹೇಗೆ ಮೌಲ್ಯಮಾಪನ ಮಾಡುವಿರಿ?

೧) ಬರೆಯುವಾಗ

೨) ಓದುವಾಗ

ಋ) ಲಿಖಿತ ಸೂಚನೆಗಳನ್ನು ಗ್ರಹಿಸುವ ಸಾಮರ್ಥ್ಯವನ್ನು ಹೇಗೆ ಮೌಲ್ಯಮಾಪನ ಮಾಡುವಿರಿ?

ೠ) ಭಾಷಾ ಮೌಲ್ಯಮಾಪನ ವಿಧಾನಗಳಲ್ಲಿ ಮಕ್ಕಳ ಕನಿಷ್ಟ ಕಲಿಕೆಯ ಅಂಶಗಳನ್ನು ಮೌಲ್ಯಮಾಪನ ಮಾಡಲು ಯಾವ ವಿಧಾನ ಅನುಸರಿಸುತ್ತೀರಿ?

೧) ಮೌಖಿಕ

೨) ಲಿಖಿತ

೩) ಎರಡೂ

ಎ) ಲಿಖಿತ ಸಾಧನಗಳಲ್ಲಿ ಯಾವ ರೀತಿಯ ಪ್ರಶ್ನೆಗಳನ್ನು ಬಳಸುತ್ತೀರಿ?

೧) ಪ್ರಬಂಧ : ಏಕೆ

೨) ಲಘು : ಏಕೆ

೩) ವಸ್ತುನಿಷ್ಠ : ಏಕೆ

೨೦. ಮಕ್ಕಳಿಗೆ ಕಲಿಸುವ ಹೊಸ ವಿಧಾನಗಳಾವುವು?

ಅ) ಬರವಣಿಗೆ

೧) ಬರವಣಿಗೆ

೨) ವರ್ಣಗಳು

೩) ಗುಣಿತಾಕ್ಷರ

೪) ಒತ್ತಕ್ಷರ

ಆ) ಓದುವುದು

೧) ವರ್ಣಗಳು

೨) ಗುಣಿತಾಕ್ಷರ

೩) ಒತ್ತಾಕ್ಷರ

೪) ಪದಗಳು

ಇ) ಸರಳವಾಕ್ಯ ರಚನೆ

೨೧. ಮಗುವಿನ ಒಟ್ಟಾರೆ ಶೈಕ್ಷಣಿಕ ಸಾಧನೆ ಹೇಗಿದೆ?

೧) ಉತ್ತಮ ೨) ಸಾಧಾರಣ ೩) ಏನೂ ಇಲ್ಲ

೨೨. ತರಗತಿಯ ಒಟ್ಟು ವಿದ್ಯಾರ್ಥಿಗಳಲ್ಲಿ ಮಗುವಿನ ಸ್ಥಾನ:

**ವ್ಯಾಕರಣಾಂಶಗಳ ಪರೀಕ್ಷೆ**

**೧. ಈ ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.**

೧. ನೆನಪಿರಲಿ =

೨. ಹಳೆಗನ್ನಡ =

೩. ಶಿಕ್ಷಣವನ್ನು =

೪. ಕೈಯಿಂದ =

**೨. ಈ ಕೆಳಗಿನ ವಾಕ್ಯದಲ್ಲಿನ ವ್ಯಾಕರಣಾಂಶವನ್ನು ಗುರುತಿಸಿ.**

೧. ರಮೇಶನು 'ಬೆಂಗಳೂರಿನಿಂದ' ಮೈಸೂರಿಗೆ ಹೋದನು ಗೆರೆ ಎಳೆದ ಪದದಲ್ಲಿ ಇರುವ ವಿಭಕ್ತಿ ಯಾವುದು?

ಉತ್ತರ:

೨. 'ರಾಜು' ಹಣ್ಣನ್ನು ತಂದನು ಗೆರೆ ಎಳೆದ ಪದವು ಯಾವ ನಾಮಪದವಾಗಿದೆ.

ಉತ್ತರ :

೩. 'ಶಿಕ್ಷಕರು' ಸಮಾಜದ ನಿರ್ಮಾಪಕರು ಗೆರೆ ಎಳೆದ ಪದದಲ್ಲಿ ಇರುವ ವಚನ ಯಾವುದು?

ಉತ್ತರ :

೪. ಸೀತೆ ಹಣ್ಣನ್ನು 'ತಿಂದಳು' ಗೆರೆ ಎಳೆದ ಪದ ಎಂತಹ ಪದ.

ಉತ್ತರ:

೫. ಸಂತೋಷನು ನೃತ್ಯವನ್ನು 'ಮಾಡುತ್ತಾನೆ' ಗೆರೆ ಎಳೆದ ಪದದಲ್ಲಿ ಇರುವ ಕಾಲ ಯಾವುದು?

ಉತ್ತರ :

೬. ರವಿಯು 'ರಾಧಳ' ಆತ್ಮೀಯ ಗೆಳೆಯ ಗೆರೆ ಎಳೆದ ಪದದಲ್ಲಿ ಇರುವ ಲಿಂಗವನ್ನು ಗುರುತಿಸಿ.

ಉತ್ತರ :

**೩. ಈ ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಬಳಸಿ**

೧. ದಾರಿದೀಪ :

೨. ಆಶ್ಚರ್ಯ :

೩. ಕಷ್ಟಪಡು :

೪. ಬುದ್ಧಿವಂತ :

೪. ಈ ಕೆಳಗಿನ ಸಮಾಸಗಳನ್ನು ಹೆಸರಿಸಿರಿ.

ಅ) ಭೂತಬಲಿ =

ಆ) ಕೈಕೊಟ್ಟನು =

ಇ) ಗಿಡಮರ ಬಳ್ಳಿಗಳು =

ಈ) ಒಗ್ಗಟ್ಟು =

ಉ) ಹೆಮ್ಮರ =

ಊ) ಮುಕ್ಕಣ್ಣ

೫. ಈ ಕೆಳಗಿನವುಗಳಲ್ಲಿ ಏಕವಚನ ಬಹುವಚನಗಳನ್ನು ಪಟ್ಟಿ ಮಾಡಿ

ಮರಗಳು, ಶಾಲೆ, ಕೈಗಳು, ಪ್ರಾಣಿಗಳು, ಪಕ್ಷಿ, ಅರಸ, ಪುಸ್ತಕಗಳು, ಅಣ್ಣ, ನಾಯಿ, ಬೆಕ್ಕು.

೬. ಈ ಕೆಳಗಿನವುಗಳಲ್ಲಿ ಲಿಂಗಗಳನ್ನು ಪಟ್ಟಿಮಾಡಿ

ಬಸವ, ಲಕ್ಷ್ಮೀ, ಈಶ್ವರ, ಶಾರದೆ, ಭೀಮ, ಮನೆ, ಹೊಲ, ಕಾವೇರಿ, ಬುದ್ಧ, ದ್ರೌಪದಿ, ಶಾಲೆ, ರೈಲು, ಇಂದಿರಾ, ಭಾರತ, ಕಾಡು, ಭವಾನಿ, ಮೋಹನ.

೭. ಈ ಕೆಳಗಿನ ಶಬ್ದಗಳಲ್ಲಿನ ಕಾಲ ಪ್ರತ್ಯಯಗಳನ್ನು ತಿಳಿಸಿ.

ಅ) ಕಲಿತನು –

ಆ) ತಿನ್ನುತ್ತಾನೆ –

ಇ) ಬರೆಯುವನು –

೮. ಈ ಕೆಳಗಿನ ಶಬ್ದಗಳಲ್ಲಿರುವ ವಿಭಕ್ತಿ ಪ್ರತ್ಯಯಗಳನ್ನು ಗುರುತಿಸಿರಿ.

ಅ) ಮರಕ್ಕೆ –

ಆ) ಕಲ್ಲಿನಲ್ಲಿ –

ಇ) ಪುಸ್ತಕವು –

ಈ) ರಾಮನಿಂದ–

ಉ) ಸೀತೆಯ ದೆಸೆಯಿಂದ –

ಊ) ಗುರುಗಳೇ –

೯. ವಾಕ್ಯ ಸರಿಪಡಿಸಿ ಬರೆಯಿರಿ.

ಅ) ಕೃತಿಯನ್ನು ವಿಶಿಷ್ಟವಾದ ಪಂಪನು ಬರೆದನು.

ಉತ್ತರ :

ಆ) ಸೇರಿದನು ತನ್ನ ದಾವಣಗೆರೆ ಸರ್ಕಾರಿ ಪ್ರೌಢಶಾಲೆಗೆ ಮೋಹನ ಅಭ್ಯಾಸಕ್ಕೆ

ಉತ್ತರ :

ಇ) ಸಮುದ್ರದಲ್ಲಿ ಮೀನನ್ನು ದೊಡ್ಡ ಬೆಸ್ತನು ಹಿಡಿದನು ಬಲೆಯಿಂದ

ಉತ್ತರ :

ಈ) ಹಣ್ಣನ್ನು ತಿಂದನು ರಾಮನು

ಉತ್ತರ :

೧೦. ನಿಮ್ಮ ಕುಟುಂಬದಲ್ಲಿರುವ ಸದಸ್ಯರ ಹೆಸರುಗಳನ್ನು ಬರೆಯಿರಿ.

೧೧. ದಿನಚರಿ ಬರೆಯಿರಿ.

೧೨. ಹಸುವಿ(ಆಕಳು)ನ ನಿಂದಾಗುವ ಪ್ರಯೋಜನಗಳಾವುವು.

೧೩. ನಿಮ್ಮ ಶಾಲೆಯ ಬಗ್ಗೆ ಸಂಕ್ಷಿಪ್ತವಾಗಿ ಬರೆಯಿರಿ.

**ಪರಾಮರ್ಶನ ಗ್ರಂಥಗಳು:**

೧. ಅಶೋಕಕುಮಾರ ರಂಜೇರೆ, ಭಾಷೆ ಮತ್ತು ಶಿಕ್ಷಣ, ೨೦೦೫, ನಿಧಿ ಪ್ರಕಾಶನ, ಹೊಸಪೇಟೆ.

೨. ಅನುಸೂಯ ವಿ. ಪರಗಿ, ಮಾತೃಭಾಷೆ ತತ್ತ್ವ ಮತ್ತು ಬೋಧನಾ ಮಾರ್ಗ, ೧೯೯೦, ಅನುಸೂಯ ಪ್ರಕಾಶನ, ಪುರವರ.

೩. ಅಂಗಡಿ ಎಸ್.ಎಸ್. ಕನ್ನಡ ಕ್ರಿಯರೂಪಗಳು, ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಎಚ್ಚಸ್ಕೆ, ಆಡಳಿತ ಕನ್ನಡ, ೨೦೦೪, ಚೇತನ ಬುಕ್‌ಹೌಸ್, ಮೈಸೂರು.

೫. ಓಂಪ್ರಕಾಶ ನಾಯಕ ಬಿ., ಬಳ್ಳಾರಿ ವ್ಯವಹಾರಿಕ ಕನ್ನಡದ ಉಚ್ಚಾರಣೆ, ಮತ್ತು ಧ್ವನಿ ನಿಯಮಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ (ಅಪ್ರಕಟಿತ ಎಂ.ಫಿಲ್. ಸಂಪ್ರಬಂಧ)

೬. ಓಬಳೇಶ್ವರ ಘಟ್ಟಿ, ವಿಷಯಾಧಾರಿತ ಬೋಧನಾ ಪದ್ಧತಿ–ಕನ್ನಡ, ವಿದ್ಯಾನಿಧಿ ಪ್ರಕಾಶನ, ಗದಗ.

೭. ಓಬಳೇಶ್ವರ ಘಟ್ಟಿ, ಭಾರತೀಯ ಶಿಕ್ಷಣ ಮತ್ತು ಪ್ರಚಲಿತ ಸಮಸ್ಯೆಗಳು, ೧೯೯೨, ಶಿವಗಂಗಾ ಪ್ರಕಾಶನ, ತೋರಣಘಟ್ಟ

೮. ಓದುವೆ ನಾನು, ಶಿಕ್ಷಕ ಮಾರ್ಗದರ್ಶಿ, ಕರ್ನಾಟಕ ಸರ್ಕಾರ, ಸಾರ್ವಜನಿಕ ಶಿಕ್ಷಣ ಇಲಾಖೆ,

೯. ಕಲಬುರ್ಗಿ ಎಂ.ಎಂ., ಕನ್ನಡ ನಾಮ ವಿಜ್ಞಾನ, ೧೯೮೯, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೦. ಕನ್ನಡ ಪುಸ್ತಕ ಪ್ರಾಧಿಕಾರ, ಕನ್ನಡ–ಕನ್ನಡಿಗ, ಕರ್ನಾಟಕ, ೨೦೦೬, ಕರ್ನಾಟಕ ಸರ್ಕಾರ, ಕುಶಾಲಪ್ಪಗೌಡ ಕೆ., ಕನ್ನಡ ಸಂಕ್ಷಿಪ್ತ ವ್ಯಾಕರಣ, ೨೦೦೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ಕುಮಾರ ಟಿ.ಎಂ., ಪ್ರಾಥಮಿಕ ಶಿಕ್ಷಣ ಒಂದು ಚರ್ಚೆ.

೧೨. ಕೃಷ್ಣಪ್ಪ ಎಸ್., ಬೋಧನಾ ನಿಯಮಗಳು ಮತ್ತು ಶಿಕ್ಷಣ ಸಮಸ್ಯೆಗಳು, ೧೯೮೨, ಡಿ.ವಿ.ಕೆ. ಮೂರ್ತಿ, ಮೈಸೂರು.

೧೩. ಕೃಷ್ಣ ಪರಮೇಶ್ವರಭಟ್ಟ, ಕನ್ನಡ ಮತ್ತು ತೆಲುಗು ದ್ವಿಭಾಷಿಕತೆಯ ಅಧ್ಯಯನ, ೧೯೯೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೪. ಕೊಂಗವಾಡ ಎನ್.ಬಿ., ಶೈಕ್ಷಣಿಕ ಮನೋವಿಜ್ಞಾನ, ೧೯೯೭, ವಿದ್ಯಾನಿಧಿ ಪ್ರಕಾಶನ, ಗದಗ.

೧೫. ಕೆಂಪೆಗೌಡ ಕೆ., ಧನಿಮಾ ವಿಜ್ಞಾನ, ೧೯೮೦, ಭಾರತೀ ಪ್ರಕಾಶನ, ಮೈಸೂರು

೧೬. ಕೆಂಪೇಗೌಡ ಕೆ., ಕನ್ನಡ ಭಾಷಾ ಸ್ವರೂಪ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು.

೧೭. ಗೋಪಾಲಕೃಷ್ಣಯ್ಯ, ಭಾಷೆಯ ಬೆಳಕು, ೨೦೦೩, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೮. ಚಿದಾನಂದಮೂರ್ತಿ ಎಂ., ಭಾಷಾವಿಜ್ಞಾನದ ಮೂಲತತ್ವಗಳು, ೧೯೯೨, ಡಿ.ವಿ.ಕೆ, ಮೂರ್ತಿ ಪ್ರಕಾಶನ, ಮೈಸೂರು.

೧೯. ಚಿದಾನಂದಮೂರ್ತಿ ಎಂ., ವಾಗರ್ಥ, ೧೯೮೧, ಬಾಪ್ಕೋ ಪ್ರಕಾಶನ, ಬೆಂಗಳೂರು.

೨೦. ಜಯಣ್ಣ ಸಿ.ವಿ., ಆಧುನಿಕ ಶಿಕ್ಷಣದ ಒಲವುಗಳು, ೨೦೦೫, ಸ್ವಪ್ನ ಬುಕ್‌ಹೌಸ್, ಬೆಂಗಳೂರು.

೨೧. ಜಯಣ್ಣ ಸಿ.ವಿ., ಮನೋವಿಜ್ಞಾನದ ಬುನಾದಿಗಳು, ಕಲಿಕೆ ಮತ್ತು ಬೋಧನೆಯಲ್ಲಿ ಮನೋವಿಜ್ಞಾನ, ೨೦೦೫ ಸ್ವಪ್ನ ಬುಕ್‌ಹೌಸ್, ಬೆಂಗಳೂರು.

೨೨. ಜಯಣ್ಣ ಸಿ.ವಿ., ಮತ್ತು ರುದ್ರಾಣಿ ವಿ.ಸಿ., ಕನ್ನಡ ವಿಷಯಾಧಾರಿತ ಬೋಧನಾ ಪದ್ಧತಿ, ೨೦೦೬, ಸ್ವಪ್ನ ಬುಕ್‌ಹೌಸ್, ಬೆಂಗಳೂರು.

೨೩. ಡಿ.ಎಸ್.ಇ.ಆರ್.ಟಿ. ಕರ್ನಾಟಕ ಸರ್ಕಾರ, ಬೆಂಗಳೂರು, ೨೦೦೭, ಚೈತನ್ಯ ಭಾಗ-೧, ಭಾಗ-೨

೨೪. ಡಿ.ಎಸ್.ಇ.ಆರ್.ಟಿ. ಆಧುನಿಕ ಶಿಕ್ಷಣದ ಒಲುವುಗಳು, ೨೦೦೬, ವಿಜಯಲಕ್ಷ್ಮೀ ಪ್ರಕಾಶನ, ಮೈಸೂರು.

೨೫. ನಾಯಕ ಜೆ.ಪಿ.,ಕ ಶಿಕ್ಷಣ ಆಯೋಗ, ಪೂರ್ವೋತ್ತರ (ಕನ್ನಡಕ್ಕೆ ಅನುವಾದ) ಮಹಾಬಲೇಶ್ವರರಾವ್, ೧೯೮೭, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೨೬. ನಾರಾಯಣ ಕೆ.ವಿ., ಕನ್ನಡ ಶೈಲಿ ಕೈಪಿಡಿ, ೧೯೯೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೭. ನಾರಾಯಣ ಕೆ.ವಿ., ನಮ್ಮೊಡನೆ ನಮ್ಮ ನುಡಿ, ೨೦೦೫, ವಿಶ್ವಾಸ ಪ್ರಿಂಟ್ಸ್, ಬೆಂಗಳೂರು.

೨೮. ನಾರಾಯಣ ಕೆ.ವಿ., ದ್ವಿಭಾಷಿಕತೆ, ೧೯೯೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ನಾರಾಯಣ ಕೆ.ವಿ., ಭಾಷೆಯ ಸುತ್ತಮುತ್ತ, ೨೦೦೧, ಕ್ರೈಸ್ಟ್ ಕಾಲೇಜು, ಬೆಂಗಳೂರು.

೩೦. ನಾರಾಯಣ ಕೆ.ವಿ., ಮತ್ತೆ ಭಾಷೆಯ ಸುತ್ತಮುತ್ತ, ೨೦೦೧, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩೧. ನಾರಾಯಣ ಕೆ.ವಿ., ಭಾಷಾ ವಿಶ್ವಕೋಶ–೧, ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೨. ನಾರಾಯಣ ಕೆ.ವಿ., ಕನ್ನಡ ಜಗತ್ತು, ಅರ್ಧ ಶತಮಾನ, ೨೦೦೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೩. ನಾರಾಯಣ ಘಟ್ಟ ಎ.ಆರ್., ಶಿಕ್ಷಣ ಮಾಧ್ಯಮ ಸಮಗ್ರ ಚಿಂತನೆ, ೧೯೯೩, ಪ್ರಕಾಶಕರು, ಗೀತಾ ಕುಟೀರ, ಬೆಂಗಳೂರು.

೩೪. ದುರ್ಗಾದಾಸ ಆರ್.ಕೆ., ಬಳ್ಳಾರಿ ಜಿಲ್ಲೆಯ ಬಯಲಾಟಗಳು, ೧೯೬೬, ಸಮತಾ ಪ್ರಕಾಶನ, ಬೆಳಗಾವಿ.

೩೫. ಪುರುಷೋತ್ತಮ ಜಿ., ಕಲಿಕೆಯ ತೊಂದರೆಗಳು, ೧೯೯೯, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೬ ಪೇರೂರು ಜಾರು, ನಿಜಗನ್ನಡ, ೨೦೦೨, ದಿವ್ಯಚಂದ್ರ ಪ್ರಕಾಶನ.

೩೭. ಪ್ರಶಾಂತ ಎಚ್.ಡಿ., ಈಶಾನ್ಯ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಸಮಾಜ, ೨೦೦೫, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೮. ಪಾಂಡುರಂಗಬಾಬು ಡಿ., ನುಡಿನೋಟ, ೨೦೦೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೯. ಬರಗೂರು ರಾಮಚಂದ್ರಪ್ಪ, ಶಿಕ್ಷಣ ಮತ್ತು ಮಾಧ್ಯಮ ನೀತಿ ನಿರೂಪಣಾ ಮಾದರಿ, ೨೦೦೧, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು.

೪೦. ಬಿಳಿಗಿರಿ ಎಚ್.ಎಸ್. ವರ್ಣನಾತ್ಮಕ ವ್ಯಾಕರಣ, ೧೯೭೦, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೪೧. ಭಾಗ್ಯಲಕ್ಷ್ಮೀ ಎಂ., ಬಳ್ಳಾರಿ ಪರಿಸರದ ಕನ್ನಡ–ತೆಲುಗು ದ್ವಿಭಾಷಿಕತೆ ಸಮಾಜೋಭಾಷಿಕ ಅಧ್ಯಯನ, ೨೦೦೨, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೨. ಮಹಾದೇವಯ್ಯ ಪಿ., ಸಾಮಾಜಿಕ ಉಪಭಾಷೆ, ೧೯೯೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೩. ಮಹಾದೇವಯ್ಯ ಪಿ., ಮುಸ್ಲಿಂ ಕನ್ನಡ ಒಂದು ಸಾಮಾಜಿಕ ಭಾಷಾ ವೈಜ್ಞಾನಿಕ ಅಧ್ಯಯನ, ೧೯೯೯, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೪೪. ಮಹಾದೇವಯ್ಯ ಪಿ., ದಲಿತರ ಭಾಷೆ ಮತ್ತು ಸಮಾಜ, ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೫. ಮಹಾದೇವಯ್ಯ ಪಿ., ಕನ್ನಡ ಬಳಕೆ ಸಾಮಾಜಿಕ ವಿನ್ಯಾಸ, ೨೦೦೬, ವಿಜಯಲಕ್ಷ್ಮೀ ಪ್ರಕಾಶನ, ಮೈಸೂರು.

೪೬. ಮಹಾಬಲೇಶ್ವರರಾವ್, ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಬೋಧನೆ, ೧೯೯೩, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೪೭. ಮಹಾಬಲೇಶ್ವರರಾವ್, ಪ್ರಾಥಮಿಕ ಶಿಕ್ಷಣ ಸಮಸ್ಯೆಗಳು, ಸವಾಲುಗಳು, ೧೯೯೯, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೪೮. ಮಂಜುನಾಥ ಎಸ್., ಬಳ್ಳಾರಿ ನಗರದ ದ್ವಿಭಾಷಿಕತೆಯ ವೈವಿಧ್ಯತೆ, ೨೦೦೭, (ಅಪ್ರಕಟಿತ ಎಂ.ಫಿಲ್. ಸಂಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೯. ಯಾದವಾಡ ಎಸ್.ಬಿ., ಶಿಕ್ಷಣ, ೨೦೦೭, ವಿದ್ಯಾನಿಧಿ ಪ್ರಕಾಶನ, ಗದಗ.

೫೦. ಯಾದವಾಡ ಎಸ್.ಬಿ., ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ವಿದ್ಯಾನಿಧಿ ಪ್ರಕಾಶನ, ಗದಗ.

೫೧. ರಾಜಶೇಖರಯ್ಯ ಕೆ.ಎನ್., ಕಲಿಕಾ ಪ್ರಕ್ರಿಯೆಗಳು, ೨೦೦೭, ಚೇತನ್ ಬುಕ್‌ಹೌಸ್, ಮೈಸೂರು.

೫೨. ರಾಮಚಂದ್ರ ಸಿ.ಎಸ್., ಕನ್ನಡ ಭಾಷಾಲೋಚನ, ೨೦೦೪, ಮಾಂಗಿರಿ ಪ್ರಕಾಶನ, ಮೈಸೂರು.

೫೩. ರಾಜೇಶ್ವರಿ ಮಹೇಶ್ವರಯ್ಯ, ಆಧುನಿಕ ವರ್ಣನಾತ್ಮಕ ಭಾಷಾವಿಜ್ಞಾನ, ೨೦೦೩, ಸಮಾಜ ಪುಸ್ತಕಾಲಯ, ಧಾರವಾಡ.

೫೪. ರಹಮತ್ ತರೀಕೆರೆ, ಬಹುಭಾಷಿಕತೆ, ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೫. ಲಿಂಗದೇವರು ಹಳೆಮನೆ, ಕನ್ನಡ ಕಲಿ, ೨೦೦೩, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೬. ವಿಲ್ಯಂಮಾಡ್ತ, ಅನ್ಯಭಾಷಾಬೋಧ, ೧೯೭೬, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೭. ಶ್ರೀಧರ್ ಎಸ್.ಎನ್., ಇಂದಿನ ಕನ್ನಡ ರಚನೆ ಮತ್ತು ಬಳಕೆ, ೧೯೯೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೮. ಶಂಕರಭಟ್ಟ ಡಿ.ಎನ್., ಕನ್ನಡ ಬಾಷೆಯ ಕಲ್ಪಿತ ಚರಿತ್ರೆ, ೧೯೯೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೯. ಶಂಕರಭಟ್ಟ ಡಿ.ಎನ್., ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ೨೦೦೧, ಭಾಷಾ ಪ್ರಕಾಶನ, ಮೈಸೂರು.

೬೦. ಶಂಕರಭಟ್ಟ ಡಿ.ಎನ್., ಕನ್ನಡ ಬರಹವನ್ನು ಸರಿಪಡಿಸೋಣ, ೨೦೦೫, ಭಾಷಾ ಪ್ರಕಾಶನ, ಮೈಸೂರು.

೬೧. ಶಂಕರಭಟ್ಟ ಡಿ.ಎನ್., ಕನ್ನಡ ನುಡಿಯ ಬಗೆಗೆ ಚಿಂತನೆ, ೨೦೦೬, ಕನ್ನಡ ಮತ್ತು ಸಂಸ್ಕೃತ ಇಲಾಖೆ, ಬೆಂಗಳೂರು.

೬೨. ಶ್ರೀಕಂಠಯ್ಯ ತೀ.ನಂ., ಕನ್ನಡ ಮಧ್ಯಮ ವ್ಯಾಕರಣ, ೨೦೦೬, ಗೀತಾ ಬುಕ್ ಹೌಸ್, ಮೈಸೂರು.

೬೩. ಸುರೇಶ ಕೆ.ಎಂ., ಕಲಿಕೆ ಮತ್ತು ಬೋಧನೆಯ ಮನೋವಿಜ್ಞಾನ, ಸುಮುಖ ಪ್ರಕಾಶನ, ಬೆಂಗಳೂರು.

೬೪. ಸಂಗಮೇಶ ಸವದತ್ತಿಮಠ, ಭಾಷಾಲೇಖ, ೧೯೯೯, ರೂಪರಶ್ಮಿ ಪ್ರಕಾಶನ, ಗುಲಬರ್ಗಾ.

೬೫. ಸಂಗಮೇಶ ಸವದತ್ತಿಮಠ, ಕನ್ನಡ ಭಾಷಾ ಸ್ವರೂಪ, ೨೦೦೩, ರೂಪರಶ್ಮಿ ಪ್ರಕಾಶನ, ಗುಲಬರ್ಗಾ.

೬೬. ಸೋಮಶೇಖರಗೌಡ, ಇಂದಿನ ಕನ್ನಡ ಭಾಷಾ ಬಳಕೆ, ೧೯೮೧, ವೆಂಕಣ್ಣಯ್ಯ ಪ್ರತಿಷ್ಠಾನ, ಮೈಸೂರು.

೬೭. ಸಾಂಬಾಮೂರ್ತಿ, ಕನ್ನಡದಲ್ಲಿ ಪ್ರತ್ಯಯಗಳು, ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೮. ಸಾಂಬಾಮೂರ್ತಿ, ಭಾಷೆ ಮತ್ತು ಅಶಾಬ್ದಿಕ ಸಂವಹನ, ೨೦೦೪, ಸಿ.ವಿ.ಜಿ. ಪಬ್ಲಿಕೇಷನ್, ಮೈಸೂರು.

## ಪರಾಮರ್ಶಿಸಿರುವ ಲೇಖನಗಳು


೧. ಕರೂರ ಎನ್.ಜಿ., ೨೦೦೧, ಶಿಕ್ಷಣ ಮಾರ್ಗ, ಲೇ, ಪ್ರಾಥಮಿಕ ಶಿಕ್ಷಣ ಸಮಸ್ಯೆಗಳು ಪರಿಹಾರಗಳು, ಸ್ವಪ್ನ ಬುಕ್ ಹೌಸ್, ಬೆಂಗಳೂರು.

೨. ಕೇಶವ ಜಿ. ಝಿಂಗಾಡೆ, ೨೦೦೬, ಪ್ರಾಥಮಿಕ ಶಿಕ್ಷಣ ನಿರಾಶಾದಾಯಕ ಚಿತ್ರಣ, ಪ್ರಜಾವಾಣಿ, ಜನವರಿ ೨೦.

೩. ಗಣೇಶ ಜಿ.ಎಂ., ೨೦೦೮, ಕಲಿಕೆಯ ಮಾಧ್ಯಮ ಯಾವುದಿರಬೇಕು, ಪ್ರಜಾವಾಣಿ, ಜುಲೈ ೧೫.

೪. ನಾರಾಯಣ ಕೆ.ವಿ., ೨೦೦೧, ಕನ್ನಡ ಮುಂದೇನು? ಸುಧಾ ವಾರಪತ್ರಿಕೆ, ನವೆಂಬರ್ ಸಂಚಿಕೆ.

೫. ಪ್ರಶಾಂತ ಎಚ್.ಡಿ., ೨೦೦೬, ಶಾಲಾ ಶಿಕ್ಷಣ ಪರಿಣಾಮಕಾರಿ, ಬೋಧನಾ ಸಮಯ, ಪ್ರಜಾವಾಣಿ.

೬. ಬೇಂದ್ರೆ ಮಂಜುನಾಥ, ೨೦೦೮, ಕಾರ್ಡ್ ಬಳಸಿ ಓದಿಸುವ ಆಟ, ಪ್ರಜಾವಾಣಿ ಅಗಸ್ಟ್ ೨೬.

೭. ಮಹಾಬಲೇಶ್ವರರಾವ್, ೨೦೦೬, ಭಾಷೆ ಮತ್ತು ಮಾಧ್ಯಮ, ಹೊಸತು ಸಂಚಿಕೆ, ಏಪ್ರಿಲ್.

೮. ಮಹಾಬಲೇಶ್ವರರಾವ್, ೨೦೦೬, ಕಲಿಕೆಯ ಅನನ್ಯ ಶೈಲಿಗಳು, ಪ್ರಜಾವಾಣಿ, ಜೂನ್ ೬.

೯. ಮಹಾಬಲೇಶ್ವರರಾವ್, ೨೦೦೮, ಪರಿಣಾಮಕಾರಿ ಬೋಧನೆಗೊಂದು ಮೆಟ್ಟಿಲು ಸೂಕ್ಷ್ಮ ಬೋಧನೆ, ಪ್ರಜಾವಾಣಿ, ಆಗಸ್ಟ್, ೧೯.

೧೦. ರವೀಂದ್ರ ಎಂ., ೨೦೦೭, ಶಿಕ್ಷಣ ಮಾಧ್ಯಮವಾಗಿ ಕನ್ನಡ ಪ್ರಜಾವಾಣಿ ಫೆಬ್ರುವರಿ ೧೨.

೧೧. ವೀರಭದ್ರಶರ್ಮ ಕೆ.ಎಂ., ೧೯೭೬. ಬಳ್ಳಾರಿ ಜಿಲ್ಲೆಯ ಕನ್ನಡ ಕರ್ನಾಟಕ ಭಾರತಿ, ಸಂ.೯, ಸಂಚಿಕೆ–೧, ೨ ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

೧೨. ವಿಷ್ಣು ಎಂ. ಶಿಂಧೆ, ೨೦೦೯, ಪರಿಣಾಮಕಾರಿ ಬೋಧನೆಗೆ ಧ್ವನಿಯು ಮಹತ್ವ ವಿಜಯ ಕರ್ನಾಟಕ, ಜನವರಿ ೫,

೧೩. ಶಂಕರಭಟ್ಟ ಡಿ.ಎನ್., ೧೯೭೨, ಧ್ವನಿ ಪರಿವರ್ತನೆ ಮತ್ತು ವರ್ಣ ಪರಿವರ್ತನೆ, ಪ್ರಬುದ್ಧ ಕರ್ನಾಟಕ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೪. ಶಾರದಾ ಮಾನವಿಕರ್ ಶಿರಹಟ್ಟಿ, ೨೦೦೭, ಕಲಿಕಾ ಸಾಮರ್ಥ್ಯ ಹೆಚ್ಚಳ ಹೇಗೆ, ಸುಧಾ, ಜೂನ್, ೧೪.

೧೫. ಶೇಷಾದ್ರಿ ಬಿ. ಮತ್ತು ಟಿ.ಆರ್. ಚಂದ್ರಶೇಖರ್ (ಸಂ), ೧೯೯೮, ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ಸುಬ್ಬರಾವ್ ಕೆ.ಎನ್., ೨೦೦೭, ಕಲಿಸುವ, ಕಲಿಯುವ ಕಲೆ, ಕರ್ಮವೀರ, ಜೂನ್ ೧೭.

೧೭. ಸುಲೋಚನಾ ವೆಂಕಟೇಶ, ೨೦೦೯, ಬರವಣಿಗೆಯ ದೋಷ ಮತ್ತು ಪರಿಹಾರ ಕ್ರಮ, ಪ್ರಜಾವಾಣಿ, ಫೆಬ್ರುವರಿ ೧೦.

೧೮. ಸಂಗಮೇಶ ಸವದತ್ತಿಮಠ, ೧೯೭೬, ಕನ್ನಡ ಪ್ರಬೇಧಗಳು ನಿರ್ಮಾಣಕ್ಕೆ ಕಾರಣಗಳು, ಕರ್ನಾಟಕ ಭಾರತಿ, ಸಂ.೯, ಸಂ. ೧, ೨ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೯. ಹಂದೆ ಕೆ.ಆರ್., ೨೦೦೬, ಶಿಕ್ಷಣ ಸಂಚಯ, ಜೀವನ ದರ್ಶನ (ಲೇ), ಶಿಕ್ಷಣ ಸಮಸ್ಯೆಗಳು ಹಾಗೂ ಸವಾಲುಗಳು, ವಿದ್ಯಾಶ್ರೀ ಪಬ್ಲಿಕೇಷನ್ಸ್, ಅಂಬಲವಾಡಿ, ಉಡುಪಿ.

**ಪ್ರಸ್ತುತ ಅಧ್ಯಯನಕ್ಕಾಗಿ ಪರಾಮರ್ಶಿಸಲಾದ ಎಂ.ಫಿಲ್. ಸಂಪ್ರಬಂಧಗಳು:**

೧. ಓಂಪ್ರಕಾಶ ನಾಯಕ ಬಿ., ಬಳ್ಳಾರಿ ವ್ಯವಹಾರಿಕ ಕನ್ನಡದ ಉಚ್ಚಾರಣೆ, ಮತ್ತು ಧ್ವನಿ ನಿಯಮಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ (ಅಪ್ರಕಟಿತ ಎಂ.ಫಿಲ್. ಸಂಪ್ರಬಂಧ)

೨. ಮಂಜುನಾಥ ಎಸ್., ಬಳ್ಳಾರಿ ನಗರದ ದ್ವಿಭಾಷಿಕತೆಯ ವೈವಿಧ್ಯತೆ, ೨೦೦೭, (ಅಪ್ರಕಟಿತ ಎಂ.ಫಿಲ್. ಸಂಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಪ್ರಸ್ತುತ ಅಧ್ಯಯನಕ್ಕಾಗಿ ಪರಾಮರ್ಶಿಸಲಾದ ಪಿಎಚ್.ಡಿ. ಮಹಾಪ್ರಬಂಧಗಳು:**

೧. ಭಾಗ್ಯಲಕ್ಷ್ಮೀ ಎಂ., ಬಳ್ಳಾರಿ ಪರಿಸರದ ಕನ್ನಡ-ತೆಲುಗು ದ್ವಿಭಾಷಿಕತೆ ಸಮಾಜೋಭಾಷಿಕ ಅಧ್ಯಯನ, ೨೦೦೨, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಮಹಾದೇವಯ್ಯ ಪಿ., ಮುಸ್ಲಿಂ ಕನ್ನಡ ಒಂದು ಸಾಮಾಜಿಕ ಭಾಷಾ ವೈಜ್ಞಾನಿಕ ಅಧ್ಯಯನ, ೧೯೯೯, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೩. ಓಂಪ್ರಕಾಶ ನಾಯಕ ಬಿ., ಆದೋನಿ ಕನ್ನಡ ೨೦೦೭, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಭೀಮಣ್ಣ ಮೇಟಿ, ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು (ಉರ್ದು ಭಾಷಿಕ ಮಕ್ಕಳನ್ನು ಅನುಲಕ್ಷಿಸಿ) ೨೦೦೮, ಕನ್ನಡ ವಿಶ್ವವಿದ್ಯಾಲಯ, ಹಂಪಿ.

